॥ ಶ್ರೀ ಘನಮಠೇಶಾಯ ನಮಃ ॥

ಶ್ರೀ ವೈರಾಗ್ಯ ಚಕ್ರವರ್ತಿ ಘನಮಠ ಶಿವಯೋಗಿಗಳ
ಶತಮಾನೋತ್ಸವದ (೧೦೦) ಸ್ಮಾರಕ ಗ್ರಂಥ (೨)

ವೈರಾಗ್ಯ ಚಕ್ರವರ್ತಿ

# ಘನಮಠೇಶ


ಲೇಖಕರು :

ಶಿವಕವಿ ಅಮರನಾಥ ಶಾಸ್ತ್ರಿಗಳು ಗುರುವಿನಮಠ,

ಸಂತೆಕೆಲ್ಲೂರ.

ತಾ. ಲಿಂಗಸುಗೂರು] ● [ಜಿ. ರಾಯಚೂರು



೨೨—೧೨—೭೯ ಬೆಲೆ ೮ ರೂ.

॥ ಶ್ರೀ ಘನಮಠೇಶಾಯ ನಮಃ ॥

ಶ್ರೀ ವೈರಾಗ್ಯ ಚಕ್ರವರ್ತಿ ಘನಮಠ ಶಿವಯೋಗಿಗಳ
ಶತಮಾನೋತ್ಸವದ (೧೦೦) ಸ್ಮಾರಕ ಗ್ರಂಥ (೨)

## ವೈರಾಗ್ಯ ಚಕ್ರವರ್ತಿ

# ಘನಮಠೇಶ

ಲೇಖಕರು :
ಶಿವಕವಿ ಅಮರನಾಥ ಶಾಸ್ತ್ರಿಗಳು ಗುರುವಿನಮಠ,
ಸಂತೆಕೆಲ್ಲೂರ.

ತಾ. ಲಿಂಗಸುಗೂರು] ● [ಜಿ. ರಾಯಚೂರು

೨೨—೧೨—೭೯ ಬೆಲೆ ೮ ರೂ.

ಪ್ರಕಾಶಕರು:
ಶ್ರೀಮಾನ್ ಬಸವನಗೌಡರು ಮಾ|| ಪಾಟೀಲ
ಮುಸಲಿಕಾರಲಕುಂಟಿ (ಮಸ್ಕಿ)

ಶ್ರೀ ಬಸವರಾಜ ಪಾಟೀಲ M.Sc. (Agri) ಹಿರೇಯರದಿಹಾಳ
ಅಗ್ರಿಕಲ್ಚರ ಕಾಲೇಜ, ಧಾರವಾಡ

卐

ಪ್ರಥಮ ಮುದ್ರಣ ೧೯೫೫, ೧೦೦೦ ಪ್ರತಿಗಳು
ದ್ವಿತಿಯ ಮುದ್ರಣ ೧೯೭೯, ೧೦೦೦ ಪ್ರತಿಗಳು


卐

ಮುದ್ರಕರು—
ಶ್ರೀ ವ್ಹಿ. ಎಸ್. ಗಾರವಾಡಮಠ
ಶ್ರೀ ಶಿವಶಕ್ತಿ ಪ್ರಿಂಟಿಂಗ ಪ್ರೆಸ್, ಬಾಗಲಕೋಟ.

॥ ಶ್ರೀಗುರು ವಿಜಯಮಹಾಂತೇಶ್ವರ ಪ್ರಸನ್ನ ॥



ಶ್ರೀಮದ್ ವೈರಾಗ್ಯನಿಧಿ ವೈರಾಗ್ಯ ಚಕ್ರವರ್ತಿ ವೀರ ವಿರಾಗಿ ನೂತನಲ್ಲಮ ಇತ್ಯಾದಿ ಪುಣ್ಯ ವಾಚಕ ಶಬ್ದಗಳಿಂದ ಕರ್ನಾಟಕದ ನಾನಾ ದಿಶೆಗಳಲ್ಲಿ ಪ್ರಖ್ಯಾತರಾದ ಲಿಂ। ಘನ ಮಠದ ನಾಗಭೂಷಣ ಶಿವಯೋಗಿಗಳ ಶತಮಾನೋತ್ಸವದ ಶುಭ ಸಂದರ್ಭದಲ್ಲಿ ಈ ಹಿಂದೆ ಪ್ರಿಂಟಾಗಿ ಪುನಃ ದ್ವಿತೀಯ ಆವೃತ್ತಿಯಾಗಿ ಹೊರಬೀಳಲಿರುವ ವೈರಾಗ್ಯ ಚಕ್ರವರ್ತಿ ಘನಮಠೇಶ ಈ ಗ್ರಂಥವು ಶ್ರೀ ಮ. ನಿ ಪ್ರ. ಶಿವಾನುಭವ ಚರವರ್ಯ ಮಹಾಂತ ಸ್ವಾಮಿಗಳವರು ಚಿತ್ತರಗಿ ಇಲಕಲ್ಲ ಸಂಸ್ಥಾನಮಠದೊಡೆಯರು ಇವರ ಅಮೃತ ಹಸ್ತದಿಂದ ಬಿಡುಗಡೆಯಾಗಿರುತ್ತದೆ.

—ಪ್ರಕಾಶಕರು

# ಪ್ರಕಾಶಕರ ನುಡಿ

ಶ್ರೀ ಶಿವಕವಿ ಅಮರನಾಥ ಶಾಸ್ತ್ರಿ ಮುಸಲಿಕಾರಲಕುಂಟಿ ಸಂತೆ. ಕೆಲೂರ ಇವರು ಬರೆದ ವೈರಾಗ್ಯ ಚಕ್ರವರ್ತಿ ಘನಮಠೇಶ ಎಂಬ ಗ್ರಂಥವನ್ನು ಓದಿ ನನಗೆ ಬಹಳ ಸಂತೋಷವಾಯಿತು. ಶ್ರೀಮದ್ ವೈರಾಗ್ಯ ನಿಧಿ ನೂತನಲ್ಲಮ ವೀರವಿರಾಗಿ ಇತ್ಯಾದಿ ಪುಣ್ಯ ವಾಚಕ ಶಬ್ದಗಳಿಂದ ಕರ್ನಾಟಕದ ನಾನಾ ಪ್ರದೇಶಗಳಲ್ಲಿ ಪ್ರಖ್ಯಾತರಾದ ಲಿಂ| ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳ ಜೀವನ ಚರಿತ್ರೆ, ಶ್ರದ್ಧೆ ಕಾಯಕ ಮತ್ತು ಅವರು ತೋರಿಸಿದ ಮಾರ್ಗ ಈ ಗ್ರಂಥದಲ್ಲಿ ಅವರ ಭಕ್ತವೃಂದಕ್ಕೆ ತೋರಿಸಲಾಗಿದೆ.

ಇಂತಹ ಉತ್ತಮ ಗ್ರಂಥದ ಅರಿವು ಜನಸಾಮಾನ್ಯಕ್ಕೂ ದೊರೆತು ಎಲ್ಲರೂ ಕೃತಾರ್ಥರಾಗಲಿ ಎಂಬ ಘನವಾದ ಉದ್ದೇಶದಿಂದ ಈ ಗ್ರಂಥವನ್ನು ಜನರ ಶ್ರೇಯಸ್ಸಿಗೋಸ್ಕರ ಇದನ್ನು ಪ್ರಕಟಿಸಲಾಗಿದೆ. ಆ ಮಹಾನುಭಾವರಲ್ಲಿ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಿ ಅವರ ಉದ್ದೇಶವು ನೆರವೇರುವಂತಾಗಲೆಂದು ಜಗನ್ಮಾತೆಯ ಅಡಿದಾವರೆಗಳಲ್ಲಿ ಪ್ರಾರ್ಥಿಸುತ್ತಿರುತ್ತೇನೆ.

ಅಗ್ರಿಕಲ್ಚರ ಕಾಲೇಜ
ಧಾರವಾಡ

ಬಸವರಾಜ ಪಾಟೀಲ M.Sc. (Agri)
ಹಿರೇಯರದಿಹಾಳ.



ಶ್ರೀಮಾನ್ ಬಸವನಗೌಡಪ್ರ ಮಾ|| ಪಾಟೀಲ
ಮುಸಲಿಕಾರಲಕುಂಟಿ (ಮುಸ್ಕಿ)



ಶ್ರೀ ಬಸವರಾಜ ಪಾಟೀಲ M. Sc. (Agri)
ಹಿರೇಯರದಿಹಾಳ.

॥ ಶ್ರೀ ಘನಮಠೇಶಾಯ ನಮಃ ॥



ಶಿವಕವಿ ಅಮರನಾಥ ಶಾಸ್ತ್ರಿಗಳು ಗುರುವಿನಮಠ

ಸಂತೆಕೆಲ್ಲೂರ

ಜಿ ರಾಯಚೂರ ] [ ತಾ. ಲಿಂಗಸುಗೂರ

# ಅ ರ್ಪ ಣೆ

ವೈರಾಗ್ಯ ನಿಧಿಯುವನು। ವೀರತಪಸಿಯು ತಾನು।
ಮಾರ ಹರಮಠದ। ಸೇವೆಯನು ಗೈಯುತ್ತ।
ಧಾರುಣಿಯ ಚರಿಸಿ ಘನಮಠ [೧]

ಅಂತ್ಯಕ್ಕೆ ಕೆಲವೂರ। ಸಂತಸದ್ಭಕ್ತರಾ।
ಆಂತರ್ಯಕೊಲಿದು। ನಿಂತ ಶಿವಯೋಗಿ ವರ।
ಶಾಂತ ಘನಮಠ [೨]

ಅವನಿಯೊಳು ಶಿವಯೋಗಿ। ವಚನಮಾಲಿಕೆಯಿಂದನು।
ತವಕದಿಂದರ್ಪಿಸುವೆ। ಶಿವಯೋಗಿ ಸ್ವಾಮಿಗಳ।
ದಿವ್ಯ ಚರಣಕ್ಕೆ ಘನಮಠ [೩]

ಗ್ರಂಥಕರ್ತ :
ಅ. ಶ. ಗುರುವಿನಮಠ

# ಲೇಖಕರ ಆತ್ಮನಿವೇದನೆ



**ಪ್ರಥಮ ಆವೃತ್ತಿ:-**

ಗುರುಗಳ ಮನೆತನಕ್ಕೆ ಮೊದಲಿನಿಂದಲೂ ನಾನಾ ಮುಖವಾಗಿ ಸಹಾಯ ಸಲ್ಲಿಸುತ್ತಾ, ಕೀರ್ತಿವೆತ್ತ ನಮ್ಮ ಶಿಷ್ಯರಲ್ಲಿ ಪ್ರಮುಖರೆಂದರೆ ಮುಸಲಿಕಾರಲಕುಂಟೆ ಮಾ|| ಪಾ|| ಬಸವನಗೌಡರು ಮತ್ತು ಇದೇ ವಂಶಸ್ಥರೂ, ಸದ್ಯಃ ಮುದ್ದೇಬಿಹಾಳ ತಾಲೂಕ, ಸಾಲವಾಡಗಿ ಗ್ರಾಮದಲ್ಲಿ ಸಕಲವಿಧ ಸಂಪತ್ತುಳ್ಳವರೂ, ಸಮಾಜದ ಸಕಲ ಕಾರ್ಯಗಳಲ್ಲಿ ಆಸಕ್ತಿಯುಳ್ಳವರೂ, ಸಮಾಜದ ಮುಂದಾಳುಗಳೂ, ಗುರುಗಳಲ್ಲಿ ಅಸಾಧಾರಣ ಶ್ರದ್ಧೆಯುಳ್ಳವರೂ ಆದ ಶ್ರೀಯುತ ನಾನಾಗೌಡರು ಗುರುನಾಥಪ್ಪಗೌಡರು ಪಾಟೀಲ, ಕಾರಲಕುಂಟೆ ಮತ್ತು ಸಿಂದಗಿ ತಾಲೂಕ ಬಿಂಜಲಭಾವಿ ಗ್ರಾಮದ ವೀರಪ್ಪನವರು ರುದ್ರಪ್ಪನವರು ನಾಡಗೌಡ ಈ ಮೂವರು ಪ್ರಮುಖರ ಉದಾರ ಸಹಾಯದಿಂದಲೇ ನನ್ನೀ ಕೃತಿಯು ವೀರವಿರಾಗೀ ಘನಮಠೇಶ ಎಂಬ ನಾಮವನ್ನು ಧರಿಸಿ ನಾನಾ ದಿಶೆಗಳಲ್ಲಿ ಪ್ರಕಾಶಿಸಲಿಕ್ಕೆ ಕಾರಣವಾಯಿತು. ಪೂರ್ವದಿಂದಲೂ ಗುರುಗಳ ಮನೆತನಕ್ಕೆ ಭೂದಾನ, ಗೃಹದಾನಗಳೆಂಬ ಮಹಾ ದಾನಗಳನ್ನು ಮಾಡಿ ಸಕಲ ವಿಧದಿಂದಲೂ ಸಹಾಯ ಸಲ್ಲಿಸುತ್ತ ಬಂದ ಮಹನೀಯರೆಂದರೆ

ಬಸವನಗೌಡರು ಮಾ|| ಪಾ|| ಮುಸಲಿಕಾರಲಕುಂಟೆ
ಅಯ್ಯಪ್ಪಗೌಡರು ಮತ್ತು ಗುರುನಾಥಪ್ಪಗೌಡರು ಪಾ|| ಕಾರಲಕುಂಟೆ
ಮುಕ್ಕಾಂ ಸಾಲವಾಡಗಿ (ತಾ|| ಮುದ್ದೇಬಿಹಾಳ)
ಮುದ್ದನಗೌಡರು ಕುಲಕರ್ಣಿ ಮತ್ತು ಲಿಂಗನಗೌಡರು ಮಾ|| ಪಾ||
ಜಮಾಪುರ (ತಾ.ಗಂಗಾವತಿ ಜಿ.ರಾಯಚೂರ)
ವೀರಪ್ಪನವರು ಮತ್ತು ಸಂಗಪ್ಪನವರು ನಾಡಗೌಡ ಬಿಂಜಲಭಾವಿ.
(ತಾ. ಸಿಂದಗಿ ಜಿ. ವಿಜಾಪೂರ)

ಬೋಳರಡ್ಡಿಗೌಡ್ರು ಮಾ॥ ಪಾ॥ ಸಂತೀಕೆಲೂರ
(ತಾ. ಲಿಂಗಸೂಗೂರ)

ತಂಗಣ್ಣಗೌಡ್ರು ಬಿರಾದಾರ ಮಾ॥ ಪಾ ಮುಸಲಿಕಾರಲಕುಂಟಿ
(ತಾ. ಲಿಂಗಸೂಗೂರ)

ಅಮರೇಗೌಡ್ರು ಮತ್ತು ಭೀಮನಗೌಡ್ರು ಪಾಟೀಲ ಡಬ್ಬೇರಮಡು
ಕುಣಿಕೆಲೂರ (ತಾ. ಲಿಂಗಸೂಗರ)

ಮೇಲಿನ ಮಹನೀಯರು ನಮ್ಮ ಮನೆತನಕ್ಕೆ ತಮ್ಮ ತ್ರಿಕರಣ ಪೂರ್ವಕ ಸಹಾಯ ಸಲ್ಲಿಸುತ್ತಾ ಬಂದಿದ್ದರೂ ತಮ್ಮ ಗುರುಗಳು ಶ್ರೀ ಘನ ಮಠೇಶರ ಜೀವನ ಚರಿತ್ರೆಯನ್ನು ಬರೆಯುವರೆಂಬ ವಿಷಯ ತಿಳಿದಾಕ್ಷಣವೇ ತಮ್ಮ ಉದಾರ ದೇಣಿಗೆಯನ್ನು ಕೊಟ್ಟು ಪುಣ್ಯ ಪುರುಷರ ಚರಿತ್ರೆಯನ್ನು ಸಮಾಜದಲ್ಲಿ ಪ್ರಕಾಶ ಪಡಿಸಿದ ಕೀರ್ತಿ ಈ ಗ್ರಂಥ ಪ್ರಕಾಶಕರಾದ **ಎನ್. ಜಿ. ಪಾಟೀಲ** ರದೆಂದು ಹೇಳಲು ನಮಗೆ ಆನಂದವೆನಿಸುತ್ತದೆ.

**ದ್ವಿತಿಯಾವೃತ್ತಿ**

ಶ್ರೀ ವೀರವಿರಾಗಿ ಘನಮಠೇಶ ಅರ್ಥಾತ್ ನಾಗಭೂಷಣ ಶಿವಯೋಗಿಗಳ ಮಹಿಮಾಮೃತದ ಪ್ರಥಮ ಮುದ್ರಣವನ್ನು ೨೦-೨-೧೯೫೫ ರಲ್ಲಿ ಶ್ರೀಮಾನ್ ಎನ್. ಜಿ. ಪಾಟೀಲ ಮುಸಲಿಕಾರಲಕುಂಟಿ ಸಾ॥ ಬಿ. ಸಾಲವಾಡಗಿ ತಾ॥ ಮುದ್ದೇಬಿಹಾಳ ಇವರು ಶಿವಯೋಗಿಗಳು ಬಿಜಾಪೂರ ಜಿಲ್ಲೆಯ ಎಲ್ಲಾ ಹಳ್ಳಿ ಪಟ್ಟಣಗಳನ್ನು ಸಂಚರಿಸಿ ಅಲ್ಲಲ್ಲಿ ಅವರು ಪೂಜಾ ಅನುಷ್ಠಾನ ಮಾಡಿದ ಸ್ಥಳಗಳಲ್ಲಿ ಘನಮಠೇಶರ ಚಾಕಿಗಳೆಂಬು ಇಂದಿಗೂ ಪ್ರಸಿದ್ಧವಾಗಿವೆ. ಆ ನಾಡಿನ ಜನರು ಪ್ರತಿ ವರ್ಷವೂ ಸಂತೆಕೆಲೂರಿಗೆ ಬಂದು, ಶಿವಯೋಗಿಗಳ ಸನ್ನಿಧಿಯಲ್ಲಿ ಕತ್ತು ಗದ್ದುಗೆಗೆ ರುದ್ರಾಭಿಷೇಕ ಮೊದಲಾದ ಪೂಜೆ ಮಾಡಿಸಿ ಗಣಾರಾಧನೆಮಾಡಿ ಹೋಗುತ್ತಿದ್ದಾರೆ. ಕನ್ನಡ

ನಾಡಿನ ಮುಖ್ಯ ಜಿಲ್ಲೆಗಳಾದ ಧಾರವಾಡ, ಬಳ್ಳಾರಿ, ರಾಯಚೂರ, ಬಿಜಾ
ಪೂರ ಈ ನಾಲ್ಕು ಜಿಲ್ಲೆಗಳಲ್ಲಿ ಶಿವಯೋಗಿಗಳು ಸಂಚಾರ ಮಾಡಿದ್ದರೂ
ಬಿಜಾಪೂರ ರಾಯಚೂರ ಈ ಎರಡೂ ಜಿಲ್ಲೆಗಳಲ್ಲಿಯೇ ಅವರು ಮಾಡಿದ
ಅನಂತ ಪವಾಡ ಕೃತಿಯ ಸ್ಮಾರಕಗಳು ಇಂದಿಗೂ ಅಚ್ಚಳಿಯದಂತೆ
ನಿಚ್ಚಳವಾಗಿರುವವು.

ವೈರಾಗ್ಯ ಚಕ್ರವರ್ತಿ ಘನಮಠೇಶ ಎಂಬ ನೂತನ ನಾಮದಿಂದ
ದ್ವಿತಿಯಾವೃತ್ತಿಯ ಪ್ರಕಾಶನದ ಕಾರ್ಯವನ್ನು ಆನಂದದಿಂದ ಮುದ್ರಣ
ಮಾಡಿಸಲು ಮುಂದಾದ ಅದೇ ಸಾಲವಾಡಗಿಯ ನಾನಾ ಗೌಡರ ವಂಶಜರು,
ಮುಸ್ಲಿ ಕಾರ್ಲಕುಂಟೆಯ ಮಾಲೀ ಪಾಟೀಲರು ಆದ ಶ್ರೀ ವೀರನಗೌಡರು,
ಶ್ರೀ ಬಸನಗೌಡರು ಮತ್ತು ಅವರ ಬಂಧುಗಳಾದ ಶ್ರೀಮಾನ್ ಬಸವರಾಜಪ್ಪ
ಗೌಡರು ಪೊ॥ ಪಾಟೀಲ ಆನ್ವರಿ M. L. A. ಲಿಂಗಸೂಗೂರ ತಾಲೂಕ
ಹಾಗೂ ಕೂಡಲ ಸಂಗಮನಾಥ ಕ್ಷೇತ್ರ ಗುಡಗುಂಟಿ ಶ್ರೀ ಅಮರೇಶ್ವರ
ಕ್ಷೇತ್ರ ಶ್ರೀಶೈಲ ಕ್ಷೇತ್ರಗಳಲ್ಲಿ ಧರ್ಮ ಛತ್ರಗಳನ್ನು ಕಟ್ಟಿಸಿದ ಹಿರೇಮರದಿ
ಹಾಳ ಮಾಲಿಪಾಟೀಲ ಶ್ರೀ ವೀರನಗೌಡರು ಸಹಾಯಸಲ್ಲಿಸಿ ಶ್ರೀ ಘನಮಠ
ಶಿವಯೋಗಿಗಳ ಅಂಕಿತದಿಂದ ಬರೆಯಲ್ಪಟ್ಟ "ಘನಮಠೇಶ ವಚನ" ವೆಂಬ
ತ್ರಿಪದಿ ಗ್ರಂಥಗಳನ್ನು ಅಧಿಕ ಹಣವನ್ನು ವ್ಯಯಮಾಡಿ ಸುಂದರವಾಗಿ
ಬಾಗಲಕೋಟೆಯ ಶ್ರೀ ಶಿವಶಕ್ತಿ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಣ
ಮಾಡಿಸಿ ಶಿವಯೋಗಿಗಳ ಮನಃಪೂರ್ವಕವಾಗಿ ಸೇವೆಯನ್ನು ಸಲ್ಲಿಸಿದ್ದಾರೆ.
ಅವರೆಲ್ಲರಿಗೂ, ಪ್ರೆಸ್ಸಿನ ಒಡೆಯರಿಗೂ ಆಯುರಾರೋಗ್ಯ ಭಾಗ್ಯಾದಿಗಳನ್ನಿತ್ತು
ಕಾಪಾಡಲೆಂದು ಶಿವಯೋಗಿಯನ್ನು ಪ್ರಾರ್ಥಿಸುವ—

೨೨—೧೨—೭೯ ( ಗ್ರಂಥ ಕರ್ತರು )

## .... ಕೃತಜ್ಞತೆ ....

ಘನಮಠೇಶರು ವಿಶ್ವದಲ್ಲೆಲ್ಲಾ ತಮ್ಮ ತಪಃಸಾಮರ್ಥ್ಯದಿಂದ ಅನಂತ ಅಮಾನುಷ ಕೃತಿಗಳನ್ನೆಸಗಿ ಅಂತ್ಯಕ್ಕೆ ನಮ್ಮಗಳ ಪುಣ್ಯ ವಿಶೇಷ ದಿಂದ ನಮ್ಮ ಸಂತೆಕೆಲ್ಲೂರ ಗ್ರಾಮದಲ್ಲಿ ಅವರು ಶಿವಾಧೀನರಾಗಿ ೭೫ ವರುಷಗಳಾಗಿ ಅವರ ಅಗಾಧ ಕೃತಿಗಳು ಅನಂತವಿದ್ದರೂ ಸಮಾ ಜಕ್ಕೆ ತಿಳಿಯಲು ಇಲ್ಲಿಯವರೆಗೆ ಯಾರು ಪ್ರಯತ್ನಿಸಿರಲಿಲ್ಲ. ಮುಸ್ಕಿ ಪಂಡಿತ ಬಸವಪ್ಪ ಶಾಸ್ತ್ರಿಗಳೊಬ್ಬರು ಮಾತ್ರ ವಾರ್ಧಿಕ ಷಟ್ಪದಿಯಲ್ಲಿ ಘನಮಠಾರ್ಯರ ಪುರಾಣವನ್ನು ಬರೆದು ತಮ್ಮ ಸಾರ್ಥಕತೆಯನ್ನು ತಾವು ಮಾಡಿಕೊಂಡಾಗ್ಯೂ ಪುರಾಣದಿಂದ ಸಮಾಜದಲ್ಲಿ ಅವರ ಮಹಿಮೆ ಗಳು ಪ್ರಕಟವಾಗದೆ ಪೂಜ್ಯನೀಯ ಪುಸ್ತಕಗಳಾಗಿ ಪುರಾಣಗಳು ಜಗಲಿ ಯನ್ನೇರಿದವು. ಅದಕ್ಕಾಗಿ ನನ್ನ ಅಳಿಯಂದಿರಾದ ವೇದಮೂರ್ತಿ ಅಮರನಾಥ ಶಂಕರಾರ್ಯ ಗುರುವಿನಮಠ ಇವರು ನಮ್ಮೆಲ್ಲರ ಆಗ್ರಹದ ಮೇರೆಗೆ ೧ ವರ್ಷ ದಿಂದ ಕಷ್ಟಪಟ್ಟು ಶಿವಯೋಗಿಗಳ ಸಾದ್ಯಾಂತ ಮಹಿಮೆಗಳನ್ನೊಳಗೊಂಡ ವೀರ ವಿರಾಗೀ ಘನಮಠೇಶ ಎಂಬ ಚರಿತ್ರೆಯನ್ನು ಸರಳ ಭಾಷೆಯಲ್ಲಿ ಸರ್ವರಿಗೂ ಅರ್ಥವಾಗುವಂತೆ ಬರೆದು ಶೀಘ್ರವಾಗಿ ಸಮಾಜಕ್ಕೆ ಸಲ್ಲಿಸಿದ್ದು ಮಹದುಪಕಾರವಾಗಿದೆ.

ವೇ॥ ಗುರಪ್ಪಯ್ಯ ಶಾಸ್ತ್ರಿಗಳು ಶಾಸ್ತ್ರಿಮಠ
ಮುಸ್ಕಿ ಕಾರಲಕುಂಟೆ

ಶ್ರೀ ವೀರವಿರಾಗಿ ಘನಮಠೇಶ ವಚನ (ತ್ರಿಪದಿ) ಮತ್ತು
ವೈರಾಗ್ಯ ಚಕ್ರವರ್ತಿ ಘನಮಠೇಶ (ಗದ್ಯ)
ಇವೆರಡು ಗ್ರಂಥಗಳ ಮುದ್ರಣಕ್ಕಾಗಿ

## ಸಹಾಯ ಸಲ್ಲಿಸಿದ ಮಹನಿಯರು

| ರೂ. ಪೈ. | |
|---|---|
| ೧೦೧=೦೦ | ಶ್ರೀ ಬಸವರಾಜಪ್ಪನವರು ಅಂಕಲಗಿ ಶಾಖಾನಿರುಪಾದಿಮಠ ಮು॥ ತಲಿಕಟ್ಟು |
| ೨೫=೦೦ | ವೇ। ಸಂಗಯ್ಯನವರು ಹಿರೇಮಠ ನಂದಾಪೂರ (ಸಿದ್ದಾಪೂರ) |
| ೫೦=೦೦ | ವೇ॥ ಬಸಲಿಂಗಯ್ಯನವರು ಹಿರೇಮಠ ಮುಳ್ಳೂರ |
| ೭೫=೦೦ | ನಾಗಣ್ಣನವರು ಕಾರಿಗನೂರ ಮುಳ್ಳೂರ |
| ೫೦=೦೦ | ಶ್ರೀ ಚಂದ್ರಪ್ಪನವರು ಸಾಹು. ಕೆಸರಟ್ಟಿ ಕೆ. ಹೊಸಳ್ಳಿ |
| ೫೦=೦೦ | ಶ್ರೀ ವಿರುಪಾಕ್ಷಗೌಡರು ಪೋ. ಪಾಟೀಲ ಮಲಟ |
| ೧೦೧=೦೦ | ಶ್ರೀ ಲಿಂಗಣ್ಣನವರು ಸಾಹು. ಕನಕಗಿರಿ ಸಾ॥ ಮುಳ್ಳಿ |
| ೫೧=೦೦ | ಕುರಕುಂದಿ ಬಸಾಪೂರ ಹನಮಂತ |
| ೫೧=೨೦ | ಶ್ರೀ ಎಮ್. ವ್ಹಿ. ಮುದ್ದಯ್ಯ ಟ್ಯಾಕ್ಸ ಪ್ರ್ಯಾಕ್ಟೀಸನರ |
| ೧೦೧=೨೦ | ,, ಶಿದ್ಧನಗೌಡ್ರ ವಿ. ಮಾ. ಪಾಟೀಲ ಹಿರೇಯಾಠದಿಹಾಳ |

ಇದಲ್ಲದೆ ನಮ್ಮ ಮನೆತನದ ಮೂಲ ಶಿಷ್ಯರುಗಳು ತಮ್ಮ ತಮ್ಮ ಶಕ್ತ್ಯಾನುಸಾರ ಸಹಾಯ ಸಲ್ಲಿಸಿದ್ದಾರೆ. ಇವರಿಗೆಲ್ಲ ಶ್ರೀ ಘನಮಠ ಶಿವಯೋಗಿಯು ಆಯುರಾರೋಗ್ಯ ಭಾಗ್ಯಾದಿಗಳನ್ನೀಯಲೆಂದು ಪ್ರಾರ್ಥಿಸುವ-

ತಾ॥ ೨೨-೧೨-೭೯ —ಗ್ರಂಥಕರ್ತರು

## .... ಅನುಕ್ರಮಣಿಕೆ ....

### ೧ ನೆಯ ಪ್ರಕರಣ



### ೨ ನೆಯ ಪ್ರಕರಣ



### ೩ ನೆಯ ಪ್ರಕರಣ



### ೪ ನೆಯ ಪ್ರಕರಣ



### ೫ ನೆಯ ಪ್ರಕರಣ

॥ ಶ್ರೀ ಗುರುವೇ ನಮಃ ॥

ನವಯುಗ ಕವಿ ಕಾಳಿದಾಸ ಇತ್ಯಾದಿ ಬಿರುದಾಂಕಿತ ವೇ॥ ಪಂ॥ ಷಡಕ್ಷರಕರ ಕವಿಗಳು ಗುಂಜಿಹಳ್ಳಿ ತುರ್ವಿಹಾಳಮಠೀಯ ಇವರಿಂದ ರಚಿಸಲ್ಪಟ್ಟ

(ಘನಮಠೇಶ್ವರಾಷ್ಟಕಂ)

ಕಂದ ಶ್ರೀ ಮದ್ವೈರಾಗ್ಯಮಹೋ ।
ದ್ಧಾಮ ಪ್ರಭುವರ್ಯ ಸರಸವಾಙ್ಮಯ ಕವಿತಾ ॥
ರಾಮ ಪ್ರಮಥ ಗುಣೋಣ್ಮಣಿ ।
ಧಾಮ ಶ್ರೀ ಘನಮಠಾರ್ಯ ಜಯಯತಿವರ್ಯ ॥೧॥

ವಚನಾನುರಾಗಿ ಸುಜನ ।
ಪ್ರಚಯ ಮನೋಗತವರ ಪ್ರದಾತ್ಮ ಸುಶೀಲ ॥
ಪ್ರಚಲಿತ ಮಾಯಾಹರಸ ।
ದ್ವಚನ ಶ್ರೀ ಘನಮಠಾರ್ಯ ಜಯಯತಿವರ್ಯ ॥೨॥

ನಮದಮಲಾ ಪಾಂಗಶ್ರೀ ।
ವಿಮಲಚರಿತ್ರಾಘನಿರುಪಮಾತ್ಮ ಕಧೀರ ॥
ಭ್ರಮಹರ ಖಲಜನತಿಮಿರ ।
ದ್ಯುಮಣಿ ಶ್ರೀ ಘನಮಠಾರ್ಯ ಜಯಯತಿವರ್ಯ ॥೩॥

ನುತವೀರಶೈವ ಜನತಾ ।
ಮಿತ ಮಮತಾನಂದಕರ ವಿರಾಜಿತ ಸುಕವಿ ॥
ಪ್ರತತಿವನ ಮಧೂಪಮಸ ।
ನ್ಮತಿಮಚ್ಛ್ರೀ ಘನಮಠಾರ್ಯ ಜಯಯತಿವರ್ಯ ॥೪॥

ಶಿವಭಕ್ತಿ ಮಾರ್ಗ ಬೋಧಕ ।
ಸುವಿರತಿಹೃದ್ಭೀತಿಕರ ಶಿವಾಚಾರಪರೋ ।
ತ್ಸವದವಿದಿತಾಭವಾಗವು ।
ನಿವಹ ಶ್ರೀ ಘನಮಠಾರ್ಯ ಜಯಯತಿವರ್ಯ ॥೫॥

ವರನಿಜಚರಣ ಸ್ಪರ್ಶನ ।
ಧರಣಿ ಪ್ರಪವಿತ್ರಕರ ಶುಭೋದಯಮಹಿಮಾ ॥
ಕರಮಂಗಲ ಕರನಿರ್ಜಿತ ।
ಕರಣ ಶ್ರೀ ಘನಮಠಾರ್ಯ ಜಯಯತಿವರ್ಯ ॥೬॥

ಸತತಂಬ್ರಹ್ಮಾನಂದಪ್ರ ।
ಥಿತಪ್ರಮಥಾನುಕೂಲ ನಿಶ್ಚಲಲೀಲಾ ॥
ನ್ವಿತ ಸುಕಲಾಭಿಜ್ಞ ಮಹೋ ।
ನ್ನತಸಚ್ಛ್ರೀ ಘನಮಠಾರ್ಯ ಜಯಯತಿವರ್ಯ ॥೭॥

ಜನಸಂಘಸಂಗದೂರ ।
ಪ್ರಣಿಧಾನಪ್ರಮಥ ತುಂಗಜನನಮೃತಿಭಯ ॥
ಸ್ತನಯಿತ್ನುಪ್ರಬಲಾನಿಲ ।
ವಿನುತ ಶ್ರೀ ಘನಮಠಾರ್ಯ ಜಯಯತಿವರ್ಯ ॥೮॥

ವೃತ್ತ ಶ್ರೀಮದನುಪಮ । ಘನಮಠೇಶ್ವರ ।
ನಾಮಕಸ್ಯಾಷ್ಟಕಮಿದಂಭುವಿ ।
ಪ್ರೇಮಾಭಾವನಪೂರ್ವಕಂಯಃ ಪಠತಿಸಪ್ರಥಿತಂ ॥

ಸೋಮಧರಲೋಕಂಭಜತ್ಯದಿ ।
ಧಾಮಶಂಭುಕೃಪೇಕ್ಷಣೇನಸ ।
ದಾಮಹಿತಷಡ್ವರ್ಣ ಕವಿನಾವಿರಚಿತಂಶುಭದಂ ॥೯॥



ಶ್ರೀ ಗುರು ವೈರಾಗ್ಯ ಚಕ್ರವರ್ತಿ
ಘನಮಠದ
**ಶ್ರೀ ನಾಗಭೂಷಣ**
**ಶಿವಯೋಗಿಗಳು**
ಸಂತೆಕೆಲೂರು



ಶ್ರೀ ಮ. ನಿ. ಪ್ರ.
**ಶ್ರೀ ಶಿವಯೋಗಿ**
**ಮಹಾಸ್ವಾಮಿಗಳು**
ಘನಮಠೇಶಾಶ್ರಮ
ಸಂತೆಕೆಲೂರು

|| ಶ್ರೀ ಘನಮಠೇಶ ವಿಜಯತೇತಾರಾಂ ||

# ೧ ನೆಯ ಪ್ರಕರಣಂ



ಸೂಚನೆ:— ಭಾಮಿನಿ ಷಟ್ಪದಿ

ಹರನ ಶರಣರ ಚರಿತೆಯನು ಶ್ರೀ|
ಗುರುಮಹಾಂತೇಶ್ವರನ ಪದಯುಗ|
ಸರಶಿರುಹ ಭೃಂಗಾಯಮಾನಂ ಅಮರನಾಮಾಯುತ||
ಬರೆವೆನಿ ಶ್ರೀ ನಾಗಭೂಷಣ|
ಗುರುಶರಣ ಶಿವಯೋಗಿ ಘನಮಠ|
ಕರುಣಸಾಗರ ಕೃತಿಗೆ ಮಂಗಲ ನೀಡು ನೀ ದಯದಿ ||೧||

ವಾರ್ಧಿಕ ಷಟ್ಪದಿ*

ಪರಮ ವೈರಾಗ್ಯದಿಂಚರಿಶಿದವನಾವನೋ|
ಶರೀರವಿರುವನಕ ಸತ್ಕ್ರಿಯೆಯನಾಚರಿಸಿದನೊ|
ಹರನ ಸದ್ಧರ್ಮವಂ ಜಗದೊಳಗೆ ಪ್ರಕಟಿಸುವ ಸದ್ಭಾವದಿಂದಿರ್ದನೋ||
ಕರಿಗೊರಲಗಿತರದೈವವ ನೆನೆಯದಿರ್ದನೋ|
ಪರವಾದಿಗಳನು ನುಡಿಯಾಡಗೊಡದಿರ್ದನೋ|
ಮೆರೆಯುವಾ ನಾಗಭೂಷಣ ಯೋಗಿವರನ ಕಾವ್ಯವು
ಶ್ರಾವ್ಯವೆಂದೆನಿಸದೇ ||೨||

ಪರಮ ತಪಸ್ವಿಗಳ ತವರೂರಾದ ಹೈದ್ರಾಬಾದ ಸಂಸ್ಥಾನದ ಪೂರ್ವಕ್ಕೆ ತೆಲಗು ನಾಡಿನಲ್ಲಿ ಅತ್ರಾಪಬಲಾದ್ದ ಜಿಲ್ಹೆಯ ಪಟ್ಲೂರ ತಾಲೂಕ ದಾರೂರ (ದೋರ್ವಾಡ) ಎಂಬ ಹೆಸರುಳ್ಳ ಸಣ್ಣ ಗ್ರಾಮದಲ್ಲಿ

* ಘನಮಠೇಶ ಪುರಾಣ ೧ನೆಯ ಸಂಧಿ ಪದ ೨೪

ಮಾಹೇಶ್ವರ ದಂಪತಿಗಳಾದ ವೀರಯ್ಯ-ವೀರಮ್ಮ ನೆಂಬವರು ಶಿವಭಕ್ತಿ ಯುತರಾಗಿ ಅಷ್ಟಾವರಣ ಪಂಚಾಚಾರ ಪರಾಯಣರಾಗಿ ಗುರು-ಲಿಂಗ ಜಂಗಮ ಪ್ರೇಮಿಗಳಾಗಿದ್ದರೂ ಸಂಸಾರದಲ್ಲಿ ಸಂತೋಷವನ್ನುಂಟು ಮಾಡಿ ಸದ್ಗತಿಗೆ ಕಾರಣೀಭೂತವಾದ ಸತ್ಸಂತಾನವಿಲ್ಲದ್ದಕ್ಕೆ ಅಭವಚಿಂತನೆಯಲ್ಲಿ ಕಾಲಕಳೆಯುತ್ತಿರಲು ಅವರ ಅಪರ ವಯಸ್ಸಿನಲ್ಲಿ ಅಭವಪ್ರಸಾದದಿಂದ ಅಭೂತಪೂರ್ವನಾದ ನಮ್ಮ ಚರಿತ್ರ ನಾಯಕನು ಶಾಲಿವಾಹನ ಶಕೆ ೧೭೫೧ ನೇ ವಿರೋಧಿನಾಮ ಸಂವತ್ಸರ ಆಶ್ವೀಜ ಶುದ್ಧ ಪಂಚಮಿಯು ಶುಭ ಮುಹೂರ್ತದಲ್ಲಿ ಜನ್ಮಿಸಿದನು. ವೀರಯ್ಯನವರ ಮನೆಗುರುಗಳಾದ ಘನಮಠೇಶಚರವರ್ಯರು ಕೂಸು ಹುಟ್ಟಿದಾಕ್ಷಣವೇ ಧರ್ಮಶಾಸ್ತ್ರ ಪ್ರಕಾರ ಎಂಟನೆಯ ತಿಂಗಳಲ್ಲಿಯೇ ವೀರಮ್ಮನವರ ಗರ್ಭಕ್ಕೆ ಧರಿಸಿದ ಲಿಂಗವನ್ನು ಕೂಸಿನ ಮೈ ತೊಳೆಯಿಸಿ ಶಿಶುವಿನಕಂಠಕ್ಕೆ ಧರಿಸಿ ಶಿವಮಂತ್ರವನ್ನು ಕರ್ಣದಲ್ಲಿ ಉಚ್ಚರಿಸಿ ಲಲಾಟದಲ್ಲಿ ಭಸ್ಮವನ್ನು ಧರಿಸಿ ಶಿವಪ್ರಸಾದದಿಂದ ಹುಟ್ಟಿದ ಶಿಶುವಿಗೆ ಮುಂದೆ ಶಿವಧರ್ಮವನ್ನು ಜಗತ್ತಿನಲ್ಲಿ ಪ್ರಸಾರಮಾಡುವವನಾಗೆಂದು ಮಂಗಲಾಶೀರ್ವದಿಸಿದರು. ತರುವಾಯ ಹನ್ನೆರಡನೆಯ ದಿನದಲ್ಲಿ ಮಗುವಿಗೆ ಮಂಗಲಮಾಸ ನಾನುಕರಣವನ್ನು ಮಾಡಲು ಮನೆಯನ್ನು ಸಾರಣೆ ಕಾರಣೆಗಳಿಂದ ಶೃಂಗರಿಸಿ ಸುವಾಸಿನಿಯರು ಬಾಣಂತಿಗೂ ಕೂಸಿಗೂ ಅಭ್ಯಂಗ ಸ್ನಾನ ಮಾಡಿಸಿ ಮಡಿವಸ್ತ್ರಗಳನ್ನು ಧರಿಸಿ ತ್ರಿಪುಂಡ್ರಧಾರಣಾ ನಂತರ ಜಂಗಮ ಪಾದೋದಕ ಪ್ರಸಾದವನ್ನು ಕೊಡಿಸಿ ನಂತರ ನಗೆಮೊಗದಿಂದ ನಲಿದಾಡುವ ಮಗುವನ್ನು ಮುಂದಗ ಮನೆಯುಳ್ಳ ಮೂಸಿನಿಯರು ಕೈಯಲ್ಲಿ ತೆಗೆದುಕೊಂಡು ಮಂದಾರಮಲ್ಲಿಗೆ ಮೊದಲಾದ ಪುಷ್ಪಗಳಿಂದಲಂಕರಿಸಲ್ಪಟ್ಟ ತೊಟ್ಟಿಲಲ್ಲ ಮಲಗಿಸಿ ಈತನು ಪರಶಿವನ ಅಪ್ಪಣೆಯಂತೆ ದಕ್ಷಯಾಗವನ್ನು ಧ್ವಂಸ ಮಾಡಲು ಧರೆಗಿಳಿದು ಬಂದ ವೀರಭದ್ರನೋ ಲೋಕಕಂಟಕನಾದ ತಾರಕನನ್ನು ತರಿಯಲು ಅವತರಿಸಿದ ಕಾರ್ತಿಕೇಯನೋ ಏನು ದ್ವಿತಿಯ ಶಂಭುವೆನಿಸಿ ಶಂಭುವಿನ ಭಕ್ತಿಯನ್ನು ಭುವನದಲ್ಲಿ ತೋರಿ ಭಕ್ತಿಭಾಂಡಾರಿಯೆನಿಸಿದ ಬಾಗೇವಾಡಿಯ ಬಸವನಂತೆ ಶಿವಮತವನ್ನು ಪ್ರಪಂಚದಲ್ಲಿ ಪ್ರಸಿದ್ಧಗೊಳಿಸಿ ಪ್ರಖ್ಯಾತಿ ಹೊಂದಲು ಅಮರಲೋಕದಿಂದ ಅವತರಿಸಿ

ಬಂದ ಗಣವರನೋ ಎಂದು ನಾನಾ ಪ್ರಕಾರವಾಗಿ ವರ್ಣಿಸುತ್ತಾ ಕೋಗಿಲೆ ಸಮವಾದ ಕಂಠಸ್ವರದಿಂದ ಮಗಲಪದ್ಯಗಳನ್ನು ಹಾಡುತ್ತಾ ಜೋ ಜೋ ಎಂದು ತೊಟ್ಟಿಲವನ್ನು ತೂಗುತ್ತಿರುವಾಗ ಅಕಸ್ಮಾತ್ ಓರ್ವ ಶಿವಸ್ವರೂಪಿ ಜಂಗಮನು ಅಲ್ಲಿಗೆ ಬಂದುದನ್ನು ಕಂಡು ವೀರಯ್ಯ ನವರು ಆನಂದದಿಂದ ಆಸನವನ್ನು ಹಾಕಿ ಗಣವರನನ್ನು ಮುಹೂರ್ತ ಮಾಡಿಸಿ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದಾಕ್ಷಣವೇ ಜಂಗಮ ರೂಪಿ ಪರಮಾತ್ಮನು ವೀರಯ್ಯನವರಿಗೆ ನಿಮ್ಮ ಪುರಾಕೃತ ಪುಣ್ಯ ದಿಂದಲೇ. ಇಂಥ ಮಗುವು ನಿಮ್ಮ ಉದರದಲ್ಲಿ ಜನಿಸಿದೆ. ಪರಮಾತ್ಮನ ಅಂಶದಿಂದ ಆವಿರ್ಭವಿಸಿದ ಈ ಕೂಸು ಸಾಮಾನ್ಯವೆಂದು ಭಾವಿಸಬೇಡಿರಿ. ಈತನು ವಿಶ್ವದಲ್ಲಿ ವೀರವಿರತನಾಗಿ ವೀರಶೈವ ಧರ್ಮದಲ್ಲಿ ವಿಖ್ಯಾತನಾಗುತ್ತಾನೆ. ಈತನಿಗೆ ನಾಗಭೂಷಣನೆಂಬ ನಾಮಕರಣ ಮಾಡಿರಿ ಎಂದು ಭವಿಷ್ಯವನ್ನು ಸೂಚಿಸಿ ಅಲ್ಲಿದ್ದವರೆಲ್ಲ ನೋಡ ನೋಡುತ್ತಿರುವಲ್ಲಿ ಅಂತರ್ಧಾನನಾದನು ಶಿವಯೋಗಿಯ ಆಜ್ಞಾನುಸಾರ ನಾಗವೇಣಿಯರು ನಾಗಭೂಷಣದೇವನೆಂಬ ಮಂಗಲ ನಾಮಕರಣ ಮಾಡಿ ನಾನಾ ಪ್ರಕಾರ ಜೋಗುಳುವ ಹಾಡಿ ವೀರಯ್ಯ ವೀರಮ್ಮನವರ ಅಲಂಕಾರ ದ್ರವ್ಯಗಳಿಂದ ಆದರಾತಿಥ್ಯವಂ ಹೊಂದಿ ತಮ್ಮ ತಮ್ಮ ಆಲಯಂಗಳಿಗೆ ತೆರಳುವವರಾದರು.

**ಇತಿ ಪ್ರಥಮ ಪ್ರಕರಣಂ ಸಮಾಪ್ತಂ**



# ೨ ನೆಯ ಪ್ರಕರಣ



ಸೂಚನೆ:— ಮತ್ತೇಭವಿಕ್ರೀಡಿತವೃತ್ತಂ

ತನ್ನಯ ಬಾಲಲೀಲೆ ಬಹುರಮ್ಯ ಮನೋಹರಮಾದಕೇಲಿಯಿಂ।
ತನ್ನಯ ತಂದೆ ತಾಯಗಳಿಗುನ್ನತ ಸಂತಸ ನೀಡಿ ಹಾಡಿಮ।
ತ್ಯುನ್ನತ ವಿದ್ಯೆಯಂ ಕಲಿತು ವಿನಯ ವಿವೇಕ ವಿಚಾರಿಯಾಗಿ ತಾಂ॥
ಪನ್ನಗಶೋಭೆಯಾದವನ ನಾಮವ ನೆನೆಯುತ ನಡೆವನೂರ್ವಿಯೊಳ್ ॥೧॥

ನಾಗಭೂಷಣ ನಾಮಕರಣದಿಂದ ಪರಿಶೋಭಿಸುವ ನಮ್ಮ ಚರಿತ್ರ ನಾಯಕನು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ಬೆಳೆದು ಐದು ವರ್ಷಂಗಳಾದೊಡನೇ ತಂದೆ ತಾಯಿಗಳು ಶುಭ ಮುಹೂರ್ತದಲ್ಲಿ ನಾಗಭೂಷಣರಿಗೆ ಪಾಠಶಾಲೆಗೆ ಕಳುಸಿದರು. ಕುಶಾಗ್ರಮತಿಗಳಾದ ನಾಗಭೂಷಣರು ತಮ್ಮ ಮಾತೃಭಾಷೆಯಾದ ತೆಲುಗಿನಲ್ಲಿ ಪ್ರಾಥಮಿಕ ಪಾಠಶಾಲೆಯ ಅಭ್ಯಾಸವನ್ನೆಲ್ಲಾ ಎರಡು ಮೂರು ವರ್ಷಗಳಲ್ಲಿ ಪರಿಸಮಾಪ್ತಿಗೊಳಿಸಿ ಓದು ಬರೆಯುವದರಲ್ಲಿ ಪ್ರವೀಣರಾದರು ಶಿವಾಂಶ ಸಂಭೂತರಾದವರಿಗೆ ಯಾವ ದುಃಸಾನೇ ಅಸಾಧ್ಯ ನಾಗಭೂಷಣರಿಗೆ ಎಂಟು ವರ್ಷಗಳು ತುಂಬುತ್ತಲೇ (ಅಷ್ಟವರ್ಷಾಭವೇದ್ದೀಕ್ಷಾ) ಎಂಬ ವೀರಶೈವ ಧರ್ಮಶಾಸ್ತ್ರ ಪ್ರಕಾರ ತಂದೆ ತಾಯಿಗಳು ಇದ್ದೂರಲ್ಲಿಯೇ ಇರುವ ತಮ್ಮ ವಂಶಪರಂಪರಾಗತ ಮನೆ ಗುರುಗಳೂ ಧರ್ಮಶಾಶ್ತ್ರದಲ್ಲಿ ಪರಿಣತೆಯುಳ್ಳವರೂ ಅಷ್ಟಾವರಣ ಆಚಾರ ಶೀಲರೂ ಆದ ಘನಮಠೇಶರೆಂಬ ಗುರುಗಳಿಂದ ಶಿವದೀಕ್ಷೆಯಂ ಮಾಡಿಸಿದರು ಗುರೂಪದೇಶವಾದಾಕ್ಷಣವೇ ಪರುಷ ಮುಟ್ಟಿದ ಪಾಷಾಣದಂತೆ ನಾಗಭೂಷಣರು ವಯಸಿನಲ್ಲಿ ಚಿಕ್ಕವರಾದರೂ ಶಿವಜ್ಞಾನ ಸಂಪನ್ನರಾಗಿ

ಯಾವಾಗಲೂ ಶಿವಪ್ರೇಮಕ್ಕೆ ಪಾತ್ರಗಳಾದ ಶ್ರವಣ ಭಜನ ಅರ್ಚನಾದಿ
ಕಾರ್ಯಗಳಲ್ಲಿಯೇ ಆಸಕ್ತರಾಗಿ ಕಾಲಕಳೆಯುತ್ತಾ ಈಗಿನ ಹುಡುಗರಂತೆ
ಗುಂಡು ಚಂಡುಗಳನ್ನಾಡದೆ ಗುರುಗಳ ಮಠದಲ್ಲಿಯೇ ಕಾಲಕಳೆಯುತ್ತಾ
ಗುರುಸೇವಾ ಶುಶ್ರೂಷೆಗಳನ್ನು ಮಾಡುತ್ತಾ ಗುರುಗಳ ಮಠದಲ್ಲಿ ನಡೆಯುವ
ಶಿವಸಿದ್ಧಾಂತೋಪದೇಶವನ್ನು ಕೇಳಿ ತಾ ಬೆಳೆದುದರಿಂದ ಈ ಜಡಜಗತ್ತಿನ
ಮಾಯಾ ವಿಷಯಾದಿಗಳು ಇವರ ತ್ರಿಕರಣದಲ್ಲಿ ಮೂಡದಾದವು. ಮುಂದೆ
ನಮ್ಮ ಶಿವಯೋಗಿಗಳು ಕುಂಬಾರ ಹುಳದಂತೆ ಸಂಸಾರದಲ್ಲಿದ್ದರೂ ಸಂಸಾ
ರ ನಿರ್ಲಿಪ್ತರಾಗಲೆಂದೋ ಗೃಹಸ್ಥಾಶ್ರಮಿಗಳಾದರೂ ನಿರಂಜನ ನಿರಾ
ಭಾರಿಗಳಾದ ವಿರಕ್ತಾಶ್ರಮಿಗಳಿಗೆ ಮಾರ್ಗದರ್ಶಕರಾಗಿ ವೀರ ವಿರತರೆನಿಸಿ
ಜಗತ್ಪ್ರಸಿದ್ಧರಾಗಲೆಂದೋ ಅಥವಾ ಇವರು ಪ್ರೌಢ ವಯಸ್ಕರಾದಮೇಲೆ
ಅಶಾಶ್ವತವಾದ ಲಗ್ನಬಂಧನಕ್ಕೆ ಒಪ್ಪಲಿಕ್ಕಿಲ್ಲವೆಂದೋ ಊಹಿಸಿ ಇವರ
ತಂದೆತಾಯಂದಿರು ಇವರ ವಿಚಾರ ಪರಿಪಕ್ವವಾಗುವ ಸಮಯಕ್ಕೆ ತಾರು
ಣ್ಯದಲ್ಲಿ ಕಾಲಿಡುತ್ತಿರುವಾಗಲೇ ಲಗ್ನ ಮಾಡಿಬಿಟ್ಟರು. ನಮ್ಮ ನಾಗಭೂ
ಷಣರು ಹದಿನಾರು ವರುಷ ವಯಸ್ಸಿನವರಿರುವಾಗಲೇ ನೀತಿ ಕ್ರಿಯಾಚಾ
ರದಲ್ಲಿ ನಿಪುಣರಾಗಿ ಗುರು ತಂದೆತಾಯಿಗಳ ಸೇವಾ ನಿರತರೆನಿಸಿ ಶಿವಭಕ್ತಿ
ಯನ್ನು ಜಗತ್ತಿಗೆ ತೋರಿ ಶಿವಾಧಿಕ್ಯವನ್ನೇ ಮನಸ್ಸಿನ ಮಹತ್ತರವಾದ
ಗುರಿಯಿಟ್ಟುಕೊಂಡು ಜಗತ್ಸಂಚಾರಕ್ಕೆ ಹೊರಡಬೇಕೆನ್ನುವಷ್ಟರಲ್ಲಿ
ಯೇ ಇವರ ಕುಟುಂಬದವರಾದ ಸೌಭಾಗ್ಯವತಿಯಾದ ಸಂಗಮ್ಮನೆಂಬ
ಸದ್ಗೃಹಿಣಿಯು ಮನೆಗೆ ಬಂದಳು. ನಾಗಭೂಷಣರು ತಮ್ಮ ವಯಸು
ಚಿಕ್ಕದಿದ್ದರೂ ತಮಗೆ ಲಗ್ನ ಬೇಡವೆಂದು ಆರು ತಿಂಗಳವರೆಗೂ ಗುರುಗ
ಳೊಡನೆ ವಾದಮಾಡಿ ಅಂತ್ಯಕ್ಕೆ ಗುರುಗಳ ನಿರ್ಭಂಧಕ್ಕೆ ನಿರ್ವಾಹವಿ
ಲ್ಲದೆ ವಿವಾಹಕ್ಕೆ ಅನುಮತಿ ಕೊಟ್ಟ ಸವಿಸ್ತಾರ ವಿಷಯವನ್ನು ಮುಂದಿನ
ಪ್ರಕರಣದಲ್ಲಿ ಹೇಳಿದೆ ಅಸ್ತು ಹೆಂಡತಿಯು ಮನೆಗೆ ಬಂದಕೂಡಲೇ
ಹೆಂಡತಿಯನ್ನು ತಿರಸ್ಕರಿಸುವದು ಧರ್ಮಶಾಸ್ತ್ರ ವಿರುದ್ಧವೆಂದು ತಿಳಿದು
ಪಂಕಜದಂತೆ ಪ್ರಪಂಚಾಸಕ್ತನಾದನು. ಆದರೂ ತನ್ನ ನಿತ್ಯಾಚರಣೆಗ
ಳನ್ನು ಬಿಡಬಿಡದೆ ನಡೆಸುತ್ತಾ ಲೋಕದ ಕಣ್ಣಿಗೆ ಅನಿತ್ಯ ಪ್ರಪಂಚ
ವನ್ನು ಮಾಡುತ್ತಿದ್ದರು ಶಾಶ್ವತವಾದ ಶಿವತತ್ವವನ್ನು ಸಾಧಿಸುವದೇ

ಮಾನವ ಜನ್ಮದ ಮುಖ್ಯ ಕರ್ತವ್ಯವೆಂಬುದನ್ನು ಮರೆತಿರಲಿಲ್ಲಾ ಇವರ ಹೆಂಡತಿ ಸಂಗಮ್ಮನವರಾದರು. ಇವರು ಮಾಡುವ ದಾಸೋಹಾದಿ ಕಾರ್ಯಗಳಿಗೆಲ್ಲ ಅನುಕೂಲರಾಗಿ ಗಂಡನ ಪೈನೆಳಲಾಗಿಯೇ ನಡೆಯುತ್ತಿದ್ದರು. ಸತಿಪತಿಗಳೀರ್ವರೂ ಸದಾ ಶಿವಾಚಾರ ಸಂಪನ್ನರಾಗಿ ಅತಿಥಿ ಸೇವಾ ಸತ್ಕಾರ್ಯಗಳಲ್ಲಿ ನಿರತರಾಗಿ ನಿತ್ಯ ಸುಖಿಗಳಾಗಿರುವಾಗ ಸತಿ ಸಂಗಮ್ಮನವರು ಗರ್ಭಧಾರಣೆ ಮಾಡಿದರು. ಗರ್ಭವು ದಿನಗಳು ತುಂಬಿ ನವಮಾಸ ಪೂರ್ತಿಯಾಗಿ ನಮ್ಮ ನಾಗಭೂಷಣರು ಸಂಸಾರದಿಂದ ವಿಮುಖರಾಗಲೆಂದೋ ಅಥವಾ ಶಿವಶರಣರ ಸಂತಾನವು ಜಗತ್ತಿನಲ್ಲಿ ಉಳಿಯಬಾರದೆಂಬ ಉದ್ದೇಶದಿಂದಲೋ ಪರಮಾತ್ಮನು ತನ್ನ ಭಕ್ತಿಯನ್ನು ಜಗತ್ತಿನಲ್ಲಿ ಪ್ರಸಾರ ಮಾಡುವದನ್ನು ಇವನು ಮರೆಯುವನೆಂದೋ ಅದಷ್ಟು ಇವನನ್ನು ಬೇಗ ಪ್ರಪಂಚದಿಂದ ಪಾರು ಮಾಡಬೇಕೆಂಬ ಪರಮಾತ್ಮನ ಪ್ರೇರಣೆಯಿಂದ ಇವರ ಉದರದಲ್ಲಿ ಹೆಣ್ಣು ಕೂಸು ಹುಟ್ಟಿತು.

## ಪುರುಷಾರ್ಥವನ್ನು ಪಡೆಯಲು ಶೈಶವಾವಸ್ಥೆಯ ಶುದ್ಧ ಸಂಸ್ಕಾರವೇ ಮುಖ್ಯ ಕಾರಣವು

ನಮ್ಮ ನಾಗಭೂಷಣರು ತಮ್ಮ ಯೌವನದಲ್ಲಿಯೇ ಅರಿಷಡ್ವರ್ಗಾದಿಗಳನ್ನು ಹತ್ತಿಕ್ಕಿ ಅಶಾಶ್ವತವಾದ ಈ ಮಾಯಾ ಸಂಸಾರದ ಮೋಹವನ್ನು ತೊರೆದು ನಿರಂಜನ ನಿರಾಭಾರಿಗಳೆಂದು ಹೊಗಳಿಸಿಕೊಂಡು ಅನಾದಿಕಾಲದಿಂದಲೂ ಪ್ರಸಿದ್ಧಿ ಹೊಂದಿದ ಈಗಿನ ವಿರಕ್ತ ಮಠಗಳಲ್ಲಿ ಶೂನ್ಯ ಸಿಂಹಾಸನಾರೂಢರಾಗಿ ಮೆರೆಯುವ ವಿರಕ್ತರಿಗೂ ವಶವಾಗದ ವೈರಾಗ್ಯ ಸಂಪತ್ತನ್ನೆಲ್ಲ ವಶೀಕರಣ ಮಾಡಿಕೊಂಡು ವೀರ ವಿರತರೆನಿಸಿ ವಿಶ್ವ ವಿಖ್ಯಾತರಾಗಬೇಕಾದರೆ ಮನುಷ್ಯ ಲೋಕದಲ್ಲಿ ಹುಟ್ಟಿ ಮನುಷ್ಯರಂತೆ ಕಂಡಾಗ್ಯೂ ಇವರನ್ನು ಮನುಷ್ಯರೆಂದು ತಿಳಿಯುವದು ಮಹಾ ಅಪರಾಧ, ಯಾಕೆಂದರೆ ಮನುಷ್ಯನಿಗೆ ಮೀರಿದ ಮಹಾ ಅಘಟಿತ ಘಟನಾಶಕ್ತಿ ಕಲಿಯಲಾರದ ಕವಿತ್ವ ಇಚ್ಛಾ ಮರಣತ್ವ ಇತ್ಯಾದಿ ನಾಗಭೂಷಣರ ಶಿವಶಕ್ತಿಗಳನ್ನು ನೋಡಿದರೆ ರಾಮಾಯಣ ಮಹಾ

ಭಾರತಗಳಲ್ಲಿಯೂ ಶಿವಪುರಾಣಗಳಲ್ಲಿಯೂ ಚಿರಂಜೀವಿಗಳೆಂದು ಪ್ರಸಿದ್ಧರಾದ ಮಾರ್ಕಂಡೇಯ ಮಾರುತಿ ಅಭಿಮನ್ಯು ಅಶ್ವತ್ಥಾಮರಂತೆ ನಮ್ಮ ನಾಗಭೂಷಣರು ಇಂದಿಗೂ ಚಿರಂಜೀವಿಗಳೆಂದು ಹೇಳಿದರೆ ಯಾವ ಬಾಧಕವೂ ಬರಲಾರದು. ಓದುಗರಾದ ತಮಗೆ ಮಹನೀಯರ ಕಥಾ ಪಠಣದಿಂದ ಮುಂದೆ ತಾನೇ ತಿಳಿಯುತ್ತದೆ. ಅಸ್ತು ಮಾನವನು ತನ್ನ ಸಂಸಾರದಲ್ಲಿ ಸದ್ಗುಣಯುತನಾಗಿ ಸುಸಂಸ್ಕೃತನಾಗಿ ಸುಖಬಾಳನ್ನು ಕಾಣಬೇಕಾದರೆ ಸಂಸ್ಕಾರಕ್ಕಿಳಿಯುವ ಮುಂಚೆ ರೋಗಗ್ರಸ್ತವಾದ ಪ್ರಾಣಿಗೆ ಔಷಧ ಚಿಕಿತ್ಸೆ ಹೇಗೆ ಅವಶ್ಯವೋ ಹಾಗೆಯೇ ಮಾನವನು ತನ್ನ ಇರುವಿಕೆಯ ಅವಧಿಯಲ್ಲಿಯೇ ಅರುವಿನ ಹಂದರವನ್ನು ಹತ್ತಿ ತನ್ನ ಬಾಳನ್ನು ಸುಂದರಗೊಳಿಸಬೇಕಾದರೆ ಮಾನವನ ಪೂರ್ವ ವಯಸ್ಸಿನಲ್ಲಿಯೇ (ಬಾಲ್ಯದಲ್ಲಿಯೇ) ತಂದೆ ತಾಯಿಗಳಾದವರು ಮಕ್ಕಳ ಪೋಷಣೆಯ ಮಹತ್ವವನ್ನರಿತು ದುಷ್ಟ ದುರ್ನಡತೆಗಳಿಂದ ದುರಾಚಾರಿಗಳಾಗಿ ದುಶ್ಚರಿತ್ರರಾಗದಂತೆ ನೀತಿ ವಿನಯ ವಿವೇಕ ವಿಚಾರಗಳಿಂದ ನಡೆದು ಮಾನವೀಯತೆಯ ಮುಖ್ಯತ್ವವನ್ನರಿತು ಮರ್ತ್ಯದಲ್ಲಿ ಮಾನವಕುಲಕ್ಕೆ ಮಾರ್ಗದರ್ಶಕರಾಗುವಂತೆ ಮಾಡುವ ಹೊಣೆಯು ಮಾತಾಪಿತೃಗಳದೇಯೆಂದು ತಿಳಿದು ನಮ್ಮ ನಾಗಭೂಷಣರ ಮಾತಾ ಪಿತೃಗಳಾದ ವೀರಯ್ಯ ವೀರಮ್ಮನವರು ನಮ್ಮ ಚರಿತ್ರಪುರುಷರಿಗೆ ಬಾಲ್ಯದಲ್ಲಿಯೇ ಉತ್ತಮ ಗುರುಗಳಿಂದ ಅಕ್ಷರಾಭ್ಯಾಸವನ್ನು ಮಾಡಿಸಿ ಧರ್ಮಶಾಸ್ತ್ರ ಪ್ರಕಾಶ ಮನೆಗುರುಗಳಾದ ಘನಮಠಾರ್ಯರಿಂದ ನೈತಿಕ ಧಾರ್ಮಿಕ ಭಾವನೆ ಬೆಳೆದು ಸುಸಂಸ್ಕೃತರಾಗಿ ಬಾಳುವಂತೆ ಸುಶಿಕ್ಷಣವನ್ನೇ ಕೊಡಿಸಿದ್ದರು. ನಮ್ಮ ನಾಗಭೂಷಣರಾದರೂ ಹಣ್ಣಿನ ರುಚಿ ಹೀಚಿನಲ್ಲಿಯೇ ಎಂಬಂತೆ ಗುರುಗಳಾದ ಘನಮಠೇಶರಿಂದ–

ವಿದ್ಯಾದದಾತಿನಯಂ । ವಿನಯಾದ್ಯಾತಿಪಾತ್ರತಾಂ ॥
ಪಾತ್ರತ್ವಾಧನಮಾಪ್ನೋತಿ । ಧನಾದ್ಧರ್ಮತತಸ್ಸುಖಂ ॥೧॥

ಎಂಬ ನೀತಿವಾಕ್ಯದಂತೆ ವಿದ್ಯೆಯಿಂದ ವಿನಯವನ್ನೂ ವಿನಯದಿಂದ ಯೋಗ್ಯತೆಯನ್ನೂ ನೀತಿ ಕ್ರಿಯಾಚಾರ ವೀರಶೈವ ಧರ್ಮತತ್ವವನ್ನೂ

ಬಲ್ಲಿದನರಾಗಿ ಬಳಿಸಿದ ಬ್ರಹ್ಮಚಾರಿಯಂತೆ ಪಂಕಜದೊಳಗಣ ಕಮಲ
ದಂತೆ ತಾವು ಪ್ರಪಂಚದಲ್ಲಿದ್ದರೂ ಪಾರಮಾರ್ಥದ ಕಡೆ ಲಕ್ಷವಿಟ್ಟು ಬಸ
ವಾದಿ ಶಿವಶರಣರ ವಚನ ಶಾಸ್ತ್ರದಲ್ಲಿಯೇ ತಲ್ಲೀನರಾಗಿ ಅಧ್ಯಾತ್ಮ ವಿಚಾ
ರದಲ್ಲಿಯೇ ಮಗ್ನರಾಗಿ ವಿಷಯಾದಿಗಳಲ್ಲಿ ವೈರಾಗ್ಯ ಭಾವನೆಯುಳ್ಳವರಾಗಿ
ವರ್ತಿಸುತ್ತಿರುವಾಗಲೇ ಒಮ್ಮೆಂದೊಮ್ಮೆ ಇವರ ಸಂಸಾರದಲ್ಲಿ ವರ್ಷಾಕಾ
ಲದ ಕೋಲ್ಮಿಂಚಿನಂತೆ ಪರಿವರ್ತನೆಯಾಯಿತು. ಅಕಸ್ಮಾತ್ ನಾಗಭೂ
ಷಣರ ಧರ್ಮಪತ್ನಿಯಾದ ಸಂಗಮ್ಮನವರು ಸಾಧಾರಣ ಮನುಷ್ಯರಿ
ಗಾಡುವಂತೆ ನಾಗಭೂಷಣರಿಗೆ ತನ್ನ ಕೂಸು ಬಹಳ ಅಳುವದರಿಂದ
ಬೇಸತ್ತು ಈ ಮನೆಯಲ್ಲಿ ಬಾಳ್ವೆ ಮಾಡುವದು ನನಗೆ ಸಾಕಾಗಿ ಹೋ
ಯಿತು. ನನ್ನ ತವರವರು ಎಂಥ ಮನೆತನಕ್ಕೆ ನನ್ನನ್ನು ಕೊಟ್ಟರು ಒಳ್ಳೇ
ಮನೆಗೆ ಕೊಟ್ಟಿದ್ದರೆ ಸುಖವಾಗಿರುತ್ತಿದ್ದೆ ಯಾವ ಸುಖ ಇರುವದೆಂದು
ನಾನು ಈ ಮನೆಯಲ್ಲಿ ಕಾಲಹರಣ ಮಾಡಬೇಕು ಹಾಗೇ ಹೀಗೆ ಎಂದು
ನಾಗಭೂಷಣರಿಗೆ ಬಿರಸು ನುಡಿಗಳನ್ನಾಡಿದಾಕ್ಷಣವೇ ನಮ್ಮ ನಾಗಭೂ
ಷಣರು ಅರಳಿಯ ರಾಶಿಗೆಬಿದ್ದ ಬೆಂಕಿಯ ಕಿಡಿಯಂತೆ ಮೊದಲೇ ಬೇಕು
ಬೇಡಾಗಿ ಬಾಳುವೆ ಮಾಡುವವನಿಗೆ ನಿದ್ರೆ ಬಂದವನಿಗೆ ಹಾಸಿಕೊಟ್ಟಂತೆ
ಸಂಸಾರದಲ್ಲಿ ಹೇಯ ಮನಸ್ಕರಾಗಿ ತಮ್ಮ ಹೆಂಡತಿಗೆ ಹೌದು ಪ್ರಿಯೇ
ನಿನ್ನ ತವರು ಮನೆಯವರು ತಪ್ಪು ಮಾಡಿದ್ದಾರೆ. ಈಗಾದರೂ ಏನು
ಕೆಟ್ಟಿದೆ ಅದೇ ನಿನ್ನ ತವರು ಮನೆಗೆ ನೀನು ಹೋಗಿ ಸುಖವಾಗಿ ಇರಬಹು
ದಲ್ಲವೇ ವ್ಯರ್ಥವಾಗಿ ಅವರನ್ನೇಕೆ ಹಳಿಯುವೆ ನೀನು ತವರೂರಿಗೆ
ಹೋಗಿ ಸುಖವಾಗಿ ಕಾಲಕಳೆಯೆಂದು ಹೆಂಡತಿಗೆ ಹೇಳಿದವರೇ ಘನ
ಮಠಾ ಎಂದು ತನ್ನ ಗುರುಧ್ಯಾನದಲ್ಲಿಯೇ ಮನೆಬಿಟ್ಟು ಸಂಸಾರದಲ್ಲಿ
ಸುಖವನ್ನಂತೂ ಕಂಡಂತಾಯಿತು. ಮರ್ತ್ಯದಲ್ಲಿ ಮಾನವನಾಗಿ
ಹುಟ್ಟಿದ ಮೇಲೆ ಮಾಡತಕ್ಕ ಕಾರ್ಯವಾದರೂ ಏನು? ಇದೇ ಅಜ್ಞಾನ
ಮಯವಾದ ನಶ್ವರವಾದ ಮಾಯಾ ಮೋಹದಲ್ಲಿ ಶಿಲುಕಿ ಇತಃಪರ
ಗತಿಗಾಣದೇ ಮಧ್ಯದಲ್ಲಿಯೇ ಮಂದ ಮತಿಯಾಗಿ ಜೋತಾಡುತ್ತ
ಮಹತ್ತರವಾದ ಮಾನವ ಜನ್ಮವನ್ನು ವ್ಯರ್ಥ ಮಾಡಿಕೊಳ್ಳುವದೇ ಎಂದು
ನಿಸ್ಸಾರವಾದ ಸಂಸಾರವನ್ನು ಹಳಿಯುತ್ತ ಮನೆಬಿಟ್ಟು ಇದೇ ಅಂತ

ರಂಗದ ಆಲೋಚನೆಯಲ್ಲಿಯೇ ಮಾರ್ಗಕ್ರಮಣ ಮಾಡಹತ್ತಿದರು.

ಇಲ್ಲಿಂದ ನಾವು ನಾಗಭೂಷಣರಿಗೆ ನಾಗಭೂಷಣ ಶಿವಯೋಗಿಯೆಂದು ಸಂಭೋದಿಸೋಣ ಯಾಕಂದರೆ ಸಂಸ್ಕೃತದಲ್ಲಿ ಒಂದು ಶಬ್ದಕ್ಕೆ ಯುಕ್-ಯುಗ್ ಧಾತುಗಳ ಜೊಡಣೆಯಾದರೆ ವ್ಯಾಕರಣದಿಂದ ಸಂಯುಕ್ತ ಸಂಯುಗ ಸಂಯೋಗ ಆಗುವಂತೆ ನಾಗಭೂಷಣರು ಸಾಗರ ಸಮಾನವಾದ ಸಂಸಾರವನ್ನು ದಾಟಿ ಆಧ್ಯಾತ್ಮ ವಿಚಾರದಲ್ಲಿಯೇ ಅಡಿಯನಿಟ್ಟು ಶಿವಧ್ಯಾನದದಿಂದ ಶಿವಯೋಗವನ್ನು ಸಾಧನೆ ಗೈದು ಶಿವನೆ ತಾನಾಗಿ ಜೀವ ಭಾವನೆಯಳಿದು ಶಿವಸ್ವರೂಪಿ ಶಿವಯೋಗಿಯಾದ ಕಾರಣದಿಂದಲೇ ಜಗತ್ತಿನ ಜನರು ನಾಗಭೂಷಣ ಶಿವಯೋಗಿಯೆಂದೇ ಕರೆಯೋಣ ಅಸ್ತು. ನಾಗಭೂಷಣ ಶಿವಯೋಗಿಗಳು ಮನೆಯನ್ನು ಬಿಟ್ಟನಂತರ ಈಗ ನಾನು ಎಲ್ಲಿಂದ ಬಂದಿದ್ದೇನೆ ಎಲ್ಲಿಗೆಹೊರಟಿದ್ದೇನೆ ಎಂಬ ಯಾವ ದರ ಪರವೆಯಿಲ್ಲದೆ ಹೇಗೆ ನಿಬಿಡವಾದ ಮೇಘ ಮಂಡಲದಿಂದ ಮುಚ್ಚಲ್ಪಟ್ಟ ಸೂರ್ಯನು ಜಂಝಾ ಮಾರುತನಿಂದ ಮುಚ್ಚಲ್ಪಟ್ಟ ಮೇಘಮಂಡಲವು ಮಾಯವಾಗಿ ಪ್ರಭಾಕರನು ಪುನಃ ಪ್ರಕಾಶಿಸುವಂತೆ ನಾಗಭೂಷಣದೇವನು ಹೆಂಡತಿಯು ಬಿರುನುಡಿಯೆಂಬ ಬಿರುಗಾಳಿ ಹೊಡೆತಕ್ಕೆ ಪ್ರಪಂಚದಲ್ಲಿ ಪಂಚಕ್ಲೇಶಗಳಿಂದ ಅವೃತವಾದ ಅಜ್ಞಾನದ ಅಭಾವವಾಗಿ ಸೂರ್ಯಪ್ರಕಾಶದಂತೆ ಸುಜ್ಞಾನ ಸುಶೋಭಿತನಾಗಿ ತನ್ನ ಆತ್ಮಜ್ಯೋತಿಯಿಂದ ಜಗತ್ತನ್ನೇ ಬೆಳಗಲು ಹೊರಟ್ಟಿದ್ದಾನೋ ಯೇನೋ ಅನ್ನುವಂತೆ ಹಸುತೃಷಿಗಳ ಅರುವಿಲ್ಲದೆ ಅಮೃತ ಸಮಾನವಾದ ಆಭವನಾಮ ಸ್ಮರಣೆ ಮಾಡುತ್ತ ಮಾನವನ ಹೃದಯದಲ್ಲಿ ಅಡಗಿದ ಅಗಾಧ ಶಕ್ತಿಯನ್ನು ಕಂಡುದಕ್ಕೆ ಆತ್ಮಾನಂದ ಹೊಂದಿದವನಾಗಿ ಇಥಾ ಮಾನವ ಜನ್ಮವನ್ನು ಕರುಣಿಸಿದ ಕಂದುಗೊರಳನ ಮಹಿಮೆಯನ್ನು ಮನದಲ್ಲಿ ನೆನೆಯುತ್ತಾ ಮೆಲ್ಲಮೆಲ್ಲನೆ ಮಾರ್ಗನಡೆಯುತ್ತಾ ಹಳ್ಳಿಗೇಕ ರಾತ್ರಿ ಪಟ್ಟಣಕ್ಕೆ ಪಂಚ ರಾತ್ರಿ ಎನ್ನುವಂತೆ ಮಾರ್ಗದಲ್ಲಿ ಶಿಕ್ಕ ಗ್ರಾಮಗಳಲ್ಲಿ ವಾಸ ಮಾಡುತ್ತಾ ತಾನು ಮನೆಬಿಟ್ಟು ಮುಂದೆ ಮಾಡಬೇಕಾದುದನ್ನು ಮಾಡೇತೀರಬೇಕೆಂಬ ದೃಢಸಂಕಲ್ಪವುಳ್ಳವನಾಗಿ ತನ್ನ ಪೂರ್ವಜರಾದ ಬಸವಾದಿ ಶಿವಶರಣರ ಮಾರ್ಗವನ್ನೇ ಗುರಿಯಾಗಿಟ್ಟುಕೊಂಡು ವೀರಶೈವಧರ್ಮದ ಧರ್ಮ

ರಜ್ಜುಗಳಾದ ಅಷ್ಟಾವರಣ ಪಂಚಾಚಾರ ಷಟುಸ್ಥಲಗಳಿಂದ ಬಂಧಿ
ತನಾಗಿ ಹೇಗೆ ಧನುರ್ಧಾರಿಯಾದ ಮನುಷ್ಯನು ತಾನು ವಿಶಾಲವಾದ
ವಿಶ್ವದಲ್ಲಿದ್ದರೂ ಯಲ್ಲವನ್ನು ಮರೆತು ತನ್ನ ಬಾಣದತುದಿಯಲ್ಲಿ ನೆಟ್ಟ
ದೃಷ್ಟಿಯುಳ್ಳವನಾಗಿ ತಾನು ಭೇದಿಸಬೇಕಾದ ವಸ್ತುವನ್ನು ಹ್ಯಾಗೆನೋಡು
ತ್ತಾನೋ ಹಾಗೆಯೇ ನಾಗಭೂಷಣ ದೇವನು ತನ್ನ ಮನಸ್ಸಿನ ದೇವನಾದ
ಮಹಾದೇವನ ಧ್ಯಾನದಲ್ಲಿಯೇ ತನ್ನ ಜನ್ಮ ಭೂಮಿಯಾದ ಆಂಧ್ರದೇ
ಶವನ್ನು ಬಿಟ್ಟು ಕರ್ನಾಟಕ ದೇಶದ ವಿಜಾಪೂರ ಜಿಲ್ಹಾ ಶಿಂದಗಿ ತಾಲೂಕ
ಯಲಗೋಡ ಗ್ರಾಮಕ್ಕೆ ಬರುವವರಾಗಿದ್ದಾರೆ.

ಅಸ್ತು ಈಗ ನಾವು ನಾಗಭೂಷಣ ಶಿವಯೋಗಿಗಳನ್ನು ಯಲ
ಗೋಡ ಗ್ರಾಮದಲ್ಲಿಯೇ ಬಿಟ್ಟು ನಾಗಭೂಷಣ ದೇವನು ಮನೆಬಿಟ್ಟು
ಬಂದನಂತರ ಅವರ ತಂದೆ ತಾಯಿಗಳಾದ ವೀರಯ್ಯ ವೀರಮ್ಮನವರ,
ಪತ್ನಿಯಾದ ಸಂಗಮ್ಮನವರ ಪರಿಸ್ಥಿತಿ ಏನಾಯಿತು ಅವರು ಈಗ ಏನು
ಮಾಡಲಿಕ್ಕೆಹತ್ತಿದ್ದಾರೆ ಎಂಬ ವಿಷಯ ಏನೂ ತಿಳಿಯಲ್ಲಿಲ್ಲ. ವಾಚಕ
ರಾದ ತಮ್ಮ ಲಕ್ಷವೆಲ್ಲ ಅತ್ತಕಡೆಗೆ ಇರಬಹುದು. ಆಗಲಿ ನಾವೂ ನೀವೂ
ಅವರ ಮನೆಯವರ ಸಮಾಚಾರವನ್ನು ಸಾದ್ಯಂತವಾಗಿ ವಿಚಾರಿಸಿ
ಮುಂದೆ ಚರಿತ್ರನಾಯಕನ ಕಥಾ ಪ್ರಸಂಗಕ್ಕ ಕೈ ಹಾಕೋಣ, ನಾಗ
ಭೂಷಣ ದೇವನು ತನ್ನ ಪತ್ನಿಯಾದ ಸಂಗಮ್ಮನ ಸಣ್ಣ ಮಾತನ್ನೇ
ಮಹಾ ಮಂದಾರಗಿರಿಯಷ್ಟು ದೊಡ್ಡದನ್ನಾಗಿಮಾಡಿ ಭಾರವನ್ನು ಸಹಿಸ
ಲಾರದೆ ಅವರ ಭಾರವನ್ನು ಅವರಿಗೆ ಅರ್ಪಿಸಿ ಅಂತರಂಗದ ಶುದ್ಧಿಯಿಂದ
ಬಹಿರಂಗಂದ ಶುದ್ಧಿಗೊಳಿಸಲು ಹೊರಟಾಕ್ಷಣವೆ ತಾಯಿಯಾದ ವೀರಮ್ಮ
ನವರು ನಾಗಭೂಷಣರು ಮನೆಬಿಟ್ಟು ಹೋದುದಕ್ಕೆ ಮ್ಲಾನವದನರಾಗಿ
ಇದುವರೆಗೂ ತನ್ನ ನಿತ್ಯ ಕರ್ಮಗಳಿಂದ ಸ್ನಾನ ಶಿವಪೂಜಾದಿ ಕಾರ್ಯಗ
ಳನ್ನು ಅತಿಕ್ರಮಿಸಿದವನಲ್ಲ ಊರೊಳಗಾದರೂ ಅನ್ಯಥಾ ಅನ್ಯರ ಮನೆಗೆ
ಅಡ್ಡಾಡುವವನಲ್ಲ ನಿತ್ಯನೇಮಾದಿಗಳನ್ನು ಮರೆತು ಎಲ್ಲಿಗೆ ಹೋಗಿರ
ಬಹುದು. ಈ ಪ್ರಕಾರ ಅತ್ತೆ ಸೊಸೆಯರೀರ್ವರೂ ಹಂಬಲಿಸುತ್ತಿರುವಾಗ
ತಂದೆಯವರಾದ ವೀರಯ್ಯನವರು ಹೊರಗಿನಿಂದ ಬಂದು ಮಗನು

ಮನೆಯಲ್ಲಿಲ್ಲವೆಂದು ಹಲಬುತ್ತಿರುವ ಹೆಂಡತಿಯ ಮಾತನ್ನು ಕೇಳಿ ನಾಗ ಭೂಷಣನೆಲ್ಲಿಗೆ ಹೋಗಬೇಕು, ಅವನ ಗುರುತ್ರಯ (ದೀಕ್ಷಾ ಶಿಕ್ಷಾ ಮೋಕ್ಷ) ಕ್ಕೆ ಕಾರಣರಾದ ಘನಮಠೇಶರ ಮಠಕ್ಕೆ ಹೋಗದೆ ಇನ್ನೊಂದೆಡೆಗೆ ಹೋಗುವವನಲ್ಲ ಯಾರನ್ನಾದರೂ ಕಳಿಸಿ ನೋಡೋಣವೆಂದು ಗುರುಗಳ ಮಠಕ್ಕೆ ಕಳಿಸಿ ನೋಡಲಾಗಿ ಗುರುಗಳೇ ಊರಲ್ಲಿಲ್ಲವೆಂದೂ ನಾಗಭೂಷಣರು ಅಲ್ಲಿ ಬಂದಿಲ್ಲವೆಂದೂ ವಿಷಯ ತಿಳಿದಾಕ್ಷಣವೇ ಯಜಮಾನರಾದ ವೀರಯ್ಯನವರು ಸೊಸೆಯಾದ ಸಂಗಮ್ಮನವರಿಗೆ ತಂಗೀ ನಿನ್ನ ಗಂಡನೆಲ್ಲಿಗೆ ಹೋಗಿದ್ದಾನೆ ನಿನಗೇನಾದರೂ ಈ ವಿಷಯ ಗೊತ್ತೇನಮ್ಮಾ ಎಂದು ಮಾವನವರು ಕೇಳಿದಾಕ್ಷಣವೇ ಸಾಧ್ವಿಯಾದ ಸಂಗಮ್ಮನವರು ಮಾವನವರ ಸಮ್ಮುಖದಲ್ಲಿ ಅನೃತವನ್ನಾಡದೆ ಮಾವನವರೇ ನಾನು ಸುಳ್ಳು ಆಡಲಾರೆ ಈ ದಿವಸ ಅಜ್ಞಾನದಿಂದ ನನ್ನ ಪತಿದೇವನಿಗೆ ಕೈಯೊಳಗಿನ ಕೂಸು ಕಿರಿಕಿರಿ ಮಾಡಿದ್ದರಿಂದ ಕೂಸನ್ನಾದರೂ ತೆಗೆದುಕೊಳ್ಳಬಾರದೇ ಮನೆಗೆಲಸ ಯಾವಾಗ ಮುಗಿಯಬೇಕು. ನಾನೊಬ್ಬಳೇ ಈ ಮನೆಯಲ್ಲಿ ಎಷ್ಟು ಕಷ್ಟಪಡಬೇಕು. ನಾನು ಈ ಮನೆಗೆ ಬಂದು ಬಹಳ ಸುಖಪಟ್ಟೆ ಹಾಗೆ ಹೀಗೆ ಎಂದು ಕೆಲಸದ ಬೇಸರಿಕೆಯಿಂದ ಅರುವಿಲ್ಲದೆ ಆಡಿದ್ದಕ್ಕೆ ಅಷ್ಟಕ್ಕೆ ಅವರು ಮನಸ್ಸುನೊಂದವರಾಗಿ ಆಗಲಿ ಪ್ರಿಯೇ ನನ್ನ ಮನೆಯಲ್ಲಿ ನಿನಗೆ ಕಷ್ಟವಾದರೆ ನಿನ್ನ ತವರವರನ್ನೇಕೆ ಹಳಿಯುವೆ ಅವರ ಅನ್ಯಾಯವೇನು? ಕಷ್ಟಕೊಡುವ ಗಂಡನ ಮನೆಗಿಂತಲೂ ಸುಖಕೊಡುವ ನಿನ್ನ ತವರೂರಿಗೆ ಹೋಗಿ ಸುಖವಾಗಿರಬಹುದಲ್ಲವೇ ಎಂದು ನನಗೆ ಮಾರುತ್ತರ ಕೊಟ್ಟು ಹೆಚ್ಚು ಮಾತನ್ನಾಡದೆ ಮನೆಬಿಟ್ಟು ಹೋದವರು ಇನ್ನೂ ಬರಬಾರದೇ ಹೀಗೆ ಅವರು ಮಾಡುವರೆಂದು ತಿಳಿದಿದ್ದರೆ ಅವರ ಪಾದಕ್ಕೆ ಬಿದ್ದು ಪ್ರಾಯಶ್ಚಿತ್ತ ಬೇಡುತ್ತಿದ್ದೆ ಮಾವನವರೇ ಪತಿ ದೈವಾತ್ಪರಂನಾಸ್ತಿ ಎಂದು ತಿಳಿದಿದ್ದರೂ ಅಜ್ಞಾನದಿಂದ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವಾದರೂ ಏನು ಹೇಳಿರಿ ದಯಮಾಡಿ ನನ್ನ ಪತಿದೇವನನ್ನು ತೋರಿರಿ- ನನ್ನ ಕೃತಾಪರಾಧಕ್ಕೆ ಕ್ಷಮೆಯನ್ನು ಬೇಡುವೆ ನನ್ನ ಪತಿದೇವನ ದರ್ಶನವಾಗುವವರೆಗೂ ನಾನು ಬಾಯಲ್ಲಿ ನೀರನ್ನೇ ಹಾಕುವದಿಲ್ಲ. ಇಲ್ಲವೇ ನನ್ನ ಕೂಸನ್ನು ತೆಗೆದು

ಕೊಂಡು ನನ್ನ ಪತಿದೇವನನ್ನು ಹುಡುಕಲು ನನಗಪ್ಪಣೆ ಕೊಡಿರೆಂದು ಮಾವನನ್ನು ಪ್ರಾರ್ಥಿಸಿದರೆ ಅವರು ಸಮಾಧಾನದಿಂದ ಅಮ್ಮಾ ಸಂಗಮ್ಮಾ ಸಮಾಧಾನಳಾಗು ಜ್ಞಾನಿಯಾದ ನಿನಗೆ ಹೆಚ್ಚು ಹೇಳಲು ಕಾರಣವಿಲ್ಲಾ ಜ್ಞಾನಿಯಾಗಲಿ ಅಜ್ಞಾನಿಯಾಗಲಿ "ಕೃತ್ಯಂ ಕರ್ಮಶುಭಾಶುಭಂ" ಎಂಬ ನೇಮದಂತೆ ಬಂದುದನ್ನು ಅನುಭೋಗಿಸಲೇಬೇಕು. ನೀನು ಎಳೆಗೂಸನ್ನು ಕಟ್ಟಿಕೊಂಡು ಅನ್ನ ನೀರಿಲ್ಲದೆ ಹೀಗೆ ಹಲಬುತ್ತ ನಡೆದರೆ ನೀನು ನಿನ್ನ ಗಂಡನ ಸೇವೆಗೆ ಬದಲಾಗಿ ದ್ರೋಹ ಮಾಡಿದಂತಾಗುವದಿಲ್ಲವೇ ನೋಡು ನೀನು ಅನ್ನನೀರುಗಳನ್ನು ತೊರೆದರೆ ನಿನ್ನಗಂಡನ ಪ್ರತಿಬಿಂಬ ವಾದ ಈ ನಿನ್ನ ಕೂಸಿಗೆ ಹಾಲು ಎಲ್ಲಿಂದ ಬರಬೇಕು. ನೀನು ಹೀಗೆ ಮಾಡಿದರೆ ನಿನ್ನ ಕೂಸಿನ ಮತ್ತು ನಿನ್ನ ಗಂಡನ ನಮ್ಮೆಲ್ಲರ ದ್ರೋಹ ಮಾ ಡಿದಂತಾಗುವದಿಲ್ಲವೇ ನೀನೊಬ್ಬಳು ಹೀಗೆ ಮಾಡಿದರೆ ಮೊದಲೇ ಮುಪ್ಪಿ ನವರಾದ ನಾವೇನು ಮಾಡಬೇಕು. ಮಗನು ಮನೆಬಿಟ್ಟು ಹೋದ ದ್ದೊಂದು ಮೊದಲೇಚಿಂತೆ ಅದರಮೇಲೆ ನಿನ್ನ ಈ ಧೈನ್ಯಾವಸ್ಥೆಯನ್ನು ನೋಡಿದರೆ ಮುದುಕರಾದ ನಮಗೆ ಹುಣ್ಣಿನಮೇಲೆ ಬರೆ ಕೊಟ್ಟಂತಾಗು ವದಿಲ್ಲವೇ ಶಿವಶಿವಾ ಎಂದು ದುಃಖಿಸುತ್ತ ಇರಲಿ ಮಗಳೇ ನೀನೊಬ್ಬಳು ಶಾಂತಳಾದರೆ ಎಲ್ಲವೂ ಬಗೆಹರಿಯುತ್ತದೆ ನೀನು ನಿಶ್ಚಿಂತಳಾಗಿರು.

ನಿನ್ನ ಗಂಡನು ಬೇಕಾದಲ್ಲಿರಲಿ ಏಶ್ವಪ್ರಯತ್ನ ಮಾಡಿ ಶೋಧಿಸು ತ್ತೇವೆ ನಿನ್ನ ಗಂಡನೆಲ್ಲಿಗೂ ಹೋಗುವದಿಲ್ಲಾ ನಿನ್ನ ಕೂಸನ್ನು ಸಮಾ ಧಾನ ಪಡಿಸು. ಹೋಗು ಮನೆಯಲ್ಲಿ ಹೋಗಿ ಮನಸ್ಸಿನ ಮಲಿನತೆಯನ್ನು ದೂರಮಾಡಿ ಮಗುವಿಗೆ ಮೊದಲು ಮೊಲೆಯುಣಿಸು ನಾವು ನಿನ್ನ ಗಂಡನ ಶೋಧಕ್ಕಾಗಿ ಯಾವನಾದರೊಬ್ಬ ಯೋಗ್ಯ ಮನುಷ್ಯನನ್ನು ಈಗಲೇ ಕಳಿಸುತ್ತೇವೆ ಎಂದು ವೀರಯ್ಯನವರು ಸೊಸೆಯಾದ ಸಂಗಮ್ಮನಿಗೆ ಸಮಾ ಧಾನ ಹೇಳಿ ಮಗನನ್ನು ಹುಡುಕಲು ಒಬ್ಬ ಯೋಗ್ಯ ಮನುಷ್ಯನನ್ನು ಕರೆಯಿಸಿ ನಾಗಭೂಷಣ ದೇವನ ಗುರ್ತುಗಳನ್ನೆಲ್ಲಾ ಆ ಮನುಷ್ಯನಿಗೆ ಹೇಳಿ ತಮ್ಮಾ ನನ್ನ ಮಗನ ಸಾದಗೆಂಪಿನ ದೇಹ ವಿಶಾಲವಾದ ಕಣ್ಣು ಗಳು ಸ್ವಾರ್ಥರಹಿತವಾದ ಮನಸ್ಸು ಸಂಸಾರದೊಳು ವಿರತಿ ಸದಾ

ಆನಂದಮಯ ಸ್ವಭಾವದಿಂದ ಪ್ರಪಂಚದಲ್ಲಿದ್ದರೂ ಇಲ್ಲದವನಂತೆ ವರ್ತಿಸು ವಾತನಿಗೆ ಅಜ್ಞಾನಿಗಳಾದ ಮನೆಯ ಹೆಂಗಸರು ಮಂದ ಮತಿಗಳಾಗಿ ಮನ ನೋಯುವಂತೆ ಮತ್ಸರದ ಮಾತಗಳನ್ನಾಡಿ ಮಗನನ್ನು ಮನೆ ಬಿಡಿಸಿದರು. ಈ ಪ್ರಕಾರ ಎಲ್ಲಾ ವಿಷಯುಗಳನ್ನು ಆ ಮನುಷ್ಯನಿಗೆ ತಿಳುಹಿಸಿ ಅವನ ಖರ್ಚಿಗೆ ಕೆಲವು ಹಣವನ್ನು ಕೊಟ್ಟು ತಮ್ಮಾ ನನ್ನ ಮಗನು ಬೇಕಾದಲ್ಲಿದ್ದರೂ ನೀನು ಬಿಟ್ಟು ಬರಬೇಡಾ ಶೋಧ ಮಾಡಿ ಕರ ತರಲಿಕ್ಕೇ ಬೇಕು ಎಂದು ಆ ಮನುಷ್ಯನನ್ನು ನಾಗಭೂಷಣರ ಶೋಧ ಕ್ಕಾಗಿ ಕಳುಹಿಸಿದರು. ಇತ್ತ ಆ ಮನುಷ್ಯನು ಮಾರ್ಗದಲ್ಲಿ ಎದುರಾದ ವರಿಗೆ ನಾಗಭೂಷಣರ ಗುರ್ತುಗಳನ್ನೆಲ್ಲ ಹೇಳುತ್ತ ಇಂಥಾ ಆಕಾರ ವುಳ್ಳವರನ್ನು ನೀವು ಕಂಡಿರುವಿರಾ ಎಂದು ಕೇಳುತ್ತಾ ಹೊತ್ತು ಮುಳಗಿ ದಲ್ಲಿ ವಾಸ ಮಾಡುತ್ತ ದಾರಿಯಲ್ಲಿ ಕಂಡ ಕಂಡ ಊರೊಳಗೆಲ್ಲಾ ಅಲೆ ಯುತ್ತ ಊರೊಳಗಿನ ಗುಡಿ ಗುಂಡಾರಗಳಲ್ಲಿ ಹುಡಕುತ್ತಾ ಊರೂರಿಗೆ ಸಾಧು–ಸಜ್ಜನರು ಎಲ್ಯಾದರೂ ಇಳಿದಿದ್ದರೆ ತಾನೂ ಅಲ್ಲಿಯೇ ತಳವೂರಿ ನಾಗಭೂಷಣರ ವಿಷಯುವನ್ನೆತ್ತಿ ಈ ಪ್ರಕಾರ ಗುರ್ತುಳ್ಳ ಮನುಷ್ಯನನ್ನು ನೀವು ಎಲ್ಯಾದರೂ ಕಂಡಿದ್ದೀರಾ ಎಂದು ಅವರೊಡನೆ ಪ್ರಸ್ತಾಪನೆ ಮಾ ಡುತ್ತ ಸೂರ್ಯೋದಯುವಾದೊಡನೆ ಮತ್ತೂ ಮುಂದೆ ಪ್ರಯಾಣ ಮಾಡುತ್ತ ಹೀಗೆ ಎಂಟು ಹತ್ತು ದಿವಸಗಳಾದರೂ ಎಲ್ಲಿಯೂ ನಾಗಭೂಷಣರ ಶೋಧವಾಗದೆ ಆ ಮನುಷ್ಯನು ತನ್ನ ಮಾತೃಭೂಮಿಯಾದ ತೆಲಗು ದೇಶವನ್ನೆಲ್ಲಾ ಸಂಚಾರ ಮಾಡಿ ಕರ್ನಾಟಕದ ಗಡಿಯುಲ್ಲಿ ಕಾಲಿಟ್ಟನು ಕನ್ನಡ ದೇಶಕ್ಕೆ ಬಂದಾಕ್ಷಣವೇ ಕನ್ನಡ ಭಾಷೆ ತನಗೆ ಬಾರದ್ದಕ್ಕೆ ಜನ ರೊಡನೆ ಸೊನ್ನೆಯ ಮೇಲೆ ಮಾತಾಡುತ್ತಾ ಕಣ್ಣಿನಿಂದಲೇ ನಾಗಭೂಷ ಣರ ಗುರ್ತು ಹಚ್ಚುತ್ತಾ ಪುರಾಣ ಕೀರ್ತನೆ ನಡೆದಲ್ಲಿ ಅಲ್ಲಿಗೆ ಹೋಗಿ ನೋಡುತ್ತಾ ಎಲ್ಲಿ ನೋಡಿದರೂ ನಾಗಭೂಷಣರ ಸುಳವನ್ನು ಕಾಣದೆ ಕರ್ನಾಟಕದ ಗಡಿಯುಲ್ಲಿ ಕಲಬುರ್ಗಿ ಯಾದಗಿರಿ ಗೋಗಿ ಶಹಾಪೂರ ಸುರಪೂರ ಇಲಾಖೆಗಳನ್ನು ದಾಟಿ ಇಂಗ್ಲೀಷ ಗೌರ್ನಮೆಂಟ ಆಧಿಪತ್ಯದ ಲ್ಲಿದ್ದ ವಿಜಾಪೂರ ಜಿಲ್ಲಾ ಇಂಡಿ ಸಿಂದಗಿ ಬಸವನ ಬಾಗೇವಾಡಿ ತಾಲೂಕ ಗಳಲ್ಲಿ ಸಂಚಾರಿಸುತ್ತ ನಾಗಭೂಷಣರನ್ನು ಹುಡುಕಲಿಕ್ಕೆ ಹತ್ತಿದನು.

ಊರುಬಿಟ್ಟು ತಿಂಗಳಾಗಲಿಕ್ಕೆ ಬಂದಿದ್ದರೂ ಎಲ್ಲಿಯೂ ಕಾಣದೆ ಬೇಸತ್ತು ನಾಗಭೂಷಣರನ್ನು ಹುಡುಕುಲಾರದವೆ ಹಾಗೇ ಊರಿಗೆ ಹೋಗಲಿಕ್ಕೆ ನಿರ್ಬಂಧವಿದ್ದದರಿಂದ ಎಷ್ಟುದಿವಸವಾದರೂ ಅವರನ್ನು ಹುಡುಕಿಕೊಂಡು ಊರಿಗೆ ಕರಕೊಂಡುಹೋಗಿ ಅವರ ತಂದೆತಾಯಿಗಳಿಗೆ ಭೆಟ್ಟಿಮಾಡಿಸ ಲಿಕ್ಕೇಬೇಕೆಂಬ ಧೃಡಸಂಕಲ್ಪವುಳ್ಳವನಾಗಿ ಒಳ್ಳೇ ಕಳಕಳಿಯಿಂದ ಊರೂರಿಗೆ ಅಲೆದಾಡುತ್ತ ಅಂತ್ಯಕ್ಕೆ ನಮ್ಮ ನಾಗಭೂಷಣರಿರುವ ಯಲ ಗೋಡಗ್ರಾಮಕ್ಕೆ ಮುಟ್ಟುವವನಾದನು.

ಇಲ್ಲಿಗೆ ಇವನ ವಿಚಾರವನ್ನು ಬಿಟ್ಟು ನಾಗಭೂಷಣರು ಯಲ ಗೋಡಗ್ರಾಮಕ್ಕೆ ಬಂದು ಎಷ್ಟುದಿವಸಗಳಾದವು ಅವರು ಈಗ ಎಲ್ಲಿದ್ದಾರೆ ಏನು ಮಾಡುತ್ತಿದ್ದಾರೆ ಎಂಬುದನ್ನು ವಾಚಕರಾದ ನೀವೂ ನಾವೂ ತಿಳಿದು ಹುಡುಕಲಿಕ್ಕೆ ಬಂದ ಈ ಮನುಷ್ಯನಿಗೂ ನಾಗಭೂಷಣ ಶಿವಯೋಗಿಗ ಳಿಗೂ ಭೆಟ್ಟಿಮಾಡಿಸೋಣ ಶ್ರೀ ನಾಗಭೂಷಣ ಶಿವಯೋಗಿಗಳು ಮನೆ ಯತೊರೆದು ಮಾತಾಪಿತರ ಮರೆತು ಮಡದಿಮಕ್ಕಳ ಮಮತೆಯನ್ನು ಮನಸಾ ದೂರೀಕರಿಸಿ ತಮ್ಮ ಮಾತೃಭಾಷೆಯುಳ್ಳ ತೆಲಂಗಾಣದ ಅವರ ಪ್ರವಾದಸಲ್ಲಿ ಅವರಿಗೆ ಏನೂ ತ್ರಾಸ ಆದಂತೆ ಕಂಡುಬರುವದಿಲ್ಲ ಯಾಕಂದರೆ ಆಡುವ ಭಾಷೆಯೊಂದಾದ ಕಾರಣ ಲೋಕದ ನಡೆನುಡಿಗ ಳನ್ನು ತಿಳಿದು ಜನರಲ್ಲಿ ಶಿವತತ್ವವನ್ನು ಭೋಧಿಸಲು ಅನಕೂಲವಿದ್ದರೂ ಶ್ರೀ ಶಿವಯೋಗಿಗಳು ತಮ್ಮ ನಾಡಿನಲ್ಲಿಯೇ ನೆಲಸುವದರಿಂದ ತಮ್ಮ ಮನೆಯವರಿಂದಾಗಲಿ ಬಂಧುಬಳಗದವರಿಂದಾಗಲಿ ಮೇಲಿಂದ ಮೇಲೆ ತನ್ನ ಇರುವಿಕೆಯನ್ನು ತಿಳಿದು ತ್ರಾಸು ಕೊಡುವರೆಂಬ ಮುಂಜಾಗ್ರತೆ ಯಿಂದಲೋ ಅಥವಾ ವೀರಶೈವರಧಿಕ ಸಂಖೆಯುಳ್ಳ ಕರ್ನಾಟಕದ ಮೇಲಿನ ಪ್ರೇಮದಿಂದಲೋ ತನ್ನ ತೆಲಗು ದೇಶವನ್ನು ಬಿಟ್ಟು ಶಿವಭಕ್ತಿ ಯಲ್ಲಿ ಶಿಖರವನ್ನೇರಿದ ಕಲ್ಯಾಣ ಕಲಬುರ್ಗಿ ಮುಂತಾದ ಪುಣ್ಯಸ್ಥಳ ಗಳನ್ನು ದರ್ಶನ ಮಾಡುತ್ತ ಕಲ್ಯಾಣಕ್ರಾಂತಿಯು ಕಾಲಕ್ಕೆ ವೀರರಾಗಿ ಮೆರೆದು ಭಕ್ತಿಧ್ವಜವನ್ನು ಜಗತ್ತಿಗೆ ಕೈಯತ್ತಿ ತೋರಿ ವಚನ ಪ್ರಸಾರ ಮಾಡಿ ಆದ್ಯ ವಚನಕಾರರೆಂದು ಪ್ರಸಿದ್ಧ ಹೊಂದಿದ ದೇವರದಾಸಿಮ

ಯ್ಯನವರ ಜನ್ಮಸ್ಥಾನವಾದ ಕಲಬುರ್ಗಿ ಜಿಲ್ಹೆ ಸುರಪೂರ ತಾಲೂಕ ದಲ್ಲಿರುವ ಮುದನೂರ ಗ್ರಾಮಕ್ಕೆ ಹೋಗಿ ಅವರ ಸೈಗ್ಗಿ ಸ್ಥಾನವನ್ನು ದೇವರದಾಸಿಮಯ್ಯನು ತನ್ನ ವಚನಾಂತ್ಯದಲ್ಲಿ ಅಂಕಿತವಾಗಿಟ್ಟುಕೊಂಡ ರಾಮನಾಥ ದೇವಾಲಯುವನ್ನು ದರ್ಶನ ಮಾಡಿಕೊಂಡು ಅಲ್ಲಿಂದ ಕಾಯುಕವೇ ಕೈಲಾಸವೆನ್ನುವ ವಾಕ್ಯದಂತೆ ಶಿವಶರಣರ ವಸ್ತ್ರಗಳನ್ನು ಮಡಿಮಾಡುವ ವೀರಕಾಯುಕದಿಂದ ಜಗತ್ಪ್ರಸಿದ್ಧನಾದ ವೀರಘಂಟೆಯ ಮಡಿವಾಳ ಮಾಚೀ ದೇವನ ಗ್ರಾಮವಾದ ವಿಜಾಪೂರ ಜಿಲ್ಹಾ ಸಿಂದಗಿ ತಾಲೂಕ ಕಲಕೇರಿ ಗ್ರಾಮಕ್ಕೆ ಭೆಟ್ಟಿಕೊಟ್ಟು ಶಿವಶರಣರ ಸ್ಥಾನಗಳನ್ನು ನೋಡಿ ಮನಸ್ಸಿಗೆ ಅತ್ಯಾನಂದವುಳ್ಳವನಾಗಿ ಆದರೂ ಆಡುವಭಾಷೆ ಬೇರೆಯಾದದ್ದರಿಂದ ಜನರಲ್ಲಿ ಪರಸ್ಪರ ಸಂಭಾಷಣೆಗೆ ತಡೆಯುಂಟಾಗಿ ತನ್ನಿಂದ ಅವರಿಗೆ ಅವರಿಂದ ತನಗೆ ಯೇನೂ ತಿಳಿಯದವರಾಗಿ ಭಾಷೆ ಬದಲಾದ ಈ ಕನ್ನಡನಾಡಿನಲ್ಲಿ ಶಿವಭಕ್ತಿಲತೆಯು ನನ್ನಿಂದ ಹಬ್ಬ ಬೇಕಾದರೆ ನಾನು ಕನ್ನಡ ವಿದ್ಯೆಯನ್ನು ಕಲಿಯಲಾರದೆ ಗತ್ಯಂತರವಿಲ್ಲಾ ಕನ್ನಡ ವಿದ್ಯೆಯನ್ನು ನಾನು ಕಲಿಯಲಿಕ್ಕೇಬೇಕು ಯಂದು ದೃಡಸಂಕ ಲ್ಪವುಳ್ಳವರಾಗಿ ಕದೇಕ ಧ್ಯಾನದಲ್ಲಿಯೇ ಯಲಗೊಂಡ ಗ್ರಾಮಕ್ಕೆ ಬಂದು ಊರಮುಂದಿನ ಶಿವಾಲಯದಲ್ಲಿ ವಾಸಮಾಡಿ ಎಂಡೆರಡು ದಿವ್ಸಗಳಾಗಿರ ಬಹುದು ಆ ಊರ ಶಿವಭಕ್ತರು ಶಿವಯೋಗಿಗಳ ಆಚರಣೆ ಕ್ರಿಯಾದಿ ಗಳನ್ನು ನೋಡಿ ಇವರ ಆಚರಣೆಗೆ ಅನುಕೂಲರಾಗಿ ಇವರ ಸೇವಾಶು ಶ್ರೂಷೆಗಳನ್ನು ಮಾಡಲಿಕ್ಕೆ ಹತ್ತಿದರು ಒಂದು ದಿವಸ ಸಾಯಂಕಾಲ ಸಮಯದಲ್ಲಿ ಶಿವಭಕ್ತರೆಲ್ಲಾ ಕೂಡಿ ಶ್ರೀ ನಾಗಭೂಷಣರಿಂದ ತೆಲುಗಿ ನಲ್ಲಿ ಹೇಳುವ ಶಿವತತ್ವಗಳು ಒಂದೂ ತಿಳಿಯದೆ ಸ್ವಾಮಿಗಳೆ ನಮ್ಮ ಗ್ರಾಮದಲ್ಲಿ ಹಿರೇಮಠದ ರೇವಣಸಿದ್ದಯ್ಯನವರು ಕನ್ನಡದಲ್ಲಿ ಪಂಡಿತ ರಿದ್ದಾರೆ ಅವರಿಂದ ನೀವು ಕನ್ನಡ ವಿದ್ಯೆಯನ್ನು ಸ್ವಲ್ಪದಿವಸಗಳಲ್ಲಿಯೇ ಕಲಿಯ ಬಹುದು ನಮ್ಮ ನಾಡಿನಲ್ಲಿ ನಮ್ಮ ಸಮಾಜದಲ್ಲಿ ನಿಮ್ಮ ಶಿವ ಸಿದ್ಧಾಂತವು ಪ್ರಸಿದ್ಧವಾಗಬೇಕಾದರೆ ನೀವು ಕನ್ನಡ ವಿದ್ಯೆಯನ್ನು ಅವಶ್ಯ ಕಲಿಯಲಿಕ್ಕೇಬೇಕು.

ಈ ಪ್ರಕಾರ ಭಕ್ತರೆಲ್ಲಾ ಪ್ರಾರ್ಥನೆ ಮಾಡಲು ಅದಕ್ಕೆ ಶಿವಯೋಗಿಗಳು ಹಾಗೆ ಆಗಲಿ ಎಂದು ಸಮ್ಮತಿಸಿದ ನಂತರ ಭಕ್ತರೆಲ್ಲಾ ಹೊತ್ತು ಬಹಳ ಆದ್ದರಿಂದ ನಾಗಭೂಷಣರಿಗೆ ನಮಸ್ಕಾರ ಮಾಡಿ ತಮ್ಮ ತಮ್ಮ ಮನೆಗೆ ಹೋದಾಕ್ಷಣವೇ ಅದೇ ಸಮಯವನ್ನು ಕಾಯುತ್ತಿದ್ದ ಶಿವಯೋಗಿಗಳ ಶೋಧಕ್ಕಾಗಿ ಬಂದ ದಾರೂರಿನ ಮನುಷ್ಯನು ನಾಗಭೂಷಣರ ದರ್ಶನವಾದೊಡನೆ ಹಿಡಿಸಲಾರದಷ್ಟು ಆನಂದವುಳ್ಳವನಾಗಿ ಯಾವಾಗ ಮಾತಾಡಿಸಲಿ ಎಂಬ ಕುತೂಹಲದಿಂದ ಶಿವಯೋಗಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಇವರ ಪೂರ್ವಸ್ಥಿತಿ ಬದಲಾವಣೆಯನ್ನು ಮನಸ್ಸಿನಲ್ಲಿಯ ವೈರಾಗ್ಯ ಭಾವವನ್ನು ತಿಳಿದು ತಾನು ಬಂದ ಸಮಾಚಾರವನ್ನೆಲ್ಲಾ ಶ್ರೀ ಶಿವಯೋಗಿಗಳಿಗೆ ಅರಿಕೆ ಮಾಡಿ ತಾವು ಊರಿಗೆ ಬರಬೇಕು ನಿಮ್ಮ ಮಾತಾಪಿತೃಗಳು ಮಡದಿ ಮಕ್ಕಳು ಮಹಾ ಚಿಂತೆಯಿಂದ ಮರಣೋನ್ಮುಖರಾಗಿದ್ದಾರೆ ಊರ ಜನರೆಲ್ಲಾ ತಮ್ಮನ್ನೇ ಇದಿರು ನೋಡುತ್ತಿದ್ದಾರೆ ನನ್ನನ್ನು ಎಲ್ಲರೂ ಕೂಡಿ ನಿಮ್ಮನ್ನು ಹುಡುಕಿ ಊರಿಗೆ ಕರತರಲಿಕ್ಕೆ ಕಳುಹಿಸಿದ್ದಾರೆ ನೀವು ಊರುಬಿಟ್ಟ ದಿವ್ಸವೇ ನಾನು ಹೊರಟವನು ಈಗ ತಿಂಗಳಿಂದ ನಿಮ್ಮನ್ನು ಹುಡುಕದ ಊರುಗಳೇ ಉಳಿದಿಲ್ಲ ಈ ದಿವ್ಸ ತಮ್ಮ ದರ್ಶನದಿಂದ ಧನ್ಯನಾದೆನು.

ಗುರುದೇವಾ ಎಲ್ಲರನ್ನು ಅಗಲಿ ತಾವು ಈ ಪ್ರಕಾರ ಬರ ಬಹುದೇ ದಯಮಾಡಿ ಮಡದಿ ಮಕ್ಕಳ ಮೇಲಣ ಮೋಹದಿಂದಾಗಲಿ ಮುಪ್ಪಿನಿಂದ ಮರಣಕ್ಕೆ ಸಮೀಪರಾದ ಮಾತಾಪಿತೃಗಳ ಮೇಲಣ ಭಕ್ತಿಯಿಂದಾಗಲಿ ತಮ್ಮ ಬಂಧು ಬಳಗ ಊರ ಜನರೆಲ್ಲ ತಮ್ಮಲ್ಲಿಟ್ಟಿರುವ ವಿಸ್ವಾಸದಿಂದಾಗಲಿ ತಾವು ನನ್ನೊಡನೆ ತಿರುಗಿ ಊರಿಗೆ ಬರಲಿಕ್ಕೇ ಬೇಕು ಎಂದು ಅತ್ಯಂತ ಆಗ್ರಹ ಪೂರ್ವಕವಾಗಿ ಬಂದ ಮನುಷ್ಯನು ಅರಿಕೆ ಮಾಡಿಕೊಳ್ಳಲು ನಮ್ಮ ಶ್ರೀ ನಾಗಭೂಷಣ ಶಿವಯೋಗಿಗಳು ಆ ಮನುಷ್ಯನನ್ನು ಆದರ ಪೂರ್ವಕವಾಗಿ ತಮ್ಮ ಸಮೀಪದಲ್ಲಿ ಕುಳ್ಳಿರಿಸಿ ಕೊಂಡು ತಮ್ಮಾ ನೀನು ಹೇಳುವಂತೆ ನಾವು ಪುರಾಣ ವೈರಾಗ್ಯ ಪ್ರಸೂತ ವೈರಾಗ್ಯ ಅಥವಾ ಸ್ಮಶಾನ ವೈರಾಗ್ಯದಿಂದ ಮನೆಬಿಟ್ಟು ಬಂದವರಲ್ಲ ಅನಿತ್ಯವಾದ

ಕ್ಷಣಿಕವಾದ ನಿಸ್ಸಾರದಾದ ಸಂಸಾರದಲಿದ್ದು ಮಹತ್ತರವಾದ ಮಾನವ ಜನ್ಮವನ್ನು ವ್ಯರ್ಥಗೊಳಿಸುವದಕಿಂತ–

ಅನಿತ್ಯಾನಿಶರೀರಾಣಿ। ವಿಭವೋನ್ನೈವಶಾಶ್ವತಃ॥
ನಿತ್ಯಂ ಸನ್ನಿಹಿತೋಮೃತ್ಯುಃ। ಕರ್ತವ್ಯೋ ಧರ್ಮಸಂಗ್ರಹಃ

ಎಂಬಶಾಸ್ತ್ರದಂತೆ ನೀನು ನಮ್ಮನ್ನು ಕರೆದೊಯ್ದು ಹಚ್ಚುವ ಸಂಸಾರದಲ್ಲಿ ಯಾವದು ನಿತ್ಯವಿದೆ ಜನನಮರಣದಿಂದ ಕೂಡಿದ ಹೆಂಡರು ಮಕ್ಕಳು ತಂದೆತಾಯಿ ಅಣ್ಣತಮ್ಮ ಬಂಧುಬಳಗವೆಲ್ಲಾ–

ಋಣಾನುಬಂಧರೂಪೇಣ। ಪಶುಪತ್ನಿಸುತಾಲಯಃ॥
ಋಣಕ್ಷಯೇಕ್ಷಯಂ ಯಾಂತಿ। ಕಾಕತ್ರಪರಿವೇದನಾ॥

ಎಂಬ ನೀತಿಶಾಸ್ತ್ರದಂತೆ ತಮ್ಮ ತಮ್ಮ ರುಣಕ್ಷಯವಾದೊಡನೆ ಒಬ್ಬರಿಗೊಬ್ಬರು ಆಗಲುವವರೆ ಅಥವಾ ನಾವಾದರೂ ಕಲ್ಪಾಂತರದ ವರೆಗೆ ಈ ಭೂಮಿಯ ಮೇಲೆ ಇರುವಂತಿಲ್ಲ ಸಾಯುವವರೆಗೂ ಹೆಂಡರು ಮಕ್ಕಳು ಧನಕನಕ ಭೂಮಿ ಇವುಗಳ ಭ್ರಾಂತಿಯಲ್ಲಿ ಬಿದ್ದು ಅಂತ್ಯಕ್ಕೆ ತಾನೂ ಮಣ್ಣಾಗಿ ಹೋಗುವದೆ ಪುರಷಾರ್ಥವಲ್ಲ ರಾಗದ್ವೇಷಾದಿ ಪಂಚ ಕ್ಲೇಶಗಳಿಂದ ಕೂಡಿದ ಪ್ರಪಂಚದಲ್ಲಿ ಹೊನ್ನು ಹೆಣ್ಣು ಮಣ್ಣು ಇವು ಗಳೇ ಪುರಷಾರ್ಥವೆಂದು ನಂಬುವದು ಜಗತ್ತಿನಭಾವನೆ. ಹಾಗಲ್ಲ ತಮ್ಮಾ ವಿಚಾರಮಾಡಿ ನೋಡಿದರೆ ಇವಕ್ಕೆಲ್ಲ ನಾಶವುಂಟು. ಪರಮಾತ್ಮನು ಮಾನವಗೆ ಮಹತ್ತರವಾದ ಜ್ಞಾನವನ್ನು ನಶ್ವರವಾದ ಈ ಅಲ್ಪ ಸುಖಕ್ಕಾಗಿಯೇ ಕೊಟ್ಟಿಲ್ಲ. ನಮ್ಮ ಪೂರ್ವಪುಣ್ಯ ವಿಶೇಷ ದಿಂದಲೇ ಅನಾಯಾಶವಾಗಿ ವಿವೇಕ ವಿದ್ಯಾ ವಿಚಾರದಿಂದೊಡಗೂಡಿದ ಈ ಮಾನವ ಶರೀರವನ್ನು ಕರುಣಿಸಿದ್ದಾನೆ ಅಂದಮೇಲೆ ಮಾನವನಿಗೆ ಮಹದುಪಕಾರ ಮಾಡಿದ ಮಹಾದೇವನ ಮಮತೆಗೆ ಪಾತ್ರರಾಗಿ ಶಾಶ್ವತಗಳಾದ ನೀತಿಕ್ರಿಯಾಚಾರದಿಂದ ನಡೆದು ಜಗತ್ತಿನಲ್ಲಿ ನುಡಿದಂತೆ ನಡೆದು ಜಗತ್ಪ್ರಸಿದ್ಧರಾಗಿಹೋದ ನಮ್ಮ ಶಿವಶರಣರ ಹೆಸರನ್ನು ಕೇಳಿ

ಲ್ಲವೇ ಅವರಿಗೇನೇ ಪುರುಷರೆನ್ನಬೇಕು. ಅವರು ಗಳಿಸಿದ್ದೇ ಪುರುಷಾರ್ಥ. ಅವರು ಭೌತಿಕಶರೀರದಿಂದ ಮರೆಯಾಗಿದ್ದರೂ ಅವರ ಕೀರ್ತಿಕಾಯಮಾತ್ರ ಅಚಂದ್ರಾರ್ಕವಾಗಿದೆ. ತಮ್ಮಾ ಎಷ್ಟು ಹೇಳುವದೇನು ಕಾಯಾ ವಾಚಾ ಮನಸಾ ಪ್ರಪಂಚವನ್ನು ಹೇಯ ಭಾವನೆಯಿಂದ ತೊರೆದು ಬರೇ ಮನೆಯನ್ನಷ್ಟೇ ಅಲ್ಲ ಜಗತ್ತಿನ ಜನರಲ್ಲಿಯೂ ಬೇಕು ಬೇಡೆಂಬ ಭಾವನೆಯನ್ನು ನಾಶಮಾಡಿ ವಿಶ್ವವನ್ನೇ ವೈರಾಗ್ಯ ದೃಷ್ಟಿಯಿಂದ ನೋಡುವ ನಾನು ಪುನಃ ಮನೆಗೆ ಬರುವದೆಂದರೆ ವಮನಮಾಡಿಕೊಂಡ ಪದಾರ್ಥವನ್ನು ಪುನಃ ಅಪೇಕ್ಷೆಮಾಡಿದಂತಾಗುವದಿಲ್ಲವೇ ನಾನೊಬ್ಬನು ಊರು ಬಿಟ್ಟು ಬಂದರೇನಾಯಿತು ಹಡೆದವರಿಗೆ ಊರ ಜನರಿಲ್ಲವೇ ಹೆಂಡತಿಗೆ ಸುಖವಾಗಿ ಕಾಲಕಳೆಯಲು ತವರೂರಿಲ್ಲವೇ ಪರಮಾತ್ಮನ ಪ್ರೇರಣೆಯಂತೆ ನಾನೊಬ್ಬನೆ ಮನೆಬಿಟ್ಟು ಬಂದಿರುವೆನಲ್ಲದೆ ಯಾರ ಪದಾರ್ಥವನ್ನೇನೂ ತಂದಿಲ್ಲ. ಇನ್ನುಮೇಲೆ ನನ್ನ ಆಶೆಯನ್ನು ಬಿಟ್ಟು ಸುಖವಾಗಿ ಸಂಸಾರಮಾಡಿರೆಂದು ಅವರಿಗೆ ನೀನು ಹೇಳು ಅವರಿಗೂ ಸಂಸಾರ ಸಾಕಾಗಿದ್ದರೆ ಶೇಷಾಯುಷ್ಯವನ್ನು ಸದಾಶಿವನ ಸೇವೆಯಲ್ಲಿ ಸವೆಯಿಸಿ ಸದ್ಗತಿಯನ್ನು ಹೊಂದಬಹುದು.

ಹೋಗು ನೀನು ಸುರಕ್ಷಿತವಾಗಿ ಊರಿಗೆ ಹೋಗಿ ಇನ್ನುಮೇಲೆ ಎಲ್ಲರಿಗೂ ನನ್ನ ಮೇಲಿನ ಆಶೆಯನ್ನು ತೊರೆಯಲಿಕ್ಕೆ ತಿಳಿಸು ಇನ್ನು ಮುಂದೆ ನನ್ನನ್ನು ಹುಡುಕುವ ಉದ್ಯೋಗವನ್ನೇ ಅವರಿಗೆ ಮಾಡಬೇಡಿರೆಂದು ಮನಸ್ಸಿನಿಂದ ಹೇಳು. ಭ್ರಾಂತಿಬಿದ್ದು ಹುಡಕಲಿಕ್ಕೆಹತ್ತಿದರೆ ಈಗ ಸಿಕ್ಕಂತೆ ಇನ್ನುಮುಂದೆ ಎಲ್ಲಿಯೂ ಶಿಗಲಾರೆ ಸುಮ್ಮನೇ ವ್ಯರ್ಥ ಶ್ರಮಪಡುವದು ನಿರರ್ಥಕವಲ್ಲವೇ ನೀನಾದರೂ ತಿಳಿದು ಬಂದದಾರಿಗೆ ಸುಂಕವಿಲ್ಲದಂತೆ ವಿಮುಖನಾಗಿ ಊರಿಗೆ ಹೋಗು ದೇವರು ನಿನಗೂ ನಿನ್ನ ಊರವರಿಗೂ ಕಲ್ಯಾಣ ಮಾಡಲಿಯೆಂದು ಶ್ರೀ ನಾಗಭೂಷಣಶಿವಯೋಗಿಗಳು ಬಂದ ಮನುಷ್ಯನಿಗೆ ತಮ್ಮ ನಿಜಸ್ಥಿತಿಯನ್ನು ಅರುಹಿದಾಕ್ಷಣವೇ ಆ ಮನುಷ್ಯನು ಮನದಲಿ ಮರಮರನೆ ಮರುಗಿ ಶ್ರೀ ಶಿವಯೋಗಿಗಳ ಸಂಸಾರಮೇಲಣ ವೀರ ವಿರತಿಯನ್ನು ಕಂಡು ಎಲ್ಲರಿಗೂ

ಈ ಸ್ಥಿತಿಯು ಬರಬೇಕಾದರೆ ಪೂರ್ವಪುಣ್ಯ ಪ್ರಬಲವಾಗಿರಬೇಕು. ಆಗಲಿ (ಈಶ್ವರೇಚ್ಛಾಗರಿಯಿಸಿ) ಎಲ್ಲವೂ ಶಿವನಿಚ್ಛೆಇದ್ದಂತೆ ಆಗುತ್ತದೆ. ಎಂದು ಮತ್ತೊಮ್ಮೆ ಕಣ್ಣುತುಂಬ ಶ್ರೀ ಶಿವಯೋಗಿಗಳನ್ನುನೋಡಿ ಶಿವಯೋಗಿಗಳನ್ನುಬಿಟ್ಟು ಹೋಗುವ ಮನಸ್ಸಿಲ್ಲದೇ ಮೆಲ್ಲಮೆಲ್ಲನೆ ಊರ ಕಡೆ ದಾರಿಹಿಡಿದು ಎಂಟ್ಹತ್ತು ದಿವಸಗಳಲ್ಲಿ ದಾರೂರಿಗೆ ಮುಟ್ಟಿ ಶ್ರೀ ನಾಗಭೂಷಣ ಶಿವಯೋಗಿಗಳ ಮಡದಿ-ಮಕ್ಕಳು ಮಾತಾಪಿತೃಗಳಿಗೂ ಮತ್ತು ಊರವರಿಗೂ ಶ್ರೀ ನಾಗಭೂಷಣರವರು ಬರುವದಿಲ್ಲವೆಂಬ ಖಂಡಿತ ಉತ್ತರವನ್ನೂ ಅವರ ಬದಲಾಯಿಸಿದ ನಿರಾಶಾಮಯವಾದ ಸ್ಥಿತಿಯನ್ನೂ ಪರಮ ವೈರಾಗ್ಯದಿಂದ ವೆಗ್ಗಳವಾಗಿ ಪ್ರಕಾಶಿಸುವ ದೇಹಕಾಂತಿಯನ್ನೂ ಅವರ ಪ್ರತಿನಿತ್ಯದ ವೀರಶೈವ ಧರ್ಮದ ಬದ್ಧಕಟ್ಟಾಚರಣೆಯನ್ನೂ ಹಿಂದಿನ ಹಿರಿಯರೂ ವಚನ ವಾಙ್ಮಯಪ್ರಸಾರಕರೂ ಆದ ಬಸವಾದಿ ಶಿವಶರಣರ ಮೇಲಣ ಅವರ ಹಂಬಲವನ್ನೂ ಬೇಕಾದಷ್ಟು ಪ್ರಯತ್ನಮಾಡಿದರೂ ಇನ್ನುಮುಂದೆ ಅವರು ಈ ಜಡವಾದ ಜಗತ್ತಿನ ಜಂಜಡದಲ್ಲಿ ಬೀಳಲಾರರೆಂದೂ ಅವರ ವಿಷಯು ಇನ್ನು ಮುಂದೆ ಯಾರೂ ಪ್ರಯತ್ನ ಮಾಡಬಾರದೆಂದೂ ಪ್ರಯತ್ನ ಪಟ್ಟರೂ ಶ್ರಮಸಾಧ್ಯರಲ್ಲವೆಂದೂ ಸಾಧ್ಯಂತ ವಿಷಯವನ್ನು ಸವಿಸ್ತಾರವಾಗಿ ಎಲ್ಲರಿಗೂ ತಿಳಿಸಲು ಎಲ್ಲರೂ ಅತ್ಯಂತ ದುಃಖಿತರಾಗಿ ಮುಪ್ಪಿನವರಾದ ವೀರಯ್ಯ ವೀರಮ್ಮನವರು ಶಿವಶಿವಾ ಮರಣೋನ್ಮುಖರಾದ ನಮಗೆ ಮುಂದೇನುಗತಿ ಮಗನ ಮಮತೆಯನ್ನು ಹೇಗೆ ಮರೆಯಬೇಕು ಅಹರ್ನಿಶ ಘನಮಠೇಶ ಗುರುಗಳನ್ನು ಮರೆಯದ ನಾಗಭೂಷಣಾ ನಿನ್ನನೆನವನ್ನು ಹೇಗೆ ಮರೆಯೋಣವೆಂದು ಇವರು ಹಲಬುತ್ತಿರಲು ಸತಿಯಾದ ಸಂಗಮ್ಮನು ತನ್ನ ಪತಿಯ ಪ್ರಪಂಚದಮೇಲಿನ ವೈರಾಗ್ಯವನ್ನು ಕೇಳಿದಾಕ್ಷಣವೇ ಹೃದಯಕ್ಕೆ ಸಾವಿರ ಚೇಳು ಕಡಿದಷ್ಟು ಬಾಧೆಯಾಗಿ ನನ್ನ ಅಜ್ಞಾನದಿಂದ ಆಡಿದ ಅವಾಚ್ಯಶಬ್ದಗಳಿಂದಲೇ ಇಷ್ಟೆಲ್ಲ ಅನಾಹುತವಾಯಿತು. ಇವಕ್ಕೆಲ್ಲ ನಾನೇಕಾರಣಳು.

ಪತಿದ್ರೋಹಕ್ಕೆ ಪಾತ್ರವಾದ ಈ ಪಾಪೀ ಜನ್ಮಕ್ಕೆ ಯಾವ ಪ್ರಾಯಶ್ಚಿತ ಹೊಂದಲಿ ಹಿಂದಿನ ಜನ್ಮದಲ್ಲಿ ಯಾವ ಸತಿಪತಿಗಳನ್ನಗಲಿಸಿದ್ದೆನೋ

ಎಂದು ಅನಂತ ರೀತಿಯಿಂದ ಹಂದರವಿಲ್ಲದ ಬಳ್ಳಿಯು ನೆಲಕ್ಕೆ ಕುಪ್ಪರಿಸಿ ಬೀಳುವಂತೆ ಪತಿರಹಿತಳಾದ ಸಂಗಮ್ಮನು ಶೋಕ ಸಾಗರದಲ್ಲಿ ಬಿದ್ದು ಹೌಹಾರಿ ಎದೆ ಎದೆ ಬಡಕೊಂಡು ಮೂರ್ಛೆ ಬಂದು ನೆಲಕ್ಕೆ ಬಿದ್ದಾಕ್ಷಣವೇ ಕೂಡಿದ ಸದ್ಗೃಹಸ್ಥರು ಶೈತೋಪಚಾರಗಳನ್ನು ಮಾಡಿ ಸಂಗಮ್ಮನು ಶುದ್ಧಿಯವೇಲೆ ಬಂದನಂತರ ಸಂಗಮ್ಮನವರಿಗೂ ಅತ್ತೆಮಾವಂದಿರಾದ ವೀರಯ್ಯ ವೀರಮ್ಮನವರಿಗೂ ಇನ್ನು ಮುಂದೆ ನೀವು ಮಗನ ಮೋಹವನ್ನು ತೊರೆದು ಮಗನ ಹೇಳಿಕೆಯಂತೆ ಶಿವನಾಮ ಸ್ಮರಣೆಯಲ್ಲಿಯೇ ಶೇಷಾಯುಷ್ಯವನ್ನು ಕಳೆದು ಸದ್ಗತಿಯನ್ನು ಹೊಂದಿರಿ. ಸುಮ್ಮನೇ ಹೃದ್ರೋಗ ಹಚ್ಚಿಕೊಂಡು ಕೊರಗಬೇಡಿರಿ ಮಿಂಚಿಹೋದ ಕಾರ್ಯಕ್ಕೆ ವೃಥಾ ಚಿಂತಿಸಬಾರದು ಎಂದು ಅವರಿಗೆ ನಾಲ್ಕು ಉಪಚಾರದ ಮಾತುಗಳನ್ನು ಹೇಳಿ ನಮ್ಮ ಚರಿತ್ರನಾಯಕರಾದ ನಾಗಭೂಷಣರ ಗುಣಗಾನ ಮಾಡುತ್ತ ತಮ್ಮ ಮಂದಿರುಗಳಿಗೆ ಮರುಳಿದರು.

## ೨ ನೆಯ ಪ್ರಕರಣಂ ಸಮಾಪ್ತಂ



## ೩ ನೆಯ ಪ್ರಕರಣಂ



(ವಾರ್ಧಿಕ ಷಟ್ಪದಿ)

* ನೂರಾರುಕಲೆಗಳಿಗೆ ನೆಲೆಯಾಗಿ ಶಿಲೆಯಾಗಿ।
ವೀರಚನ್ನಮ್ಮ ಮಲ್ಲಮ್ಮಾದಿಗಳಿಗೆ ತವ।
ರೂರಾಗಿ ವಿಜಯನಗರಾದಿ ರಾಯರಿಗೆ ತಾಯ್ಮಾಡಾಗಿ ಬೀಡಾಗಿರೇ॥೧॥
ವೀರಶೈವಾಚಾರಕಾದಿ ಮನೆಯಾಗಿ ಪರಿ।
ಪೂರಧನಧಾನ್ಯಭಾಂಡಾಗಾರವಾಗಿ ಶಿರಿ।
ಭಾರತಕೆ ಗುರುಕುಲವದಾಗಿ ಮೆರೆಯುವದೆನ್ನ ಪೊನ್ನ ಕನ್ನಡದನಾಡು॥

## ಶ್ರೀ ಶಿವಯೋಗಿಗಳು ಕನ್ನಡ ಕಲಿತು ಕನ್ನಡದಲ್ಲಿ ಕವಿತ್ವ ಮಾಡುತ್ತ ಕನ್ನಡ ದೇಶವನ್ನೆಲ್ಲ ಸಂಚಾರ ಮಾಡುವಿಕೆ

ಭರತಖಂಡದಲ್ಲಿ ನಮ್ಮ ಕನ್ನಡ ನಾಡಾದರೂ ಇನ್ನುಳಿದ ಯಾವನಾಡುಗಳಿಗಿಂತಲೂ ಯಾವುದರಲ್ಲಿಯೂ ಹಿಂದುಳಿಯದೇ ಸದಾವಕಾಲದಲ್ಲಿಯೂ ಸರ್ವಸಂಪತ್ ಸಮೃದ್ಧಿಯಿಂದ ಮೆರೆದುದಾಗಿದೆ ಅನಂತ ನದಿಗಳಿಂದಲೂ ಗಿರಿತಟಾಕದಿಂದಲೂ ಪುಣ್ಯ ತೀರ್ಥಕ್ಷೇತ್ರಗಳಿಂದಲೂ ಸಾಧುಸತ್ಪುರುಷರ ಯೋಗಿಗಳ ತಪಸ್ವಿಗಳ ತವರ್ಮನೆಯಾಗಿಯೂ ವೇದವೇದಾಂತ ವ್ಯಾಕರಣತರ್ಕ ಮೀಮಾಂಸಾದಿಸಾಹಿತ್ಯದಲ್ಲಿ ಪ್ರಸಿದ್ಧರಾದ ಪಂಡಿತ ಕವಿಗಳಿಂದಲೂ ಅನ್ಯ ನಾಡುಗಳಿಗಿಂತ ಯಾವ ವಿಷ

---

*ಚನ್ನಕವಿಕೃತ ಬಾಲಲೀಲಾ ಮಹಾಂತೇಶ ಪುರಾಣ (ಸಂಧಿ ೨)(ಪದ ೬)

ಯದಲ್ಲಿಯೂ ಹಿಂದುಳಿಯದೆ ಸರ್ವಸಾಹಿತ್ಯ ಸಮೃದ್ಧಿನಾಡಾಗಿ ನೋಡು
ವವರ ಕಣ್ಮನಂಗಳಿಗೆ ಕಂಗೊಳಿಸುವಂಥಾದ್ದಾಗಿದೆ ಅದರಲ್ಲಿಯೂ
ಅನಂತ ಮತಗಳಿಂದ ಕೂಡಿದ ಈ ಕನ್ನಡ ನಾಡಿನಲ್ಲಿ ವೀರಶೈವರಿರು
ಈ ಕನ್ನಡ ನಾಡಿನಲ್ಲಿಯೇ ವೀರಶೈವ ಮತಸ್ಥಾಪನಾ ಚಾರ್ಯರಾದ
ಶ್ರೀ ಜಗದ್ಗುರು ರೇಣುಕ ದಾರುಕ ಶಿವಾಚಾರ್ಯರಿಂದ ಉಜ್ಜಯನಿ
ಬಾಳೆಹೊನ್ನೂರಲ್ಲಿ ಸ್ಥಾಪಿಸಲ್ಪಟ್ಟ ಸದ್ಧರ್ಮ ಸಿಂಹಾಸನಗಳಿಂದಲೂ
ಪರಮ ತಪಸ್ವಿಗಳಾದ ನಿರಂಜನ ನಿರಾಭಾರಿ ದೇಶಿಕವರೇಣ್ಯರಿಂದ ಚಿತ್ರ
ಕಲ್ಲ್ದುರ್ಗ ಹುಬ್ಬಳ್ಳಿ ಗದಗ ಉರವಕೊಂಡಿ ಗುರುಮಟಕಲ್ಲ್ ಮಹಾ
ಗ್ರಾಮಗಳಲ್ಲಿ ಸ್ಥಾಪಿಸಲ್ಪಟ್ಟ ಶೂನ್ಯ ಸಿಂಹಾಸನಗಳಿಂದಲೂ ದಕ್ಷಿಣ
ಕಾಶಿಯೆಂದು ಪ್ರಸಿದ್ಧಿ ಹೊಂದಿ ಕನ್ನಡ ದೇಶದ ಸಂಸ್ಕೃತಿಗೆ ಕಲಸಪ್ರಾ
ಯವಾದ ವಿಜಯನಗರದಲ್ಲಿ ವಿಖ್ಯಾತವಾದ ಪಂಪಾ ಕ್ಷೇತ್ರದಿಂದಲೂ
ಶಿವಭಕ್ತಾಗ್ರೇಸರನಾದ ಲಂಕಾಧಿಪತಿ ರಾವಣೇಶ್ವರನಿಂದ ಸ್ಥಾಪಿಸಲ್ಪಟ್ಟ
ಮಹಾಬಲೇಶ್ವರ ಲಿಂಗದಿಂದಲೂ ಪ್ರಥಿತರಾದ ಬಸವ ಚನ್ನಬಸವ ಸಿ
ರಾಮ ಪ್ರಭುದೇವ ಅಕ್ಕಮಹಾದೇವಿ ಮೊದಲಾದ ಶಿವಶರಣ ಶಿವಶರಣೆಯ
ರಿಂದಲೂ ಹರಿಹರ ರಾಘವಾಂಕ ಷಡಕ್ಷರಿದೇವ ಮೊದಲಾದ ಶಿವಕ
ಗಳಿಂದಲೂ ಈ ವಿಶಾಲವಾದ ವಿಶ್ವವನ್ನೇ ತಮ್ಮ ಆಧ್ಯಾತ್ಮಿಕ ಶ
ಯಿಂದ ಗಜಗಣಿತ ಅಳತೆ ಮಾಡಿ ಆರು ಶಾಸ್ತ್ರ ಬರೆದ ಶ್ರೀ ನಿಜಗು
ಸಪ್ಪಣ್ಣಾರ್ಯ ಶಿವಯೋಗಿಗಳಿಂದಲೂ ಸರ್ವ ಸಂಪತ್ ಸಮೃದ್ಧಿ ನಾಡಾ
ಕಂಗೊಳಿಸುವ ಕನ್ನಡ ನಾಡಿನಲ್ಲಿಯೇ ಹಿಂದಿನ ಶತಮಾನ ಅಂದ
ಶಾಲಿವಾಹನ ಶಕೆ (೧೭೦೦) ರಲ್ಲಿಯೇ ಅನ್ಯ ಮತೀಯರಾದ ಇಂಗ್ಲೀ
ಮುಸಲ್ಮಾನರ ಆಳಿಕೆಯ ಅತ್ಯಾಚಾರದಿಂದಲೂ ಕಲಿರಾಜನ ಮಹಿ
ಯಿಂದಲೂ ಸದಾವಕಾಲದಲ್ಲಿಯೂ ಸದಾಚಾರ ಸದ್ಧರ್ಮ ನೀತಿ ಸದಾ
ವಳಿಗಳಿಂದ ನಡೆಯುವ ವೀರಶೈವರು ಶ್ವೇಚ್ಛಾಚಾರಗಳಿಂದ ಅಧೋ
ಕಿಗಿಳಿದು ಧರ್ಮಗ್ಲಾನಿಯಾದಾಕ್ಷಣವೇ ಕೈಲಾಸ ವಾಸಿಯಾದ ಪರಮಾ
ತ್ಮನು ಮರ್ತ್ಯದಲ್ಲಿ ಮಂದಮಾನವರಾದ ನಾಸ್ತಿಕರಿಂದ ತನ್ನ ಧರ್ಮ
ಗ್ಲಾನಿಯಾದದ್ದನ್ನು ಕಂಡು ತಾನು ನುಡಿದ ಶೃತಿವಾಕ್ಯವನ್ನು ಶೃತಿಪಥ
ತಂದುಕೊಂಡು–

ಯದಾಯದಾಹಿ ಧರ್ಮಸ್ಯ । ಗ್ಲಾನಿರ್ಭವತಿಭೂತಲೇ ।
ತದಾತದಾವತಾರೋಯಂ । ಗಣೇಶಸ್ಯ ಸೃಜಾಮ್ಯಹಂ ॥೧೦॥

ಎಂಬ ವಾಕ್ಯದಂತೆ ತನ್ನ ಶಿವಸಭೆಯಲ್ಲಿದ್ದ ಓರ್ವ ಗಣವರನನ್ನು ತನ್ನ ಸನ್ನಿಧಿಗೆ ಕರೆದು ಆತನಿಗೆ ನೀನು ಭೂಲೋಕದ ತ್ರಿಲಿಂಗ (ತೆಲಗು) ದೇಶದಲ್ಲಿರುವ ದಾರೂರ ಎಂಬ ಗ್ರಾಮದಲ್ಲಿ ಸದಾಚಾರ ಸಂಪನ್ನರಾಗಿ ನೀತಿ ಕ್ರಿಯಾಚಾರದ ನೆಲೆ ಅರಿತವರಾಗಿ ದಾಸೋಹ ಮೂರ್ತಿಗಳಾಗಿ ಸತ್ಸಂತಾನಾಪೇಕ್ಷಿಗಳಾಗಿ ಕಾಯಾ ವಾಚಾ ಮನಸಾ ತ್ರಿಕರಣ ಶುದ್ಧರಾಗಿ ನನ್ನನ್ನೇ ಆರಾಧಿಸುವ ಮಾಹೇಶ್ವರಿ ದಂಪತಿಗಳಾದ ವೀರಯ್ಯ ವೀರಮ್ಮ ರೆಂಬವರ ಪುಣ್ಯಗರ್ಭದಲ್ಲಿ ನೀನು ಅವತರಿಸಿ ಅನಿತ್ಯವಾದ ಸಂಸಾರ ಮೋಹಕ್ಕೆ ಬಲಿಬೀಳದೆ ಅಜ್ಞಾನದಿಂದ ಅನಾಚಾರಕ್ಕೆ ಆಹುತಿಯಾದ ವೀರಶೈವಮತವನ್ನು ಶಿವಮತಸಂಸ್ಕಾರದಿಂದ ಶುದ್ಧಗೊಳಿಸಿ ವೀರವಿರತ ನೆನಿಸಿ ವೈರಾಗ್ಯದ ಮಹಿಮೆಯನ್ನು ಮರ್ತ್ಯದಲ್ಲಿ ತೋರಿ ಮಹಾಮಹಿಮ ನೆನಿಸಿ ನನ್ನ ಸನ್ನಿಧಿಗೆ ಬಾ. ಆಚಂದ್ರಾರ್ಕ ನಿನ್ನ ಕೀರ್ತಿಯು ಅಮರ ವಾಗಲಿ ಎಂದು ಗಣವರನನ್ನು ಆಶೀರ್ವದಿಸಿ ಭೂಲೋಕಕ್ಕೆ ಕಳುಹಿದನು ಅದೇ ಗುಣವರನೇ ಅಭವನ ಆಜ್ಞೆಯನ್ನು ತನ್ನ ತಲೆಯಮೇಲೆ ಹೊತ್ತು ಕೊಂಡು ಶ್ರೀಗಣವರನು ಶ್ರೀಶೈಲ ಮಲ್ಲಿಕಾರ್ಜನ ಲಿಂಗದಿಂದಲೂ ದ್ರಾಕ್ಷಾರಾಮಸುಕ್ಷೇತ್ರದ ರಾಮಲಿಂಗದಿಂದಲೂ ಕಾಳಹಸ್ತಿಯಲ್ಲಿ ಕಾಳು ಹಸ್ತೀರಲಿಂಗದಿಂದಲೂ ಈ ಪ್ರಕಾರ ತುದಿಮಧ್ಯಕಡೆಯಲ್ಲಿ ತ್ರಿಲಿಂಗ ಗಳಿಂದ ಕೂಡಿದ ಕಾರಣ ತ್ರಿಲಿಂಗದೇಶ ಅರ್ಥಾತ್ ತೆಲಗು ದೇಶದಲ್ಲಿ ಪ್ರಸಿದ್ಧವಾದ ದಾರೂರೆಂಬ (ದೋರ್ವಾಡ) ಗ್ರಾಮದಲ್ಲಿ ಪುತ್ರಾಪೇಕ್ಷಿಗ ಳಾದ ಮಾಹೇಶ್ವರ ದಂಪತಿಗಳು ವೀರಯ್ಯ ವೀರಮ್ಮನವರಿಗೆ ಮಗನಾಗಿ ಹುಟ್ಟಿ ಶಿಶುವಾಗಿ-ಬೆಳೆದು ಕಾಳಿದಾಸನ-

ಶೈಶವೇಭ್ಯಸ್ತವಿದ್ಯಾನಾಂ। ಯೌವನೇವಿಷಯೈಷಿಣಾಂ।
ವಾರ್ಧಿಕ್ಯೆಮುನಿವೃತ್ತೀನಾಂ। ಯೋಗೇನಾಂತೆ ತಪಸ್ವಿನಾಂ॥

ಎಂಬ ರಘುವಂಶವಾಕ್ಯದಂತೆ ಬ್ರಹ್ಮಚರ್ಯಾಶ್ರಮದಲ್ಲಿ ಮನೆ ಗುರುಗಳಾದ ಘನಮಠೇಶರಿಂದ ದೀಕ್ಷಾ ಶಿಕ್ಷಾ ಸಂಸ್ಕಾರಹೊಂದಿ ವೇದ ವೇದಾಂತಾದಿ ವಿದ್ಯಾಪಾರಂಗತನಾಗಿ ವೀರಶೈವಾಚಾರ್ಯ ಧರ್ಮತತ್ವದಲ್ಲಿ ಧುರೀಣನಾಗಿ ಪ್ರತಿನಿತ್ಯ ಗುರು ಲಿಂಗ ಜಂಗಮ ಶೇವಾನಿಷ್ಠನಾಗಿ ದಾಸೋಹಮೂರ್ತಿಯಾಗಿ ಸಂಸಾರದಲ್ಲಿದ್ದರೂ ಇಲ್ಲದವನಂತೆ ವರ್ತಿ ಸುತ್ತಿರುವಾಗ ಗುರುಗಳಾದ ಘನಮಠೇಶರು ಈ ನಮ್ಮ ಚರಿತ್ರನಾಯ ಕರಾದ ನಾಗಭೂಷಣರಿಗೆ ತಮ್ಮಾ ನೀನು ಪ್ರಾಪ್ತ ವಯಸ್ಕನಾದೆ ಇನ್ನು ಮೇಲೆ ಜಗದುಪಕಾರಿಯಾದ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಸಂಸಾರ ಯೋಗಿಯಾಗು ಎಂದು ಆಜ್ಞಾಪಿಸಿದಾಕ್ಷಣವೇ ನಾಗಭೂಷಣರು ಗುರು ದೇವಾ ಇದುವರೆಗೂ ತಾವು ನನಗೆ ವೇದ ವೇದಾಂತಾದಿ ವಿದ್ಯಾದಾನ ಮಾಡುವಾಗ ಸಂಸಾರವೆಂದರೆ ಮಿಥ್ಯಾ ಸಂಸಾರವೆಂದರೆ ಅನಿತ್ಯವಾದದ್ದು ಅಶಾಶ್ವತವಾದದ್ದು ನೀತಿಶಾಸ್ತ್ರದಲ್ಲಿಯೂ-

ಅನಿತ್ಯಾನಿ ಶರೀರಾಣಿ| ವಿಭವೋನೈವಶಾಶ್ವತಃ|
ನಿತ್ಯಂ ಸನ್ನಿಹಿತೋಮೃತ್ಯುಃ| ಕರ್ತವ್ಯೋ ಧರ್ಮಸಂಗ್ರಹಃ||

ಎಂದು ಘಂಟಾಘೋಷವಾಗಿ ಸಾರುತ್ತದೆ. ಮಾನವ ಶರೀರವು ಜರೆ ಮರಣಾದಿಗಳಿಗೆ ಆಹುತಿಯಾಗುವದು. ಹೆಂಡರು ಮಕ್ಕಳು ಧನ ಕನಕಾದಿಗಳು ಹೊನ್ನು ಹೆಣ್ಣು ಮಣ್ಣು ತೋರಿ ಅಡಗುವವು. ಕಾರಣ ಮನುಷ್ಯನು ಶರೀರವಿರುವಾಗಲೇ ಶಾಶ್ವತವಾದ ಧರ್ಮ ಸಂಗ್ರಹವನ್ನು ಮಾಡಬೇಕು. ಮತ್ತು ಅವಿನಾಶವಾದ ಅತ್ಮಜ್ಞಾನವನ್ನು ಸಂಪಾದಿಸಿ ಕೊಳ್ಳಬೇಕು.

ಯದ್ದೃಷ್ಟ| ತನ್ನಷ್ಟಂ| ಮತ್ತು ಜಗನ್ಮಿಥ್ಯಾಬ್ರಹ್ಮಸತ್ಯ||
ಎಂದು ತಾವೇ ಹೇಳಿದವರು. ಇದಲ್ಲದೆ-

ಹೆಣ್ಣು ರಕ್ಕಸಿಯಲ್ಲದಿನ್ನುಂಟೇಜಗದೀ||

ಯಂಬ ನಿಜಗುಣ ಶಿವಯೋಗಿಗಳ ವಾಕ್ಯವಿದ್ದರೂ ಹೆಣ್ಣೆಂಬ ಮಾಯೆಯಿಂದ ನನ್ನನ್ನು ಬಂಧಿಸಿ ಭವ ಭವಾಂತರ ನರಕಯಾತನೆ ಅನುಭವಿಸಲಿಕ್ಕೆ ಹಚ್ಚಬೇಕೆನ್ನುವಿರಾ ಇದೆಂಥಾ ನಿಮ್ಮ ವಿಚಾರ ದೃಯ ಮಾಡಿ ಗುರುದೇವಾ ಭಾವಿಯಲ್ಲಿ ಈಸಲಾರದ ನನ್ನನ್ನು ದುಃಖ ಸಾಧ್ಯ ವಾದ ಈ ಸಂಸಾರ ಸಾಗರದಲ್ಲಿ ಧುಮುಕಲು ಆಜ್ಞಾಪಿಸಬೇಡಿರಿ ಎಂದು ಗುರುಗಳಿಗೆ ವಿಜ್ಞಾಪನೆ ಮಾಡಿಕೊಂಡಾಕ್ಷಣವೇ ಪುನಃ ಗುರು ಗಳು ತಮ್ಮಾ ನಾಗಭೂಷಣಾ ವಿದ್ಯಾರ್ಥಿ ಅವಸ್ಥೆಯಲ್ಲಿ ಮುಂದಿನ ನಿನ್ನ ಭಾವೀ ಪ್ರಪಂಚದಲ್ಲಿ ಪ್ರಯೋಜನವಾಗಲೆಂದು ಬೋದೆಮಾಡಿ ದರೆ ಅದನ್ನೇ ನೀನು ಯೌವನಾವಸ್ಥೆಯಲ್ಲಿ ಪ್ರಸಂಗ ಮಾಡಬಹುದೇ ಸಂಸಾರವೆಂದರೆ ಸಾಮಾನ್ಯವೆಂದು ಭಾವಿಸುವಿಯಾ ಸಂಸಾರಿಯಾದವ ನಿಂದಲೇ ಜಗತ್ತಿನಲ್ಲಿ ಸರ್ವ ಸಚರಾಚರ ಪ್ರಾಣಿಕೋಟಿಗಳು ಸಂತುಷ್ಟಿ ಹೊಂದುತ್ತವೆ. ನಿನ್ನ ಜಂಗಮ ದಾಸೋಹವು ಸರಿಯಾಗಿ ಸಾಗಲು ಸಂಸಾರಿಯಾಗಲೇಬೇಕು

. ಸತಿಯಿಲ್ಲದ ಸಂಸಾರವು ನಿಃಸ್ಸಾರವಾಗುತ್ತದೆ. ಸತಿಯಿಂದ ಕೂಡಿದ ಸಂಸಾರವು ಸದ್ಗತಿಗೆ ಕಾರಣವು ನೀನು ಧರ್ಮ ಶಾಸ್ತ್ರಪ್ರಕಾರ ಲಗ್ನ ಮಾಡಿಕೊಂಡು ಸಂಸಾರಿಯಾಗಲಿಕ್ಕೇಬೇಕು. ನಿನಗೆ ಸತ್ಕುಲ ಪ್ರಸೂತಳು ಸದಾಚಾರ ಸುಶೀಲಳು ಪತಿಧರ್ಮ ಪರಾಯಣೆಯೂ ಆದ ಸುಲಕ್ಷಣ ಕನ್ಯೆಯನ್ನು ವಿವಾಹ ಮಾಡುತ್ತೇವೆ ಅಂದರೆ ನೀನು ವಿಶ್ವದಲ್ಲಿ ವಿಖ್ಯಾತನಾಗುವೆಯಂದು ಗುರುಗಳು ಎಷ್ಟು ಹೇಳಿದರೂ ನಾಗ ಭೂಷಣರು ಆರು ತಿಂಗಳವರೆಗೂ ಗುರುಗಳೊಡನೆ ವಿವಾಹದ ವಿಷಯ ವಾದಿಸಲು ಗುರುಗಳು ಶಿಟ್ಟಿಗೆದ್ದು ಯಲೋ ಇದುವರೆಗೂ ನಿನ್ನಂಥ ವೇದಾಂತಿಗಳು ಯಾರೂ ಆಗಿ ಹೋಗಿಲ್ಲಾ ಜಗತ್ತೇ ಮಿಥ್ಯವೆಂದಮೇಲೆ ಜಗತ್ ಸೃಷ್ಟಿಕರ್ತರಾದ ಅಜಹರಿ ರುದ್ರರಿಗೆ ಬುದ್ದಿ ಇದ್ದಿಲ್ಲವೆ ಅವರೇಕೆ ಪತ್ನಿಯುತರಾಗಿ ಪುತ್ರರನ್ನೇಕೆ ಹಡೆದರು.

ಸ್ವರ್ಗಲೋಕದ ಮಾತಂತೂ ಇರಲಿ ಭೂಲೋಕದಲ್ಲಿಯೇ ನಳನಹುಷ ಹರಿಶ್ಚಂದ್ರಾದಿರಾಜರು ಸಂಸಾರಿಗಳಾಗಿ ಸತ್ಯ ಅಹಿಂಸೆ ದಯಾದಾಕ್ಷಿ

ಣ್ಯಾದಿ ಸದ್ಗುಣಗಳಿಂದ ಪಡೆದು ಕೀರ್ತಿಕಾಯರಾಗಿಲ್ಲವೇ ಅದೇಕೆ ಹತ್ತನೇ ಶತಮಾನದಲ್ಲಿ ಅವತರಿಸಿ ವೀರಶೈವ ಮತೋದ್ಧಾರಕನೂ ವೇದಗಳ ಸಾರವನ್ನ ಕನ್ನಡ ವಾಂಗ್ಮಯದಲ್ಲಿ ಪ್ರಸಾರಮಾಡಿ ಪ್ರಸಿದ್ಧ ವಚನಕಾರರೆಂದು ಪ್ರಖ್ಯಾತಿ ಹೊಂದಿದ ಬಸವ ಶರಣ ಬಸವರು ಗೃಹಸ್ಥಾಶ್ರಮಿಗಳಾಗಿ ತಮ್ಮ ಜನ್ಮವನ್ನೇ ಸಮಾಜ ಸೇವೆಯಲ್ಲಿ ಸವೆಯಿಸಲಿಲ್ಲವೇ ಪರವಾದಿಗಳಿಂದ ಕಂದಿ ಕುಂದಿದ ವೀರಶೈವ ಮತವೆಂಬ ವೃಕ್ಷಕ್ಕೆ ಕಲ್ಯಾಣದ ಶಿವಾನುಭವ ಮಂಟಪದಲ್ಲಿ ದೇಶವಿದೇಶದ ಶಿವಶರಣರನ್ನು ಕೂಡಿಸಿ ವಚನ ಶಾಸ್ತ್ರಗಳೆಂಬ ಪನ್ನೀರೆರೆದು ಹೆಮ್ಮರವನ್ನಾಗಿ ಮಾಡಿದ ಬಸವಾದಿ ಪ್ರಮಥರು ತಿರುನೀಲಕಂಠ ಶಿರಿಯಾಳಶೆಟ್ಟಿ ಮೊದಲಾದ ಅರವತ್ತುಮೂರು ಮಂದಿ ಪುರಾತನರು ಪ್ರಪಂಚದಿಂದ ಪಾರಮಾರ್ಥ ಕಂಡವರೆಂದು ಪುರಾಣ ಪ್ರಸಿದ್ಧವಾಗಿಲ್ಲವೇ ಅವರು ಅವತರಶಿ ಹತ್ತಾರು ಶತಮಾನಗಳಾಗಿದ್ದರೂ ಕಲ್ಯಾಣದಿಂದೂದಿದ ಅವರ ಕಹಳೆಯ ನಿನಾದವು ಮಾತ್ರ ನಭೋಮಂಡಲದಲ್ಲಿ ಇನ್ನೂ ಪ್ರತಿಧ್ವನಿಗೈಯುತ್ತಿರುವದು ನಿನ್ನೀ ಕಿವಿಗೆ ಕೇಳಿಶಿಲ್ಲವೇ ಗೃಹಸ್ಥಾಶ್ರಮವನ್ನೇ ನೀನು ಹಳಿಯುವದಾದರೆ ನೀನೆಲ್ಲಿಂದ ಹುಟ್ಟಿಬಂದೆ ನಿನ್ನನ್ನು ಈಗ ಯಾರಮಗನೆಂದು ಕೇಳಿದರೆ ನಿನ್ನ ತಂದೆಯ ಹೆಸರನ್ನು ಹೇಳುವದಿಲ್ಲವೇ ಅಂದ ಮೇಲೆ ನೀನು ಲಗ್ನವನ್ನು ತಿರಸ್ಕಾರ ಮಾಡಿದರೆ ನಿನ್ನವಂಶ ವುದ್ಧಾರವಾಗುವ ಬಗೆ ಹೇಗೆ ನಿನ್ನ ಹೆಸರನ್ನು ನಿನ್ನ ಮಗನಾದವನು ಹೇಳಬೇಡವೆ ಇಲ್ಲಿಗೆ ನನ್ನ ಶಿಷ್ಯಸಂತತಿಯನ್ನು ಸಮಾಪ್ತಿಗೊಳಿಸ ಬೇಕೆನ್ನುವಿಯಾ ಎಂದು ಗುರುಗಳ ಶಿಟ್ಟಿಗೆದ್ದು ಗುರುದ್ರೋಹಿ ಗುರುಗಳಿಗೆ ಪ್ರತಿಯಾಡುವಿಯಾ ಯಂದು ಬೆದರಿಶಿದಾಕ್ಷಣವೇ ಶ್ರೀ ನಾಗಭೂಷಣರು ಗುರುಗಳ ಮನಸ್ಸಿನ ಭಾವವನ್ನು ತಿಳಿದು ಆಗಲಿ ಗುರುದೇವಾ ನಿಮ್ಮ ಅಪೇಕ್ಷೆಯಂತೆ ಮದುವೆಯನ್ನು ಮಾಡಿರಿ ಎಂದು ಒಪ್ಪಿದಾಕ್ಷಣವೇ ಮನೆ ಗುರುಗಳು ಮಾತಾಪಿತೃಗಳು ಮನಸ್ಸಿಗೊಪ್ಪುವ ಸುಲಕ್ಷಣಯುಕ್ತವಾದ ಕನ್ಯೆಯನ್ನುತೆಗೆದು ವಿಧಿವತ್ತಾಗಿ ವಿವಾಹ ಮಾಡಿದರು. ವಿವಾಹನಂತರ ಆರು ತಿಂಗಳಾದರೂ ಮನೆಗೆಬಂದ ಹೆಂಡತಿಯನ್ನು ಹೊರಳಿ ನೋಡದೆ ತನ್ನ ನಿತ್ಯ ನೈಮಿತ್ತಿಕಾದಿ ಕಾರ್ಯಗಳಲ್ಲಿಯೇ ಆಸಕ್ತನಾಗಿ ಪ್ರತಿ

ದಿವಸ ಗುರುಮಠಕ್ಕೆಹೋಗಿ ನಿಜಗುಣಾರ್ಯರ ಶಾಸ್ತ್ರದಲ್ಲಿಯೇ ನಿರತ
ನಾಗಿ ಗುರು ಶೇವಾ ಶುಶ್ರೂಷೆಯಲ್ಲಿ ತತ್ಪರನಾಗಿ ವಿಹಂಗಪಿಪೀಲಕ
ನ್ಯಾಯದಂತೆ ಜಗತ್ತಿನೊಳಗೆ ಇದ್ದೂ ಇಲ್ಲದವನಂತೆ ತನ್ನ ಆಧ್ಯಾತ್ಮ
ಚಿಂತನೆಯಲ್ಲಿಯೇ ಇಹಃರ್ನಿಶ ಆಲೋಚಿಸುತ್ತಿದ್ದನು. ಮಗನ
ಈ ಪ್ರಕಾರವಾದ ಮೌನವೃತ್ತಿಯನ್ನು ಮಾತಾಪಿತೃಗಳಾದ ವೀರಯ್ಯ
ವೀರಮ್ಮನವರು ನೋಡಿ ನೋಡಿ ಬೇಸತ್ತು ತಮ್ಮಿಂದ ಮಗನಿಗೆ ಹೇಳು
ವದಾಗದೇ ಗುರುಗಳ ಮಠಕ್ಕೆಹೋಗಿ ಮಗನು ಮಡದಿಯೊಡನೆ
ಮಾತಾಡದಿರುವಿಕೆಯನ್ನು ಸತಿಪತಿಗಳ ವಿರಹದ ವಿಚಾರವನ್ನು ವಿವಠ
ವಾಗಿ ವಿಶವಪಡಿಸಿ ತಮ್ಮಿಂದಲೇ ನಮ್ಮ ವಂಶ ವುದ್ಧಾರವಾಗಬೇಕಾ
ಗಿದೆ. ನಿಮ್ಮಹೊರತು ಅವನನ್ನು ಹಾದಿಗೆತರಲು ಅನ್ಯರಿಂದ ಸಾಧ್ಯ
ವಿಲ್ಲ. ಎಂದು ದೈನ್ಯೋಕ್ತಿಗಳಿಂದ ಪ್ರಾರ್ಥಿಶಿದಾಕ್ಷಣವೇ ಗುರುಗಳಾದ
ಘನಮಠೇಶರು ಅಯ್ಯೋ ವಿಧಿಯೇ ಲಗ್ನಕ್ಕೆ ಒಡಂಬಡಿಃಬೇಕಾದರೆ
ಅವನಿಗೆ ಆರುತಿಂಗಳಾಯಿತು. ಮತ್ತೂ ಗಂಡಾಂತರವೇ ಆಗಲಿ ನೀವು
ಹೋಗಿ ನಿಶ್ಚಿಂತೆಇಂದ ಇರ್ರಿ ಈಶ್ವರಿಚ್ಛೆ ಇದ್ದಂತೆ ಆಗುತ್ತದೆ. ಎಂದು
ಅವರನ್ನು ಕಳುಹಿಸಿ ನಾಗಭೂಷಣರು ಸಾಯಂಕಲ ಮಠಕ್ಕೆ ಬಂದಾಕ್ಷ
ಣವೇ ಗುರುಗಳು ಶಿಷ್ಯನೊಡನೆ ಯಾನ ಮಾತಾಡದೆ ಮೌನವಾಗಿರಲು
ನಾಗಭೂಷಣರಿಗೆ ಸಖೇದಾಶ್ಚರ್ಯವಾಗಿ ಗುರುವಿಗೆ ಸಾಷ್ಟಾಂಗ ನಮ
ಸ್ಕಾರಮಾಡಿ ಪ್ರತಿದಿವಸ ತಾನು ಬಂದಾಕ್ಷಣವೇ ಹಸನ್ಮುಖಿಗಳಾಗಿ
ಆನಂದದಿಂದ ಆದರಿಸುವವರು ಇಂದೇಕೆ ಈ ಪ್ರಕಾರ ಮೌನಿಗಳಾಗಿ
ಮಾತಾಡದಿರಲು ಕಾರಣವೇನಿರಬಹುದು ಅಂಥಾ ವಿಪತ್ತಾದರೂ ಯಾವ
ದಿರಬಹುದು ನನ್ನಿಂದ ನಿವಾರಣೆಯಾಗದ ಯಡರಡಿರಬಹುದೇ
ಎಂದು ದೈನ್ಯೋಕ್ತಿಯಿಂದ ಗುರುವೇ ಆದೇಕೆ ಇಂದು ಈ ತರರ ಮೌನ
ನನ್ನ ಮುಂದೆ ಹೇಳಲಾರದ ವಿಷಯುವೇ ತ್ರಿಕರಣಪೂರ್ವಕವಾಗಿ ತನು
ತ್ರಯುವನ್ನೇ ತಮಗರ್ಪಿಸಿದ ತನಯುನಲ್ಲಿ ತಿರಸ್ಕಾರವೇ ದಯುಮಾಡಿ
ಮನಸ್ಸಿನ ವಿಷಯುನನ್ನು ತಿಳಿಸಿರಿ ಎಂದು ಅನಂತರೀತಿಯಿಂದ ಪ್ರಾರ್ಥಿ
ಶಿದಾಕ್ಷಣವೇ ಗುರುಗಳು ರೋಗಿಯು ಬಯುಸಿದ್ದು ಹಾಲೋಗರ ವೈದ್ಯ
ಹೇಳಿದ್ದು ಹಾಲೋಗರ ಎಂಬಂತೆ ಅಂತರಂಗದಲ್ಲಿಯೇ ಅತಿಶಯ ಆನಂದ

ಉಳ್ಳವರಾಗಿ ನಾಗಭೂಷಣಾ ನಾವು ಅನ್ಯ ವಿಷಯಕ್ಕೆ ಚಿಂತಿಸುವಷ್ಟು
ಮೂರ್ಖರಲ್ಲ ನಿನ್ನ ವಿಷಯದ ಹೊರ್ತಾಗಿ ನಾವು ಬೇರೆ ಏನೂ ಚಿಂ
ಸುವದಿಲ್ಲ ನಿನ್ನ ಲಗ್ನ ಮಾಡಿ ನಾವು ಏನು ಸಾರ್ಥಕ ಮಾಡಿದಂತಾಯಿತ
ಎಂದೂ ಪಾಪಕಾರ್ಯ ಮಾಡದ ನಾವು ಇದೊಂದು ದೊಡ್ಡ ಪಾಪಕೃತ್ಯ
ಮಾಡಿದಂತಾಯಿತು. ಅದಕ್ಕಾಗಿಯೇ ವ್ಯಸನಪಡಬೇಕಾಗುತ್ತದೆ. ಬೇ
ಯಾವದೂ ಇಲ್ಲ ಹೆಂಡತಿಯು ಮನೆಗೆ ಬಂದು ಆರು ತಿಂಗಳಾದರೂ ಮಡ
ಯೊಡನೆ ಮಾತುಗಳನ್ನಾಡದೆ ಏಕಾಂತಕ್ಕೆಳಸದೆ ಹೀಗೆ ಏಕಾಂಗಿಯಾ
ವಿರುದ್ಧ ವರ್ತನೆಮಾಡುವದಕ್ಕಿಂತ ಲಗ್ನ ವಾಗುವಾಗಲೇ ನೀನು ನಿಷ್
ರನಾಗಿ ನನಗೆ ಲಗ್ನ ಬೇಕಿಲ್ಲವೆಂದು ಖಂಡಿತವಾಗಿ ಹೇಳಿದ್ದರೆ ವಳಿ
ಗುತ್ತಿತ್ತು ಈಗ ನಮಗೆ ವ್ಯಸನ ಮಾಡುವ ಪ್ರಸಂಗ ಬರುತ್ತಿದ್ದಿಲ್ಲ ಗುರು
ಸಮ್ಮುಖದಲ್ಲಿ ವಿವಾಹಕ್ಕೆ ಒಡಂಬಟ್ಟು ಈಗ ವಿವಾಹವಿಚ್ಛೇದನ ಮಾ
ಲೆಳಸುವಿಯಾ ಗುರುದ್ರೋಹಿ ನಿನ್ನ ಈ ಮುಖಾವಲೋಕನ ಮಾಡಬಾರದ.
ಓದಿಕೆಟ್ಟ ಕೂಚುಭಟ್ಟ ಎಂಬ ನಾಣ್ಣುಡಿಯಂತೆ ವ್ಯವಹಾರ ಜ್ಞಾನವಿಲ್ಲದ
ನೀನು ಎಷ್ಟು ವಿದ್ಯಾವಂತನಾದರೂ ವ್ಯರ್ಥವಾಯಿತು. ಮಿಂಚಿ ಹೋ
ಕಾರ್ಯಕ್ಕೆ ಈಗ ಚಿಂತಿಸಿ ಫಲವಿಲ್ಲ ವಿವೇಕವಿಲ್ಲದವನು ವಿದ್ಯಾವಂ
ನಾದರೇನು ಅವಿದ್ಯಾವಂತನಾದರೇನು–

ಸಾಕ್ಷರಾ ವಿಪರೀತಾಶ್ಚ । ರಾಕ್ಷಸಾಃಯೇವ ಕೇವಲಂ॥

ಎಂಬ ಸುಭಾಷಿತದಂತೆ ವಿದ್ಯಾವಂತರು ವಿಪರೀತವಾಗಿ ನಡೆದರೆ ಬೇಲಿ
ಯೆದ್ದು ಹೊಲವ ಮೆಯ್ದಡೆ ಯಾರುಮಾಡುವದೇನು.

ವಿನಾಶಕಾಲೇ ವಿಪರೀತಬುದ್ಧಿಃ॥

ಎನ್ನುವಂತೆ ವಿಚಾರಿಯಾದ ನೀನು ಅವಿಚಾರದಿಂದ ನಡೆದರೆ
ನಾಕ ಲೋಕದ ಬದಲಾಗಿ ನರಕಯಾತನೆಯನ್ನು ಅನುಭವಿಸ ಬೇಕೆ
ನ್ನುವ ನಿನಗೆ ನಾವಾದರೂ ಮಾಡುವದೇನು ಸಾಕು ಇನ್ನು ಮೇಲೆ ನಮ್ಮ
ಮಠಕ್ಕೆ ಬರಬೇಡಾ. ಎಂದು ಗುರುಗಳು ದೂಷಣೆ ಮಾಡಿದ ಕೂಡಲೇ
ನಾಗಭೂಷಣರು ಗದಗದನೆ ನಡಗುತ್ತ ಘಾಬರಿಯಾಗಿ ಗುರುದೇವಾ

ಇದೂವರೆಗೂ ತಾವು ಆಡಿದ ಮಾತಿನ ಅರ್ಥವು ನನಗೇನೂ ತಿಳಿಯದಾಗಿದೆ ನಿರಪರಾಧಿಯಾದ ನನ್ನನ್ನು ದೂಷಣೆ ಮಾಡಬೇಡಿ ನನ್ನಿಂದ ಯಾವ ಅಪರಾಧವಾಗಿದೆ ಸ್ವಪ್ನದಲ್ಲಿಯೂ ಸಹ ತಮ್ಮ ಮಾತು ಮೀರಿದವನಲ್ಲ ಗುರುವಾಜ್ಞೆ ಇಲ್ಲದೇ ಇದುವರೆಗೂ ನಾನು ಏನು ಮಾಡಿದ್ದೇನೆ ತಾವೇ ಹೇಳಿರಿ. ಮನೆಯಲ್ಲಿ ಮಾತಾ ಪಿತೃಗಳಿರುವಾಗ ಮಡದಿಯ ಸಂಗಡ ಮಾತಾಡುವ ಪ್ರಸಂಗವೇನು ಬೀಳುತ್ತದೆ. ಹೆಂಡತಿಯೊಡನೆ ಏಕಾಂತ ಇರಲಿಕ್ಕೆ ನೀವು ಹೇಳಿಲ್ಲ ಆದ್ದರಿಂದ ಅದರ ಅಪೇಕ್ಷೆ ಬಯಸಿದವನಲ್ಲ ಇದಕ್ಕೂ ಹೆಚ್ಚಾಗಿ ಏನಾದರೂ ಅಪರಾದ ಮಾಡಿದ್ದರೆ ತಾವು ಕ್ಷಮಿಸದೆ ಯಾರು ಕ್ಷಮಿಸ ಬೇಕು ?

ಈ ಪ್ರಕಾರ ನಾಗಭೂಷಣರಾಡುವ ಮಾತು ಕೇಳಿ ಗುರುಗಳು ಇವರ ಗುರುವಿನ ಮೇಲಿರುವ ಅಚಲ ಶ್ರದ್ಧೆಯನ್ನು ಕಂಡು ಅಂತರಂಗದಲ್ಲಿ ಆನದಿಂದ ಅಳತೆಮೀರಿದ್ದರೂ ಬಹಿರಂಗದಲ್ಲಿ ತೋರದೆ ನೆಟ್ಟಗಾಯಿತ ಇನ್ನು ಮೇಲೆ ಮನೆಯವರಕೂಡ ವಿನೋದದಿಂದ ಮಾತಾಡುತ್ತ ಮಡದಿಯೊಡನೆ ಏಕಾಂತದಲ್ಲಿ ರತಿಕ್ರೀಡೆಯಾಡುತ್ತ ಮುಪ್ಪಿನವರಾದ ಮಾತಾಪಿತೃಗಳ ಮನಸ್ಸಿಗೆ ಸಂತೋಷವನ್ನುಂಟುಮಾಡುವದೇ ಮಕ್ಕಳಾದವರ ಕರ್ತವ್ಯ ಜ್ಞಾನಿಯಾದ ನಿನಗೆ ವಿಶೇಷ ಹೇಳಲು ವಿಪರೀತವಾಗುತ್ತದೆ. ಪ್ರಾಜ್ಞರಾದವರು ಪ್ರಪಂಚ ಪಾರಮಾರ್ಥವೆರಡನ್ನೂ ಸಮಾನವಾಗಿ ನಡೆಯಿಸ ಬೇಕೆಂಬುದೇ ನಿಜಗುಣ ಶಿವಯೋಗಿಗಳ ಮತ ಬಸವದಿ ಶಿವಶರಣರ ರಾಜಮಾರ್ಗ ಸರ್ಪಣ್ಣಾರ್ಯರು ಸಹ-

ಜಾಣನು ಲೌಕಿಕ ಪಾರಮಾರ್ಥವೆರಡನು ।<br>
ಮಾಣದೆಕೊಡಿ ನಡಸುತಿಹನಿಂತು ॥

ಈ ಪ್ರಕಾರ ನಿರೂಪಿಸಿದ್ದಾರೆ ಹಿಂದಿನ ಹಿರಿಯರು ನುಡಿದಂತೆ ನಡೆದು ಲೋಕಪ್ರಸಿದ್ಧರಾಗಿರಲು ನಿನಗೇತರಭಯವೆಂದ ಗುರುಗಳಾದ ಘನಮಠೇಶರು ಶಾಸ್ತ್ರಸಮ್ಮತವಾಗಿ ಪೂರ್ವಿಕರು ದೃಷ್ಟಾಂತ ಕೊಟ್ಟು

ಸಂಸಾರ ಸಮರ್ಥನಮಾಡಿ ನಾಗಭೂಷಣರಿಗೆ ಸಂಸಾರದಲ್ಲಿ ಸದ್ಭಾವನೆ ಹುಟ್ಟುವಂತೆ ಸದುಪದೇಶಮಾಡಿ ಸಂಸಾರಕ್ಕಿಳಿಯುವಂತೆ ಮಾಡಿದರು ನಾಗಭೂಷಣರು ಗುರುವಾಜ್ಞಾ ಪ್ರಕಾರ ವಂದು ವರ್ಷದವರೆಗೆ ವಿಷಯ ವ್ಯಾಮೋಹನಾಗಿದ್ದರೂ ಮನಸ್ಸು ಮಾತ್ರ ಯಾವಾಗಲೂ ಪಾರಮಾರ್ಥ ವಿಚಾರದ ಕಡಗೆ ಸುಳಿಯುತ್ತಿತ್ತು ನಾಗಭೂಷಣರು ಅಜ್ಞಾನಿಯಾದ ಮಾನವನಂತೆ ಅರಿಷಡ್ವರ್ಗಾದಿಗಳಲ್ಲಿಯೇ ಆಸಕ್ತರಾಗವೆ ವಿಷಯದಿಂದ ವಿಮುಖನಾಗಿ ವೀರಶೈವ ಧರ್ಮದ ಷಟುಸ್ಥಅ ಪಂಚಾಚಾರ ಪರಾಯಣನಾಗಿ ಭಕ್ತಿ ಜ್ಞಾನ ವೈರಾಗ್ಯಾದಿ ವಿಷಯ ವಿವೇಚನೆ ಯುಳ್ಳವನಾಗಿ ತನ್ನ ನಿತ್ಯ ಕರ್ಮಾಚರಣೆಗೆ ಭಂಗಬಾರದಂತೆ ಸುಖವಾಗಿ ಸಂಸಾರ ಮಾಡುತ್ತಿರಲು ಒಂದು ವರ್ಷದೊಳಗಾಗಿ ಸತಿಯಾದ ಸಂಗಮ್ಮನವರ ಉದರದಿಂದ ಹೆಣ್ಣು ಕೂಸು ಹುಟ್ಟಿತು. ಒಂದಾನೊಂದು ದಿವಸ ಚಾತಕ ಪಕ್ಷಿಯು ವರ್ಷಾಕಾಲವನ್ನೇ ಇದಿರು ನೋಡುವಂತೆ ಸಂಸಾರದಿಂದ ಕಡೆಗಾಗುವ ಆಲೋಚನೆಯಲ್ಲಿಯೇ ಮಗ್ನರಾಗಿದ್ದ ನಾಗಭೂಷಣರ ಸಂಸಾರದಲ್ಲಿ ಗಂಡ ಹೆಂಡರಿಗೆ ವಿರಸವುಂಟಾಗಿ ನಾಗ ಭೂಷಣರು ತ್ಯಾಗಬುದ್ಧಿಯಿಂದ ಮನೆ ಬಿಟ್ಟು ಬಂದ ವಿಷಯವನ್ನೂ ಅವರು ಗೃಹತ್ಯಾಗ ಮಾಡಿದನಂತರ ಅವರನ್ನು ಹುಡುಕುವ ಸಲುವಾಗಿ ನಾಗಭೂಣಷರ ತಂದೆ ತಾಯಿಗಳು ಮನುಷ್ಯನನ್ನು ಕಳಿಸಿದ ಸವಿಸ್ತಾರ ವಿಷಯವನ್ನೂ ಬಂದ ಮನುಷ್ಯನಿಗೂ ನಾಗಭೂಷಣರಿಗೂ ಯಲಗೋಡ ಗ್ರಾಮದಲ್ಲಿ ಭೆಟ್ಟಿಯಾಗಿ ಅವರವರಿಗೆ ನಡೆದ ಸಾದ್ಯಂತ ವಿಚಾರವನ್ನೂ ಹಿಂದಿನ ಪ್ರಕರಣದಲ್ಲಿ ವಿಶದವಾದದ್ದು ವಾಚಕರಾದ ತಮ್ಮ ಲಕ್ಷದಲ್ಲಿರ ಬಹುದು ಸದ್ಯಃ ನಮ್ಮ ಶ್ರೀ ನಾಗಭೂಷಣ ಶಿವಯೋಗಿಗಳು ಸಂಸಾರಕ್ಕೆ ತಿಲಾಂಜಲಿಯನ್ನು ಕೊಟ್ಟು ತಮ್ಮ ದೇಶ ಮನೆ ಮಡದಿ ಮಕ್ಕಳು ಮಾತಾಪಿತೃಗಳು ಎಲ್ಲರನ್ನೂ ಧಿಃಕ್ಕಾರಮಾಡಿ ಮಾನವಜನ್ಮದ ಮುಖ್ಯ ಗುರಿಯಾದ ಸಮಾಜ ಶೇವೆಯನ್ನೇ ತಮ್ಮ ನಿತ್ಯಕಾರ್ಯವಾಗಿಟ್ಟು ಕೊಂಡು ತಮ್ಮ ಗುರಿ ಸಾಧನೆಗಾಗಿ ತನ್ನ ಸಮಾಜವು ಪ್ರಬಲಸಂಖೆ ಯುಳ್ಳ ಈ ಕರ್ನಾಟಕ ದೇಶದಲ್ಲಿ ಕಾಲಿಟ್ಟು ತನ್ನ ಮನಸ್ಸಿನ ಮಹಾ ಬಯಕೆಯನ್ನು ಜನರಲ್ಲಿ ಪ್ರಸಾರ ಮಾಡಲು ಕನ್ನಡ ಭಾಷೆಯ ಅಭಾವ

ದಿಂದ ತನ್ನ ಈಶಸೇವೆಗೆ ವಿಘ್ನ ಉಂಟಾದಕಾರಣ ತಾನು ಯಾವನಾಡಿ
ನಲ್ಲಿ ಯಾವ ಜನರಲ್ಲಿ ಭಕ್ತಿಜ್ಞಾನ ಕ್ರಿಯಾದಿಗಳನ್ನು ನೆಲೆಗೊಳಿಸಲು
ಕಂಕಣ ಬದ್ಧನಾಗಿದ್ದನೋ ತನಗೆ ಆ ನಾಡಿನ ಭಾಷೆ ಬಾರದದ್ದರಿಂದ ನಾಡ
ನುಡಿಯನ್ನು ಕಲಿಯಲು ಈಗ ನಮ್ಮ ಚರಿತ್ರ ನಾಯಕರಾದ ಶ್ರೀ ನಾಗ
ಭೂಷಣಶಿವಯೋಗಿಗಳು ಯಲಗೋಡ ಭಕ್ತರ ಆಗ್ರಹದ ಮೇರೆಗೆ
ಆ ಗ್ರಾಮದ ಹಿರೇಮಠದ ರೇವಣಶಿದ್ದಯ್ಯನವರಲ್ಲಿ ಕನ್ನಡ ವಿದ್ಯೆಯನ್ನು
ಕಲಿಯಲು ಪ್ರಾರಭಮಾಡಿದ್ದಾರೆ. ಯಲಗೋಡ ಮಠದ ರೇವಣಶಿದ್ದಯ್ಯ
ನವರು ಸಂಸಾರಿಗಳಾದರೂ ಸಾಮಾನ್ಯವಕ್ತಿಗಳಲ್ಲ ಶಿವಾಚಾರ ಸಂಪನ್ನ
ರಾಗಿಯೂ ಲಿಂಗಾಂಗಸಾಮರಶ್ಯವನ್ನು ಬಲ್ಲವರಾಗಿಯೂ ಕನ್ನಡವಿದ್ಯೆ
ಯಲ್ಲಿ ಕೋವಿದರಾಗಿ ಶ್ರೀ ನಾಗಭೂಷಣರನ್ನು ಆದರ ಪೂರ್ವಕವಾಗಿ
ತಮ್ಮ ಮಠದಲ್ಲಿಟ್ಟುಕೊಂಡು ಶಿವಯೋಗಿಗಳಿಗೆ ಮೊದಲು ಕನ್ನಡದ
ವರ್ಣ ಮೂಲಾಕ್ಷರಗಳನ್ನೂ ಕಲಿಸಿ ನಂತರ ಕನ್ನಡ ಕಾವ್ಯಗಳಾದ
ರಾಜಶೇಖರ ಶಬರಶಂಕರವಿಳಾಸ ಬಸವ ಪುರಾಣ ಮತ್ತು ಆದ್ಯರ
ವಚನ ಶಾಸ್ತ್ರಗಳ ಸಾರವನ್ನು ಸವಿಸ್ತಾರವಾಗಿ ಅರ್ಥಜ್ಞಾನವಾಗುವಂತೆ
ಹೇಳುತ್ತಹೋಗಲು ಶ್ರೀ ನಾಗಭೂಷಣರು ಅಲ್ಪಾವಧಿಯಾದ ಅರ್ಧ
ವತ್ಸರದಲ್ಲಿಯೇ ಕನ್ನಡದಲ್ಲಿ ಓದಲಿಕ್ಕೂ ಬರೆಯಲಿಕ್ಕೂ ಬಲ್ಲಿದರಾಗಿ
ಕೆಲವು ದಿವಸಗಳು ಗತಿಸುತ್ತಿರಲಿಕ್ಕೆ ಶಿವಯೋಗಿಗಳ ಸತ್ಕ್ರಿಯಾ ಪ್ರಭಾವ
ದಿಂದ ಶ್ರೀ ನಾಗಭೂಷಣರ ಹೃದಯದಲ್ಲಿ ಕನ್ನಡ ಕವಿತಾ ಶಕ್ತಿಯು
ಉತ್ಪನ್ನವಾಗಿ ಮೆಲ್ಲಮೆಲ್ಲನೆ ಪರಮಾತ್ಮನ ಪ್ರೇರಣೆಯಿಂದಲೋ ಅಥವಾ
ತನ್ನ ತಪಃಶಕ್ತಿಯ ಪ್ರಭಾವದಿಂದಲೋ ತನ್ನ ಪೂರ್ವ ವಯಸ್ಸಿನಲ್ಲಿ
ಪರಿಚಯವಿಲ್ಲದ ಕನ್ನಡ ವಿದ್ಯೆಯನ್ನು ಮಧ್ಯದಲ್ಲಿಯೇ ಕಲಿತು ವರಕವಿ
ಗಳಂತೆ ಉತ್ತಮೋತ್ತಮ ಕವನಗಳನ್ನು ಕಟ್ಟಿ ಹಾಡಹತ್ತಿದರು. ಇವರ
ಲ್ಲಿರುವ ಕವಿತಾಶಕ್ತಿಯನ್ನ ಕಂಡು ರೇವಣಸಿದ್ದಯ್ಯನವರು ಆನಂದ
ವುಳ್ಳವರಾಗಿ ಆ ದಿ ಯಿಂ ದ ಲೂ ಕನ್ನಡದಲ್ಲಿ ಕೋವಿದರೆನಿಸಿದವರಿಗೆ
ಈ ಕವಿತಾ ಶಕ್ತಿಯು ಸಾಧ್ಯ ಸಾಧ್ಯವಿಲ್ಲದಿರುವಾಗ ಈ ಮಹಿಮರು
ಕಾಳಿದಾಸನಂತೆ ಕನ್ನಡದಲ್ಲಿ ಸರಸವಾಗಿ ಕವಿತ್ವಮಾಡುವದನ್ನು ನೋಡಿ
ದರೆ ಶಿವಾಂಶ ಸಂಭೂತರಾದ ಶಿವಶರಣರಿಗೆ ಹೊರ್ತಾಗಿ ಈ ಶಕ್ತಿಯು

ಅನ್ಯರಿಗೆ ಸಾಧ್ಯವಲ್ಲ. ಇಂಥಾ ಕಲಿಯಲಾರದ ಕವಿತಾ ಶಕ್ತಿಯನ್ನು ನೋಡಿದರೆ ಇವರಿಗೆ ವರಕವಿಗಳೆಂದು ಹೇಳಲು ಯಾವ ಬಾಧಕವೂ ಬರಲಾರದು ಹೀಗೆಂದು ನಾನಾ ಪ್ರಕಾರವಾಗಿ ನಾಗಭೂಷಣರ ಆಗಾಧ ಶಕ್ತಿಯನ್ನು ಕೊಂಡಾಡಿ ಅವರಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟು ಅವರ ನಿತ್ಯ ಕರ್ಮಾಚರಣೆಗೆ ನ್ಯೂನತೆ ಬಾರದಂತೆ ತಮ್ಮ ಮಠದಲ್ಲಿಯೇ ಸೇವಾ ಶುಶ್ರೂಷೆಗಳನ್ನು ಮಾಡುತ್ತಿದ್ದರು.

ನಾಗಭೂಷಣ ಶಿವಯೋಗಿಗಳು ತಮಗೆ ಕನ್ನಡದಲ್ಲಿ ಓದಲಿಕ್ಕೂ ಬರೆಯಲಿಕ್ಕೂ ಭಕ್ತಾದಿಗಳಿಗೆ ಧರ್ಮತತ್ವವನ್ನು ಕನ್ನದಲ್ಲಿ ತಿಳಿಸಿ ಹೇಳಲಿಕ್ಕೂ ಭಕ್ತಿ ಜ್ಞಾನ ವೈರಾಗ್ಯದ ವಿಷಯವಾಗಿ ಕನ್ನಡದಲ್ಲಿ ಕವನಗಳನ್ನು ರಚಿಸಲಿಕ್ಕೂ ಸರಸವಾದಕ್ಷಣವೇ ಇನ್ನು ನಾವು ಒಂದೇ ಸ್ಥಾನದಲ್ಲಿರುವದು ಯೋಗ್ಯವಲ್ಲವೆಂದು ತಮ್ಮ ಮುಂದಿನ ಧರ್ಮ ಪ್ರಸಾರದ ಕಡೆ ಮನಸ್ಸುಳ್ಳವರಾಗಿ ರೇವಣಸಿದ್ಧಯ್ಯನವರು ತಮಗ ಅಲ್ಪ ಕಾಲದಲ್ಲಿಯೇ ಅನಾಯಾಸವಾಗಿ ಅಭ್ಯಾಸ ಮಾಡಿಸಿ ಕನ್ನಡ ವಿದ್ಯೆಗಾಗಿ ಅವರಲ್ಲಿ ಅತಿಶಯ ಪ್ರೇಮವುಳ್ಳವರಾಗಿ ಅವರ ಭಾರವನ್ನು ತಾವು ತಲೆಯ ಮೇಲೆ ಹೊತ್ತು ಅವರಿಂದ ಅನುಜ್ಞೆಯನ್ನು ಹೊಂದಿ ಅವರ ಉಪಕಾರ ಸ್ಮರಿಸುತ್ತ ಮನಸ್ಸಿನ ಪ್ರೇರಣೆಯಂತೆ ತನಗೆ ಶೀಘ್ರದಲ್ಲಿ ಕನ್ನಡ ವಿದ್ಯೆಯಲ್ಲಿ ಕವಿತಾ ಶಕ್ತಿಯನ್ನು ಕರುಣಿಸಿದಕ್ಕೆ ತನ್ನ ಶಿಕ್ಷಾ ದೀಕ್ಷಾ ಮೋಕ್ಷಕ್ಕೆ ಕಾರಣೀಭೂತರೂ ವಂಶಪರಂಪರಾಗತ ಮನೆ ಗುರುಗಳೂ ಆದ ಘನಮಠೇಶರಲ್ಲಿ ಭಕ್ತಿಯುಳ್ಳವರಾಗಿ ಗುರು ಪಾದಾರವಿಂದಕ್ಕೆ ಗುರು ಕಾಣಿಕೆಯಾಗಿ ಪ್ರಥಮದಲ್ಲಿ ಅರ್ಪಿಸಿದ ಗುರು ಧ್ಯಾನದ–

ಧ್ಯಾನ್ಯವಮಾಡೋ ನಿಜಗುರು ಧ್ಯಾನವಮಾಡೋ। ಮಾನವ।
ನೀನತಿಮತಿಯುತನೆನಿಸುತೆ ॥೦॥ ಜಗದೊಳಗನುದಿನ।
ನಗುರೋರಧಿಕವೆಂದು । ಪೊಗಳುವ ಶೃತಿಮತವಗಲದೆ।
ಮುದದೊಳು ॥೧॥ ವರಕರುಣದೊಳಡಿಗೆರಗಿದವರ ಸ್ಮರ।
ಹರನೆನಿಸುವ ಶರಣರ ಸುರಭೂಜನ ॥೨॥ ಮನುಮುನಿ
ಜನ ಸುರಗಣರಿಗೆ ಮೊದಲಿಗ । ನೆನಿಸಿದನಘಶ್ರೀ ಘನಮಠವಾಸನ॥೩॥

ಯೆಂಬ ಪ್ರಥಮದ ಪದವನ್ನೇ ಅಡಿ ಪ್ರಾಸುಗಳಿಂದ ಅಂದವಾಗಿಯೂ ಅರ್ಥಗರ್ಭಿತವಾಗಿಯೂ ಹಾಡುವವರಿಗೆ ಅನಂದವಾಗಿ ವೀರಶೈವರ ಅಷ್ಟಾವರಣಗಳಾದ ಗುರುಃಲಿಂಗ ಜಂಗಮ ಇವುಗಳ ಪ್ರಸಾರವಾಗಿ ಭಕ್ತಿ ಜ್ಞಾನ ವೈರಾಗ್ಯದಲ್ಲಿ ಭಾವನೆ ಬೆಳೆವಂತೆ ಶ್ರೀ ಶಿವಯೋಗಿಗಳು ಮಾಡಿದ ಪದಗಳ ಕಡೆಯ ನುಡಿಯಲ್ಲಿ ಶ್ರೀ ನಿಜಗುಣ ಶಿವಯೋಗಿ ಗಳು ತಮ್ಮ ಕವನಾಂತ್ಯದಲ್ಲಿ ಶಂಭುಲಿಂಗವೆಂಬ ಅಂಕಿತವಿಟ್ಟಿರುವಂತೆ ನಮ್ಮ ನಾಗಭೂಷಣರು ತಮ್ಮ ಘನಮಠೇಶರೆಂಬ ಗುರುಗಳ ಮುದ್ರೆ ಯಿಂದ ಪದಗಳನ್ನು ಪೂರ್ಣಮಾಡಿ ಭಕ್ತರಲ್ಲಿ ಭೋಧೆ ಮಾಡುತ್ತಾ ಕರ್ನಾಟಕದಲ್ಲಿ ಸಂಚಾರ ಮಾಡುವಾಗ ಹಿಂದಕ್ಕೆ ಕರ್ನಾಟಕದಲ್ಲಿ ಅವತರಿಸಿ ವೀರಶೈವ ಮತ ತತ್ವಗಳನ್ನೆಲ್ಲಾ ಕನ್ನಡ ವಚನ ವಾಂಗ್ಮಯ ದಿಂದ ಪ್ರಸಾರಮಾಡಿ ಭಕ್ತಿ ಭಾಂಡಾರಿಯನಿಸಿದ ಬಸವೇಶ್ವರರ ವಚನ ಶಾಸ್ತ್ರವನ್ನು ಶೋಧಿಸುತ್ತಾ ನಡೆದಿರಲು ಅಕಸ್ಮಾತ್ತಾಗಿ ಆ ವಚನ ಶಾಸ್ತ್ರವನ್ನು ಕಂಡು ಅದರ ಸಾರವನ್ನೆಲ್ಲ ಸಮೂಲವಾಗಿ ನೋಡಿದಂದಿ ನಿಂದಾ ವಚನ ಶಾಸ್ತ್ರವನ್ನು ಸದಾವಕಾಲದಲ್ಲಿಯೂ ತಮ್ಮ ಬೆನ್ನಿಗೆ ಕಟ್ಟಿಕೊಂಡು ಗಡ್ಡ ಮೀಸೆಗಳನ್ನು ಬೆಳೆಯಿಸಿಕೊಂಡು ತಲೆಯ ಮೇಲೆ ಬಿಳೀ ಕಂಬಳಿಯ ಕೊಪ್ಪಿಯನಿಟ್ಟುಕೊಂಡು ಕರದಲ್ಲಿ ತನು ತೊಂಭತ್ತಾ ರಂಗುಲ ಪ್ರಮಾಣದ ದಂಡಾಗ್ರವನ್ನು ಧರಿಸಿ ಅರವತ್ತು ಮೂರುಮಂದಿ ಪುರಾತನರ ಬಕುಲ (ಜೋಳಿಗೆ) ಯನ್ನು ಬಗಲಿಗೆ ಹಾಕಿಕೊಂಡು ತಾವು ಹೋದ ಹೋದಲ್ಲಿ ವಚನ ಶಾಸ್ತ್ರವನ್ನು ಬಿಚ್ಚಿ ನೋಡುತ್ತಾ ಬಸವೇಶ್ವರನು ತನ್ನ ಸಮಾಜಕ್ಕೆ ಸಲ್ಲಿಸಿದ ಶೇವೆಯನ್ನು ಕಂಡು ಅಚ್ಚರಿ ಪಡುತ್ತಾ ಆ ಬಸವನಲ್ಲಿಯೇ ತಾವು ಅಸಾಧಾರಣ ಭಕ್ತಿಯು ಳ್ಳವರಾಗಿ ಕುಂತರೂ ನಿಂತರೂ ಬಸವ ನಾಮವನ್ನುಚ್ಚರಿಸುತ್ತಾ ಆದಿ ಇಂದಲೂ ಸನ್ಯಾಶಾಶ್ರಮವನ್ನು ಸ್ವೀಕರಿಸಿದ ಸನ್ಯಾಸಿಗಳಿಗೂ ಸಹ ಸಾಧ್ಯವಾಗದ ವೈರಾಗ್ಯವನ್ನು ಈ ಮಹೀಮನು ಅನ್ಯರಿಂದ ವಿರಕ್ತಾಶ್ರ ಮವನ್ನು ಪರಿಗ್ರಹಿಸದೆ ಸಂಸಾರಿಯಾದರೂ ಸತ್ಯ ಸನ್ಯಾಸಿಯಾಗಿ ವೀರ ವಿರಾಗಿಯಾಗಿ ಇಂದ್ರಿಯ ಸುಖಗಳನ್ನೆಲ್ಲಾ ನಿಗ್ರಹಿಸಿ ಅರಿಷ ಡ್ವರ್ಗಾದಿಗಳನ್ನು ಹತ್ತಿಕ್ಕಿ ಜಗತ್ತಿನಲ್ಲಿ ಕಾಷಾಯಾಂಬರ ವೇಷಧಾರಿಗ

ಳಾಗಿ ತಿರುಗುವ ಬರಿಯ ಸನ್ಯಾಸಿಗಳಂತೆ ಬಾಹ್ಯಾಡಂಬರವನ್ನು ಮಾಡದೆ ಪರಮಾತ್ಮನಿಗೆ ಪ್ರೀತ್ಯಾಸ್ಪದಗಳಾದ ಫಣೆಯಲ್ಲಿ ತ್ರಿಪುಂಡ್ರ ಧಾರಣೆ ಕೊರಳಲ್ಲಿ ರುದ್ರಾಕ್ಷ ಮಾಲೆಯಿಂದ ಶೋಭಿಸುವವರಾಗಿ ವಿಶ್ವ ವನ್ನೇ ಪವಿತ್ರಗೊಳಿಸಲು ಪರಮಾತ್ಮನೇ ಭೂಮಿಗೆ ಅವತರಿಶಿದಂತೆ ಬಸವೇಶ್ವರನು ಮಂತ್ರಿಯಾಗಿ ಮೆರೆದ ಕಲ್ಯಾಣ ದೇಶದ ಸುತ್ತು ಮುತ್ತಲಿನ ಹಳ್ಳಿ ಪಟ್ಟಣಗಳನ್ನು ನೋಡುತ್ತಾ ಕಲ್ಯಾಣದ ಬಂಮನಂತೆ (೧೭) ನೇ ಶತಮಾನದಲ್ಲಿ ಅರಳ ಗುಂಡಿಗೆಯ ಸಾಲೋಕ್ಯ ವಂಶದಲ್ಲಿ ಅವತರಿಸಿ ಕಲಬುರ್ಗಿಯಲ್ಲಿ ದಾಸೋಹ ಮೂರ್ತಿಯಾಗಿ ಮೆರೆದು ಇಂದಿಗೂ ದಾಸೋಹ ಕಾರ್ಯದಲ್ಲಿ ಕಣ್ಣೆನಿಸಿದ ಕಲಬುರ್ಗಿಗೆ ಬಂದು ಶರಣ ಬಸವೇಶ್ವರನ ದೇವಾಲಯವನ್ನು ಕಣ್ಣುಗಳಿಂದ ಕಂಡು ಕಡು ಹರ್ಷಿತನಾಗಿ ಶರಣು ಬಸವನ ಮಠದಲ್ಲಿ ನಡೆಯುವ ಭೂರಿ ದಾಸೋ ಹವನ್ನು ಕಂಡು ತಲೆದೂಗಿ ಕ್ಷಣಕ್ಷಣಕ್ಕೂ ಶಿವಶಿವಾ ಯಂದು ಶಿವನಾ ಮವನ್ನು ನುಡಿಯುತ್ತಾ ಹಾದಿಯಲ್ಲಿ ಹತ್ತಿದ ಹಳ್ಳಿಗಳಿಗೆ ಹೋಗಿ ತನ್ನ ಮನಸ್ಸಿಗೆ ಸರಿಬಂದ ಭಕ್ತರಿರಲಿ ಮಹೇಶ್ವರರಿರಲಿ ಅಲ್ಲಿ ವಾಸ ಮಾಡಿ ತನ್ನನಿತ್ಯಲಿಂಗಾರ್ಚನಾದಿ ನಿಯಮಗಳನ್ನು ನೆರವೇರಿಸಿ ನಂತರ ಅಂಗದಿಚ್ಛೆಗಲ್ಲದೆ ಲಿಂಗಾರ್ಪಿತಕ್ಕಾಗಿ ಲಿಂಗಾಂಗಿಗಳ ನಾಲ್ಕೈದು ಮನೆ ಗಳಿಗೆ ಅಷ್ಟೇ ಹೋಗಿ ಭಕ್ತರಿಂದ ಬಂದುದನ್ನೇ ಮಹಾ ಪ್ರಸಾದವೆಂದು ಭಾವಿಸಿ ಅಷ್ಟರಿಂದಲೇ ತೃಪ್ತರಾಗುತ್ತಿದ್ದರು.

ಅಕಸ್ಮಾತ್ ಯಾರಾದರೂ ಭಕ್ತರು ಭಕ್ತಿಯಿಂದ ಬಂದು ಬಿನ್ನಹಮಾಡಿಕೊಂಡರೆ ಭಕ್ತರ ಆಗ್ರಹದಮೇರೆಗೆ ಅವರಲ್ಲಿ ಊಟ ಮಾಡುತ್ತಿದ್ದರು ಇದಲ್ಲದೆ ತಮ್ಮ ಸಂಚಾರದಲ್ಲಿ ಅನುಕೂಲ ಬಂದಾಗ ಪ್ರಸಾದಕ್ಕೆ ಕೊರತೆಯಾದರೆ ಭಕ್ತರಲ್ಲಿ ಒಣ ಭತ್ತಗಳಾದ ಜೋಳ ಗೋದಿ ಅಕ್ಕಿ ಮುಂತಾದ ಒಣ ಪದಾರ್ಥಗಳನ್ನೇ ನೀಡಿಸಿಕೊಂಡು ಬಂದ ಧಾನ್ಯಗಳನ್ನು ಬಂಡೆಯಮೇಲೆ ಸಣ್ಣಾಗಿ ಅರೆದು ತನ್ನಲ್ಲಿದ್ದ ಎಡಿ ಬಟ್ಟ ಲಲ್ಲಿ ಉಪ್ಪು ಖಾರವಿಲ್ಲದೇ ಅದನ್ನೇ ಪಾಯಸವನ್ನು ಮಾಡಿ ಬಸವ ಪ್ರಸಾದವೆಂದು ಭಾವಿಸಿ ತೃಪ್ತಿ ಮಾಡಿಕೊಳ್ಳುತ್ತಿದ್ದರು. ತನ್ನಲ್ಲಿ ಬಂದ

ಭಕ್ತಸಮೂಹಕ್ಕೆ ಅಷ್ಟಾವರಣಗಳ ಮಹತ್ವವನ್ನು ಭಕ್ತಿಭಾವದಿಂದ ತುಂಬಿ ತುಳುಕುತ್ತಿರುವ ಬಸವರಸನ ವಚನ ಶಾಸ್ತ್ರವನ್ನು ಬೋಧೆ ಮಾಡುತ್ತ ಪರಮಾತ್ಮನ ಪ್ರೇರಣೆಯಾದಕಡೆ ಪ್ರಯಾಣ ಮಾಡುತ್ತ ನಡೆದರು. ಘನಮಠೇಶರು ಅಲ್ಪಕಾಲದಲ್ಲಿಯೇ ಕನ್ನಡ ವಿದ್ಯೆಯಲ್ಲಿ ಪರಿಣತೆಯನ್ನು ಪಡೆದು ಕನ್ನಡದಲ್ಲಿಯೇ ಶಿವಸ್ತುತಿ ಗುರುಸ್ತುತಿಗಳನ್ನು ಬಹು ಸ್ವಾರಶ್ಯವಾಗಿ ರಚಿಸಿ ಅವುಗಳನ್ನು ಆನಂದಾತಿಶಯವಾಗಿ ಹಾಡುತ್ತ ಕನ್ನಡ ದೇಶದ ಸೊಬಗನ್ನು ಕಣ್ಣಾರೆ ಕಾಣುತ್ತ ಹೊತ್ತು ಮುಳುಗಿದ ಊರುಗಳಲ್ಲಿ ವಾಸಮಾಡಿ ಅಲ್ಲಿರ್ದ ಭಕ್ತರಿಂ ತೃಪ್ತಿಹೊಂದಿ ಅನ್ಯಮತಗಳಿಂದ ಆವರಿಸಿದ ಭಕ್ತರ ಅನಾಚಾರಗಳನ್ನು ಕಂಡು ಕಳಕಳಿಯುಳ್ಳವರಾಗಿ ಅವರಿಗೆ ವಿವರವನ್ನು ಗುರು ಲಿಂಗ ಜಂಗಮ ಪಾದೋದಕ ಪ್ರಸಾದಾದಿ ಅಷ್ಟಾವರ್ಣದ ಅರಿವನ್ನೂ ಅವರಿಗೆ ಅರ್ಥವಾಗುವಂತೆ ವಚನ ಶಾಸ್ತ್ರದ ರಹಶ್ಯವನ್ನು ಹೇಳುವಾಗ ಶಿವಶರಣರಾದ ಮಡಿವಾಳ ಮಾಚಯ್ಯ ಅಂಬಿಗರ ಚೌಡಯ್ಯ ಚನ್ನಬಸವೇಶ ಶಿದ್ಧರಾಮ ಮೊದಲಾದ ಮಹಾತ್ಮರ ಭಕ್ತಿಮಾರ್ಗವನ್ನು ಕೇಳುವವರು ತಲೆದೂಗುವಂತೆ ಅವರಲ್ಲಿ ಭಕ್ತಿಯ ಅಂಕುರವು ಬೆಳೆದು ಮರವಾಗುವಂತೆ ಭಕ್ತಿಯ ಬೀಜವನ್ನು ನಟ್ಟು ತಾವು ತಮ್ಮ ಗುರುಗಳಾದ ಘನಮಠೇಶರ ಅಂಕಿತ ವಿಟ್ಟು ರಚಿಸಿದ ಪದಗಳನ್ನು ಅವರಿಗೆ ಕಲಿಸುತ್ತಿದ್ದರು. ಭಕ್ತರು ಆನಂದದಿಂದ ಇವರು ಮಾಡಿದ ಪದ್ಯಗಳನ್ನು ಹಾಡುತ್ತಿರುವಾಗ ಅಂತ್ಯಕ್ಕೆ ಕಡೆ ನುಡಿಯಲ್ಲಿ ಅಂಕಿತವಾದ ಘನಮಠೇಶನ ಗುರುಗಳ ಹೆಸರನ್ನೇ ಇವರೇ ಘನಮಠೇಶರೆಂದು ತಿಳಿದು ವಾಡಿಕೆಯಾಗಿ ಲೋಕದ ಭಕ್ತರು ನಾಗಭೂಷಣರಿಗೆ ಘನಮಠೇಶರೆಂದೂ ಘನಮಠದಪ್ಪನವರೆಂದೂ ಕರೆಯಲಿಕ್ಕೆ ಹತ್ತಿದರೂ.

ಅಲ್ಲಿಂದ ಪ್ರಪಂಚದಲ್ಲಿ ಇವರ ಹೆಸರು ಘನಮಠೇಶರೆಂದು ಪ್ರಸಿದ್ಧವಾಯಿತು ಈ ಪ್ರಕಾರವಾಗಿ ಘನಮಠೇಶರು ಶಿವಾಧಿಕ್ಯದ ಪ್ರಸಾರವನ್ನು ಊರೂರಿಗೆ ಮಾಡುತ್ತಾ ಮುಂದಿನ ಗ್ರಾಮುಗಳಿಗೆ ಪ್ರಯಾಣ ಮಾಡುತ್ತಾ ಮುಂದೆ ಘನಮಠೇಶರು ಸೊನ್ನಲಾಪುರದ ಮುದ್ದನಗೌಡ

ಸುಗ್ಗಲ ದೇವಿಯವರ ಗರ್ಭದಲ್ಲಿ ಜನಿಸಿ ಶಿವಭಕ್ತಿ ಸಾಮ್ರಾಜ್ಯದಲ್ಲಿ ಮೆರೆದ ಶಿವಶರಣರ ಶಿದ್ಧರಾಮೇಶನ ದರ್ಶನಾಪೇಕ್ಷಿಯಾಗಿ ಪ್ರಯಾಣ ಮಾಡುತ್ತಿರಲು ಮಾರ್ಗದಲ್ಲಿ ಹತ್ತಿದ ಯಾವದೊಂದು ಊರಲ್ಲಿ ಆ ಊರ ಸಣ್ಣ ಮಠದಲ್ಲಿ ವಾಸ ಮಾಡಿ ತನ್ನ ನಿತ್ಯ ಕರ್ಮಾಚರಣೆಯನ್ನು ಮುಗಿಸಿಕೊಂಡು ಬಂದ ಭಕ್ತರಿಗೆ ಬಸವ ಬೋಧಾಮೃತವನ್ನು ಮಾಡು ತ್ತಿರಲು ಘನಮಠೇಶರು ಬಂದ ಭಕ್ತರನ್ನೆಲ್ಲಾ ನಿಮ್ಮ ನಿಮ್ಮ ಹೆಸರೇ ನೆಂದು ಕೇಳಲು ಅವರೆಲ್ಲರು. ಕ್ರಮೇಣ ಬಸಪ್ಪ ಚನಬಸಪ್ಪ ಗುರಬ ಸಪ್ಪ ಶಿವಬಸಪ್ಪನೆಂದು ಹೇಳುತ್ತಿರಲು ಮತ್ತೊಬ್ಬನು ತನ್ನ ಹೆಸರು ಫಕೀರಪ್ಪನೆಂದು ಹೇಳಿದಾಕ್ಷಣವೇ ಘನಮಠೇಶರು ಕಿಡಿಕಿಡಿಯಾಗಿ ಶಿವಶಿವಾ ಪರಮಾತ್ಮನ ಸಹಸ್ರ ನಾಮಗಳಿರುತ್ತಿರಲು ಅಜ್ಞಾನದಿಂದ ಅನ್ಯಮತದ ಅಮಂಗಲ ನಾಮಗಳನ್ನಿಟ್ಟುಕೊಂಡು ಅದೋಗತಿಗೀಡಾಗ ಬಹುದೇ ನಿಜವಾದ ವೀರಶೈವರೆಂದೂ ಹೀಗೆ ಮಾಡಲಾರರು ಶಿವಭಕ್ತ ನಾದವನು ತನ್ನ ಮುಖದಿಂದ ಅವಾಚ್ಯ ಶಬ್ದಗಳನ್ನೆಂದಿಗೂ ಆಡಲಾ ರನು ಅವನು ತನ್ನ ಮನೆಯಲ್ಲಿಯ ಎತ್ತುಗಳಿಗೂ ಸಹ ಪರಮಾತ್ಮನ ನಾಮಗಳಾದ ಈಶ್ವರ ಮಲ್ಲ್ಯ ಮಹಾದೇವ ಎಂಬ ಮಂಗಲ ನಾಮ ಗಳನ್ನೇ ಇಡುವನು ಬಂಧುಗಳೇ ಇನ್ನುಮೇಲೆ ಹೀಗೆ ನೀವೆಂದೂ ಮಾಡಬಾರದು. ಅರಿಯದೆ ಮಾಡಿದ ಅಪರಾಧಗಳನ್ನು ಅರಿತ ಮೇಲಾ ದರೂ ಮಾಡದಿರುವದೇ ಮೇಲು ಹರಿಬ್ರಹ್ಮಾದಿಗಳಿಗೂ ಅಸಾಧ್ಯವಾದ ಪರಶಿವನ ಪಂಚ ಮುಖಗಳಾದ ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯಗಳೆಂಬ ಪಂಚ ಮುಖಗಳಿಂದುತ್ಪನ್ನರಾದ ರೇಣು ಕಾದಿ ಪಂಚಾಚಾರ್ಯರಿಂದ ಯುಗಯುಗಾಂತರ ಸ್ಥಾಪಿತವಾದ ವೀರಶೈವ ಮತ ಅಥವಾ ವೀರಶೈವ ಮತದಲ್ಲಿ ನಾವು ಹುಟ್ಟಿದ್ದರೂ ನಾಸ್ತಿಕರಂತೆ ನಾಚಿಕೆಯಿಲ್ಲದೆ ದುರಗವ್ವ ದ್ಯಾಮವ್ವ ಪಕೀರಪ್ಪ ಯಮುನಪ್ಪನೆಂಬ ಅನ್ಯಮತದ ಕ್ಷುದ್ರ ದೇವತೆಗಳ ಅಬದ್ಧ ನಾಮಗಳನ್ನು ಬದ್ಧ ವೀರಶೈವ ರಾದ ನಾವು ನಮ್ಮ ಮನೆಯಲ್ಲಿ ಮಕ್ಕಳಿಗಾಗಲಿ ದನಕರುಗಳಿಗಾಗಲಿ ಎಂದೂ ಇಡಬಾರದು.

ನಮ್ಮ ಧರ್ಮವನ್ನು ನಾವು ಜಾಗ್ರತಗೊಳಿಸಬೇಕಾದರೆ ನಮ್ಮ ಧರ್ಮದ ಅಧಿದೇವನಾದ ಪರಶಿವನ ಅನಂತ ನಾಮಗಳನ್ನಾಗಲಿ ಅಥವಾ ಆಜನ್ಮ ಪರ್ಯಂತರ ಸಮಾಜ ಸೇವೆಯನ್ನು ಮಾಡಿ ಧರ್ಮ ಧುರಂಧರರೆನಿಸಿದ ಬಸವಾದಿ ಶಿವಶರಣರ ಶುಭ ನಾಮಗಳನ್ನಾಗಲಿ ನಾವು ನಮ್ಮ ಪ್ರಪಂಚದಲ್ಲಿ ಬಳಸುತ್ತಿರಬೇಕು. ಸಮಾಜ ಸೇವೆಯಲ್ಲಿ ಇದೂ ಒಂದು ಅಂಗವಾಗಿದೆ. ನಮ್ಮ ಸಮಾಜವು ಸರ್ವಾಂಗ ಸುಂದರ ವಾಗಬೇಕಾದರೆ ಸರ್ವ ರೀತಿಯಿಂಲೂ ನಾವು ಪ್ರಯತ್ನಿಸಬೇಕು. ಶಿವ ಧರ್ಮದಲ್ಲಿ ಹುಟ್ಟಿದ ನಾವು ಅನಂತ ಪ್ರಕಾರವಾಗಿ ಸಮಾಜ ಸೇವೆ ಮಾಡಿದರೆ ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಮುಕ್ತಿಯನ್ನೂ ಹೊಂದಿ ಪರಶಿವನ ಪ್ರೇಮಕ್ಕೆ ಪಾತ್ರರಾಗುತ್ತೇವೆ. ಅಂದಮೇಲೆ ವಿಚಾರಿಗಳಾ ದವರು ಒಂದು ಅಂಗುಲಷ್ಟು ಕೂಡ ಅನ್ಯ ಮತದ ಆಕ್ರಮಣಕ್ಕೆ ಆಸ್ಪದ ಕೊಡಬಾರದು.

ಸಮಾಜದಲ್ಲಿ ಕಿರಿದಾಗಿ ಕಾಲಿಟ್ಟ ಅನ್ಯ ಮತದ ಅಂಶವೇ ಕ್ರಮೇಣ ಕೈಗೆ ನಿಲುಕಲಾರದಷ್ಟು ದೊಡ್ಡದಾಗಿ ನಮ್ಮ ಮತದ ಅವನತಿಗೆ ನಾವೇ ಕಾರಣರಾಗುತ್ತೇವೆ. ನಾವು ಹೋದ ಹೋದಲ್ಲೆಲ್ಲ ವೀರಶೈವ ರಧಿಕ ಸಂಖ್ಯೆಯುಳ್ಳ ಈ ಕನ್ನಡ ನಾಡಿನಲ್ಲಿ ಎಲ್ಲಿ ನೋಡಿದರೂ ಜಾತಿ ಯಿಂದ ವೀರಶೈವರಾದರೂ ಅವರ ಹೆಸರುಗಳು ಮಾತ್ರ ತಿಮ್ಮಪ್ಪ ವೆಂಕಪ್ಪ ಎಂದು ವಿಚಿತ್ರವಾಗಿವೆ. ಶಿವಶಿವಾ ಇದು ಕಲಿರಾಜನ ಮಹಿ ಮೆಯೋ ಅಥವಾ ಅನ್ಯ ಮತೀಯರ ಆಕ್ರಮಣದ ಅನಾಹುತವೋ ಆ ಪರಶಿವನೇ ಬಲ್ಲ. ಏಳನೂರು ವರ್ಷಗಳ ಹಿಂದೊಮ್ಮೆ ಬೌದ್ಧ ಜೈನ ಚಾರ್ವಾಕ ಮತಗಳಿಂದ ಅಧೋಗತಿಗೀಡಾದ ವೀರಶೈವ ಮತ ವನ್ನು ಶಿವನೇ ಬಸವನಾಗಿ ಬಾಗೇವಾಡಿಯಲ್ಲಿ ಜನಿಸಿ ಕಲ್ಯಾಣದಲ್ಲಿ ಕರಣಿಕನಾಗಿ ಕ್ರಾಂತಿಯನ್ನೆಬ್ಬಿಸಿ ಶಿವಾನುಭವ ಮಂಟಪದಿಂದ ಕೀರ್ತಿ ಕಹಳೆಯನೂದಿ ದಶದಿಕ್ಕುಗಳಿಂದ ಶಿವಶರಣರನ್ನು ಕೂಡಿಸಿ ವೇದ ಆಗಮ ಉಪನಿಷತ್ ಗರ್ಭಿತಗಳಾದ ಶಿವಮತ ತತ್ವಗಳನ್ನು ತಮ್ಮ ವಚನ ವಾಙ್ಮಯವೆಂಬ ಪ್ರವಾಹವನ್ನು ಜಗತ್ತಿನಲ್ಲಿ ಹರಿಸಿ ಪುರಾಣ

ಪುರುಷನಾಗಿ ಮೆರೆದ ಬಸವನ ಮಹಿಮೆಯನ್ನು ನೀವು ಕೇಳಿಲ್ಲವೇ
ಈ ಪ್ರಕಾರ ಘನಮಠೇಶರು ಭಕ್ತ ಸಮುದಾಯಕ್ಕೆ ಅರ್ಥವಾಗಿ ಸಮಾ
ಜದ ಅಭಿಮಾನವು ಆವಿರ್ಭವಿಸುವಂತೆ ಅರುಹುತ್ತಿದ್ದರೂ. ವೀರಶೈವ
ಜನಾಂಗದಲ್ಲಿ ಪರಮತದ ಹೆಸರುಗಳು ಘನಮಠೇಶರ ಕರ್ಣಕ್ಕೆ ಬಿದ್ದರೆ
ಕಾದ ಎಣ್ಣೆ ಸುರುವಿದಂತೆ ನೋವಾಗುತ್ತಿತ್ತು. ಅಂದಮೇಲೆ ಶಿವಯೋಗಿ
ಗಳಿಗೆ ತಮ್ಮ ಸಮಾಜ ತಮ್ಮ ಧರ್ಮದ ಮೇಲೆ ಇದ್ದ ಅಪ್ರತಿಮ ಪ್ರೇಮ
ದ ಆಳವನ್ನು ಅಲ್ಪನಾದ ನನ್ನಿಂದ ಅಳತೆ ಮಾಡುವದು ಅಸಾಧ್ಯ
ಮಹಾತ್ಮರು ಪಾಮರರ ಕಣ್ಣಿಗೆ ಮನುಷ್ಯರಂತೆ ಕಂಡಾಗ್ಯೂ ಮಂದ
ಮಾನವರಂತೆ ಮನಸ್ಸಿಗಧೀನರಾಗಿ ಅರಿಷಡ್ವರ್ಗಾದಿಗಳಿಗೆ ಆಹುತಿಯಾ
ಗದೆ ಮಲತ್ರಯಗಳನ್ನು ಮಾಯಮಾಡಿ ಸಂಸಾರದಲ್ಲಿದ್ದರೂ ಧರ್ಮ
ಅರ್ಥ ಕಾಮ ಮೋಕ್ಷಗಳೆಂಬ ರಾಜಮಾರ್ಗದಲ್ಲಿ ನಡೆದು ಮಾನವ
ಲೋಕಕ್ಕೆ ಮಾರ್ಗದರ್ಶಿಗಳಾಗಿದ್ದಾರೆ.

ನಮ್ಮ ಘನಮಠೇಶ್ವರರು ತಮ್ಮ ಧರ್ಮದ ಮೇಲಿನ
ಪ್ರಬಲ ಪ್ರೇಮದಿಂದಲೇ ತಮ್ಮ ಅನಿತ್ಯ ಸಂಸಾರಕ್ಕೆ ತಿಲಾಂಜಲಿ
ಯನ್ನು ಕೊಟ್ಟು ತನ್ನ ದೇಶಕೋಶಗಳನ್ನು ತೊರೆದು ಜಗತ್ತಿನಲ್ಲಿ ತನ್ನ
ಧರ್ಮದ ಕುಂದು ಕೊರತೆಗಳನ್ನು ಕಣ್ಣಾರೆ ಕಂಡು ತನ್ನ ಧರ್ಮ
ಸರ್ವಾಂಗ ಸುಂದರವಾಗಬೇಕಾದರೆ ತಾನೇನು ಮಾಡಬೇಕೆಂಬುದನ್ನು ದೃಢ
ಸಂಕಲ್ಪವುಳ್ಳವನಾಗಿಯೇ ವೀರ ವೈರಾಗ್ಯವನ್ನು ವಶ ಮಾಡಿಕೊಂಡು
ಶಿವಭಕ್ತರಧಿಕವುಳ್ಳ ಕನ್ನಡ ದೇಶಕ್ಕೆ ಆಗಮಿಸಿ ಕಠಿಣವಾದ ಕನ್ನಡ
ವಿದ್ಯೆಯನ್ನು ಅಭವ ಪ್ರಸಾದದಿಂದ ಆಯಾಸವಿಲ್ಲದೆ ಅಲ್ಪ ಕಾಲದಲ್ಲಿಯೇ
ಅರ್ಥಗರ್ಭಿತವಾಗುವಂತೆ ಕವಿತ್ವ ಮಾಡುತ್ತ ಶ್ರೇಷ್ಠ ಕವಿಯಾಗಿ ಕೈವಲ್ಯ
ರಚಿಸಿರುವದನ್ನು ನೋಡಿದರೆ ಇಂಥಾ ಶಕ್ತಿಯು ಮಹಾತ್ಮರಿಗಲ್ಲದೆ
ಮಾನವರೆಂದಿಗೂ ಸಾಧ್ಯವಲ್ಲ. ಘನಮಠೇಶರ ಈ ಕಲಿಯುಲಾರದ
ಕವಿತ್ವ ಅಘಟಿತ ಘಟನಾ ಕಾರ್ಯ ಇಚ್ಛಾ ಮರಣತ್ವ ಈ ಶಕ್ತಿತ್ರಯ
ಗಳನ್ನು ನೋಡಿದರೆ ಕೈಲಾಸದಲ್ಲಿಯ ಪರಮಾತ್ಮನ ಚಿತ್ಕಳೆಯೇ ಧರ್ಮ
ಮೂರ್ತಿಯಾಗಿ ಧರೆಗವತರಿಸಿ ಧರ್ಮೋದ್ಧಾರ ಮಾಡಲು ಬಂದ ಅವತಾರಿ
ಪುರುಷರೆಂದರೂ ಅತಿಶಯೋಕ್ತಿಯಾಗಲಾರದು.

ಅಂತೆಯೇ ಶಿವಯೋಗಿಗಳು ತಮ್ಮ ಅಂತರಂಗದ ಅಭಿಃ ಪ್ರಾಯುವನ್ನು ಬಹಿರಂಗದಲ್ಲಿ ಭಕ್ತರಿಗೆ ಬೋಧ ಮಾಡುತ್ತಾ ಬಸವನ ವಚನ ಶಾಸ್ತ್ರವನ್ನು ಬೆನ್ನಿಗೆ ಕಟ್ಟಿಕೊಂಡು ಬಸವನೇ ಶಿವ ಶಿವನೇ ಬಸವನೆಂದು ಭಕ್ತರಲ್ಲಿ ಅದ್ವೈತ ಭಾವನೆ ಬೆಳೆಸುತ್ತ ಹಳ್ಳಿ ಹಳ್ಳಿಗೆ ವಾಸ ಮಾಡುತ್ತಾ ಸೊನ್ನಲಾಪುರದ ಸಮೀಪಕ್ಕೆ ಬರುವವರಾಗಿದ್ದಾರೆ ಅಸ್ತು ಈ ಮೂರನೆಯು ಪ್ರಕರಣದಲ್ಲಿ ಮಹಾತ್ಮರ ಮುಖ್ಯಗಳಾದ ಶಕ್ತಿತ್ರಯುಗಳಲ್ಲಿ ಮೊದಲನೆಯದಾದ ಕಲಿಯಲಾರದ ಕವಿತ್ವವನ್ನು ಕಂಡು ವಾಚಕರಾದ ತಮ್ಮ ಮನಸ್ಸು ಸಹ ಶಿವಯೋಗಿಗಳ ಪಾದಾರ ವಿಂದಗಳಲ್ಲಿ ಬಾಗಿರಬಹುದಲ್ಲವೆ.

೩ ನೆಯ ಪ್ರಕರಣಂ ಸಮಾಪ್ತಂ



# ೪ ನೆಯ ಪ್ರಕರಣಂ

ಬಿಳಿಯ ಕಂಬಳಿಯ ಕೊಪ್ಪಿಯಮಾಡಿ ಪೊದಿಯುತ್ತ।
ನಿಲುವುಳ್ಳ ಕೋಲನೊಂದನು ಕರದಿ ಪಿಡಿಯುತ್ತ।
ಚೆಲುವ ಕನ್ನಡನಾಡ ಕಾಣುವಭಿಲಾಷೆಯಿಂ। ನಡೆದನಾ
ಘನಮಠೇಶಂ ॥೧॥

ಶ್ರೀ ಘನಮಠೇಶನು ಕಾಯ ಪರಿಶುದ್ಧನಾಗಿ ಕನ್ನಡ ವಿದ್ಯೆಯಲ್ಲಿ ಪಾರಂಗತನಾಗಿ ಕಂದುಗೊರಳನ ಮೇಲೆ ಕವನಗಳನ್ನು ಕಟ್ಟಿ ಹಾಡುತ್ತಾ ಸೊನ್ನಲಾಪುರದ ಸಿದ್ಧರಾಮೇಶನ ದರ್ಶನಕ್ಕೆ ಉತ್ಕಟೇಚ್ಛೆಯುಳ್ಳವನಾಗಿ ಮನಸ್ಸಿನ ವ್ಯಾಪರಗಳನ್ನೆಲ್ಲಾ ಮಾಯಮಾಡಿ ಇಂದ್ರಿಯಾದಿಗಳ ಶಕ್ತಿಗಳನ್ನೆಲ್ಲಾ ಒಂದೊಂದೆ ನಿಗ್ರಹಿಸಿ ಬೇಕು ಬೇಡೆಂಬ ಭ್ರಾಂತಿಯನ್ನು ಬರಿದು ಮಾಡಿ ಯಾರಿಂದಲೇನೂ ಅಪೇಕ್ಷಿಸದೆ ತನ್ನ ಸಮಾಜವು ಸಂರ್ವಾಂಗ ಸುಂದರವಾಗಿ ಸರ್ವಮತ ಶ್ರೇಷ್ಠವಾಗಿ ಶಿವಸರ್ವೋತ್ತ್ರಮವಾಗಿ ಬೆಳಗಲೆಂಬುದೇ ಮನಸ್ಸಿನ ಮಹಾ ಬಯಕೆಯುಳ್ಳವನಾಗಿ ಮಾರ್ಗ ಕ್ರಮಿಸುತ್ತಿರಲು ಹಾದಿಯಲ್ಲಿ ಹತ್ತಿದ ಊರುಗಳಲ್ಲಿ ಶಿವ ದೇವಾಲಯಗಳಲ್ಲಾಗಲಿ ಮಾಹೇಶ್ವರರ ಮಠಗಳಲ್ಲಾಗಲಿ ಶಿವಭಕ್ತರ ಸದನಗಳಲ್ಲಾಗಲಿ ವಾಸಮಾಡುತ್ತಿದ್ದನು.

ಇಷ್ಟರಲ್ಲಿಯೇ ಕರ್ನಾಟಕದ ಕೆಲವೆಡೆಯಲ್ಲಿ ಇವರ ಪ್ರಖ್ಯಾತಿಯು ಪವಾಡಪುರುಷರೆಂದೂ ಪರಮ ವಿರಾಗಿಗಳೆಂದೂ ಪಂಚಾಚಾರ ಪರಾಯಣರೂ ಷಟ್‌ಸ್ಥಲ ಪ್ರತಿಪಾದಕರೆಂದೂ ಪ್ರಸಿದ್ಧವಾಗಿತ್ತು ಪ್ರಯುಕ್ತ ಇವರು ಹೋದ ಹೋದಲ್ಲೆಲ್ಲ ಭಕ್ತರು ಇವರ ಬರುವಿಕೆಯನ್ನೆ ಎದುರು ನೋಡುತ್ತಿದ್ದರು. ಘನಮಠೇಶರು ಸೊನ್ನಲಾಪುರದ ಮಾರ್ಗದಲ್ಲಿ

ಅಕಸ್ಮಾತ್ ಯಾವದೋ ಒಂದು ಊರೊಳಗೆ ಪ್ರವೇಶಿಸಿದಾಕ್ಷಣವೇ ಅಲ್ಲಿಯ ಭಕ್ತರು ಅತ್ಯಂತ ಭಕ್ತ್ಯಾದರಗಳಿಂದ ಇವರನ್ನು ತಮ್ಮಲ್ಲಿಯ ಮಠಕ್ಕೆ ಕರೆದುಕೊಂಡು ಹೋಗಿ ಇವರು ಶಿವಪೂಜಾದಿ ಕಾರ್ಯಗಳಿಗೆ ಏನೊಂದೂ ಕೊರತೆಯಾಗದಂತೆ ಅನುಕೂಲ ಮಾಡಿ ಕೊಟ್ಟು ಸಾಯಂಕಾಲ ಸರ್ವರೂ ಮಠಕ್ಕೆ ಬಂದು ಘನಮಠೇಶರಿಂದ ವೀರಶೈವಾ ಚಾರದ ವಿಷಯ ಶ್ರವಣ ಮಾಡಿಕೊಂಡು ತಮ್ಮ ತಮ್ಮ ಮನೆಗಳಿಗೆ ಶಿವ ಯೋಗಿಗಳ ಅನುಜ್ಞೆಯನ್ನು ಹೊಂದಿ ಹೋದನಂತರ ಶಿವಯೋಗಿಗಳು ಮಠದಲ್ಲಿಯೇ ಮಲಗಿ ಮರುದಿವಸ ಸೂರ್ಯೋದಯಕ್ಕೆ ಮುಂಚಿತವಾ ಗಿಯೇ ಬಹಿರ್ದೆಶೆಗಾಗಿ ಹೋದ ಸಮಯ ಊರ ಮುಂದಿನ ತೋಟಕ್ಕೆ ಕೈ ತೊಳೆಯಲು ಹೋದಾಗ ತೋಟದೊಳಗಿನ ಎಳೆ ಎಳೆ ಬದನೀಕಾಯಿ ಗಳನ್ನು ಕಂಡು ಇವರ ಮನಸ್ಸು ಬದನೀಕಾಯಿಗಳ ಮೇಲೆ ಅಪೇಕ್ಷೆ ಯಾಯಿತು.

ಆಗ್ಗೆ ಶಿವಯೋಗಿಗಳು ತಮ್ಮ ಮನಸ್ಸಿಗೆ ತಾವೇ ಹೀಯಾಳಿ ಸುವವರಾಗಿ ಎಲೈ ಮನವೇ ನಿನ್ನ ಮರ್ಕಟ ಸಮವಾದ ಚೇಷ್ಟೆಗಳನ್ನು ನಾಶ ಮಾಡುವ ನಿಮಿತ್ತವಾಗಿಯೇ ಮನೆ ಮಾರುಗಳನ್ನು ಬಿಟ್ಟು ನಿರಾಶಾ ಮಯನಾದ ನನಗೆ ಮತ್ತೂ ನಿನ್ನ ಉಪಟಳವೇ ಆಗಲಿ ನಿನ್ನನ್ನು ಹೀಗೇ ಹರಿಬಿಟ್ಟರೆ ಕಂಡ ಕಂಡದ್ದನ್ನು ಅಪೇಕ್ಷೆಮಾಡಿ ನನ್ನ ಬಯಕೆಯ ನ್ನೆಲ್ಲ ಕನಸಾಗಿ ಉಳಿಯುವಂತೆ ಮಾಡುತ್ತಿ ಆಗಲಿ ನಿನ್ನ ಅಪೇಕ್ಷೆಯಂತೆ ನಿನಗೆ ಸಾಕಾಗುವಷ್ಟು ಈ ದಿವಸ ಬರೇ ಬದನಿಯಕಾಯಿಗಳನ್ನೇ ಭೋಜನ ಮಾಡಿಸುತ್ತೇನೆ. ಎಂದು ಹಾಗೆಯೇ ಮಠಕ್ಕೆ ಬಂದು ಅಲ್ಲಿದ್ದ ಭಕ್ತರಿಗೆ ಈ ದಿವಸ ಒಂದು ಥಡೆ ಬದನೀಕಾಯಿಗಳನ್ನು ತಂದು ಸರ್ವ ಸಾಮಗ್ರಿ ಗಳನ್ನು ಹಾಕಿ ಒಳ್ಳೇ ರುಚಿಯಾಗುವಂತೆ ಪಾಕ ಮಾಡಿರಿ ಎಂದು ಹೇಳಿ ದಾಕ್ಷಣವೇ ಇವರ ಮಾತು ಅಕ್ಷರ ಸಹ ಮೀರಲಾರದ ಭಕ್ತರು ಘನಮ ಠೇಶರು ಹೇಳಿದ ಪ್ರಕಾರ ಒಂದು ಥಡೇ ಬದನಿಕಾಯಿಗಳನ್ನು ತಂದು ಮಸಾಲೆ ಮೊದಲಾದ ಸಾಹಿತ್ಯಗಳನ್ನು ಸಮಾವೇಶಗೊಳಿಸಿ ತುಂಬಗಾ ಯಿಪಲ್ಲೆ ಪಾಕಗೊಳಿಸುವಷ್ಟರಲ್ಲಿ ಶಿವಯೋಗಿಗಳು ತಮ್ಮ ಸ್ನಾನಾಚ

ರಣೆಗಳನ್ನು ಮುಗಿಸಿ ತಮ್ಮ ಎಡಿ ಬಟ್ಟಲಲ್ಲಿ ಬೇರೇ ಪದಾರ್ಥಗಳ ನ್ನೇನೂ ಎಡಿಮಾಡಿಸಿಕೊಳ್ಳದೆ ಬರೇ ಬದನೀಕಾಯಿಗಳನ್ನೇ ಎಡಿ ಮಾಡಿಸಿಕೊಂಡು ಲಿಂಗಾರ್ಪಿತಮಾಡಿ ತಮ್ಮ ಮನಸ್ಸಿಗೆ ಎಲೇ ಮನವೇ ನಿನಗಪೇಕ್ಷಿತವಾದ ಪದಾರ್ಥವೇ ನಿನ್ನ ಮುಂದೆ ಬಂದಿದೆ ಬೇಕಾದಷ್ಟು ತೆಗೆದುಕೊ ಎಂದು ಒಂದೊಂದು ಕಬಳಿಗೆ ಒಂದೊಂದು ಕಾಯಿಗಳನ್ನು ನುಂಗುತ್ತ ಮನಸ್ಸಿಗೆ ಸಾಕಾದರೂ ಮತ್ತೂ ನೀಡಿಸಿಕೊಂಡು ಮನಸ್ಸೇ ಮುಂದೆ ನಿನಗೆಲ್ಲಿಯೂ ಈ ಪ್ರಕಾರ ರುಚಿಯಾಗಿ ಬದನೀಕಾಯಿಗಳನ್ನು ಯಾರೂ ಮಾಡಿ ನೀಡಲಾರರು ಕಾರಣ ಇಲ್ಲಿಯೇ ನಿನ್ನ ಮನಸ್ಸೇ ತೃಪ್ತಿ ಮುಗಿಸಿಕೋ ನೀನು ಸಾಕೆಂದರೂ ನಾನು ಬಿಡುವದಿಲ್ಲ. ಈ ದಿವಸ ನೀನು ಬದನೀಕಾಯಿ ಬೇಡಿದಂತೆ ನಾಳೆ ಮತ್ತೊಂದನ್ನು ಬೇಡಿದರೆ ನಾನೆಲ್ಲಿಂದ ತಂದು ತೃಪ್ತಿಬಡಿಸಲಿ ಎಂದು ಮತ್ತೂ ಬದನೀಕಾಯಿಗಳನ್ನು ನುಂಗುತ್ತ ನಡುವೆ ನೀರನ್ನೂ ಸಹ ಕುಡಿಯದೆ ಬರೇ ಬದನೀಕಾಯಿಗ ಳನ್ನೇ ನುಂಗಲಿಕ್ಕೆ ಹತ್ತಿದರು.

ಹತ್ತಿರದ್ದವರು ಆಯಾಸವಾಗಿದೆ ಸ್ವಾಮೀ ಬಿಟ್ಟುಬಿಡಿರೆಂದು ಎಷ್ಟು ಬೇಡಿಕೊಂಡರೂ ಹಾಗಾಗುವದಿಲ್ಲ ಈ ಮಂಗ ಮನಸ್ಸಿಗೆ ಸಾವೋ ಪಚಾರ ಮಾಡಿದರೆ ಸಾಕಾಗುವದಿಲ್ಲ. ಒಂದು ಸಾರೆ ಮಾನವನು ಈ ಮರ್ಕಟಿಪ್ರಾಯವಾದ ಮನಸ್ಸಿಗಧೀನನಾದರೆ ಸಾಕು. ಅವನು ಬೇಕಾದಂಥ ಬುದ್ಧಿವಂತನಿರಲಿ ಅವನಿಂದ ಮಾಡಬಾರದ ಕೃತಿಗಳನ್ನೆಲ್ಲ ಮಾಡಿಸಿ ಮರ್ತ್ಯದಲ್ಲಿ ಮಾನಗೇಡಿಯನ್ನಾಗಿ ಮಾಡಿ ಮಹತ್ತರವಾದ ಮಾನವ ಶರೀರವನ್ನೇ ಹಾಳುಮಾಡಿ ಬಿಡುತ್ತದೆ. ಕಾರಣ ಪ್ರಾಜ್ಞರಾ ದವರು ಪ್ರಥಮದಲ್ಲಿ ಚಿಗುರಿರುವಾಗಲೇ ಚಿವುಟಿ ಬಿಡುವುದು ಯೋಗ್ಯ ವೆಂದು ತಾವು ಭಕ್ತರಿಗೆ ಹೇಳತ್ತಾ ಮತ್ತು ಬದನೇಕಾಯಿಗಳನ್ನು ಬಾಯೊಳಗಿಡುತ್ತಾ ಮನಸ್ಸಿಗೆ ಬೇಸರವಾಗಿ ಓಕರಿಕೆಯಾಗುವ ಸ್ಥಿತಿ ಯಲ್ಲಿದ್ದಗೂ ಜುಲುಮೆಯಿಂದ ಬದನೇಕಾಯಿಗಳನ್ನು ಬಾಯೊಳಗಿಟ್ಟು ಯಲೇ ಮನವೇ ಶಿವಭಕ್ತರ ನೆಲೆಯನ್ನರಿಯದೆ ನಿನಗಿಚ್ಛೆಯಾದುದನ್ನು ಇಚ್ಛಿಸಬೇಕೆನ್ನುವಿಯಾ ಇದರಂತೆ ಮುಂದೆ ಎಂದಾದರೂ ಕಂಡದ್ದನ್ನು

ಕಾಮಿಸಿದರೆ ನಿನಗಿದೇ ಪ್ರಾಯಶ್ಚಿತ್ತ ಇಂದಿನಿಂದ ನೀನು ಸ್ವೇಚ್ಛೆಯನ್ನು ತೊರದು ವಿವೇಕನಾಧೀನನಾಗಿ ಶಿವಶರಣರು ಮಾಡುವ ಶಿವನ ಸೇವೆಗೆ ಸಹಾಯಕನಾಗು ಎಂದು ಸಮಾಧಾನ ಹೊಂದಿ ಅಂದು ಬದನೀ ಕಾಯಿ ಪ್ರಸಾದದಿಂದಲೇ ತೃಪ್ತಿ ಹೊಂದಿದರು ಬಂದಿರುವ ಭಕ್ತರೆಲ್ಲ ಶಿವಯೋಗಿಗಳ ಈ ಅದ್ಭುತ ಸಾಹಸವನ್ನು ನೋಡಿ ಮಹಾತ್ಮರ ಮುಂದೆ ಮಾತನಾಡುವದಾಗದೆ ಮನದಲ್ಲಿಯೇ ಇವರ ಮಹಿಮೆಯನ್ನು ಕೊಂಡಾಡುತ್ತಾ ಮೌನದಿಂದ ತಮ್ಮಯ ಮನೆಗಳಿಗೆ ತೆರಳಿದರು.

ಅಲ್ಲಿಂದ ಘನಮಠೇಶರು ಮುಂದೆ ಮತ್ತೊಂದು ಗ್ರಾಮದಲ್ಲಿ ವಾಸವಾಗಿರಲು ಹಿಂದಿನ ಗ್ರಾಮದಲ್ಲಿ ಘನಿಮಠೇಶರು ಬದನಿಕಾಯಿ ಊಟ ಮಾಡಿದ ವಿಶೇಷ ವಾರ್ತೆಯು ಇಲ್ಲಿಗೂ ಕರ್ಣೋಪಕರ್ಣವಾಗಿ ಮುಟ್ಟಿ ಈ ಗ್ರಾಮದ ಓರ್ವ ಭಕ್ತನು ಶಿವಯೋಗಿಗಳು ಕಾಯಿಪಲ್ಲೆಗಳ ಮೇಲೆ ಬಹು ಪ್ರಿತಿಯೆಂದು ಬಗೆದು ಭಕ್ತಿಯಿಂದ ತನ್ನ ತೋಟದಲ್ಲಿ ಬೆಳೆದ ಉತ್ತಮೋತ್ತಮ ಬಾಳೆಯ ಹಣ್ಣುಗಳನ್ನು ತಂದು ಸ್ವಾಮಿಗಳ ಸಮ್ಮುಖದಲ್ಲಿಟ್ಟು ಭಕ್ತಿಯಿಂದ ನಮಸ್ಕಾರ ಮಾಡಿ ಬುದ್ಧೀ ಈ ಹಣ್ಣುಗಳು ಬಹಳ ರುಚಿಯಾಗಿವೆ ತಾವು ಸ್ವೀಕರಿಸಬೇಕೆಂದು ಪ್ರಾರ್ಥಿಸಲು ಘನಮಠೇಶರು ಬಂದ ಭಕ್ತನನ್ನುದ್ದೇಶಿಸಿ ತಮ್ಮಾ ನಿನ್ನ ಕಾಯಕಷ್ಟದಿಂದ ನೀನು ತೋಟದಲ್ಲಿ ಬೆಳೆಯಿಸಿದ ಫಲಗಳನ್ನು ತಿನ್ನಲು ನಿನಗೊಬ್ಬನಿಗೆ ಅಧಿಕಾರ ನಂಬಿದ ಭಕ್ತರಿಗೆ ಬೇಡಿದಿಷ್ಟಾರ್ಥವನ್ನು ಕೊಟ್ಟು ಕಾಯುವ ಕರುಣಾಳು. ಜಗದ್ರಕ್ಷಕನಾದ ಆ ಪರಮಾತ್ಮನೊಬ್ಬನಿಗೆ ಅಧಿಕಾರ ಹೀಗೆದ್ದು ಯಾವದೂ ಸಂಬಂಧವಿಲ್ಲದ ನಾವು ನಿನ್ನ ಹಣ್ಣುಗಳನ್ನು ಅರ್ಪಿತ ಮಾಡಿಕೊಂಡರೆ ನಿನ್ನ ಮತ್ತು ನಿನ್ನ ತೋಟದ ಭಾರವನ್ನು ನಾವು ಮತ್ತಾವ ಜನ್ಮದಲ್ಲಿ ತೀರಿಸಬೇಕು ನಿನ್ನ ಹಣ್ಣುಗಳನ್ನು ನೀನು ತಗೆದುಕೊಂಡು ಹೋಗಿ ಬೆಲೆಗೆ ಮಾರಿದರೆ ಬಂದ ಹಣದಿಂದ ನಿನ್ನ ಮಡದಿ ಮಕ್ಕಳು ತೃಪ್ತರಾಗುತ್ತಾರೆ ನಮಗೇಕೆ ಈ ಹೊರಲಾರದ ಹೊರೆ, ಹೊರಿಸಲು ಬಂದಿರುವಿಯೆಂದು ಅವನನ್ನು ಸಮಾಧಾನ ಪಡಿಸಿ ತಮ್ಮ ನಿತ್ಯ ನೇಮಗಳನ್ನು ಮಠದಲ್ಲಿ ಮುಗಿಸಿಕೊಂಡು ಮುಂದೆ ಸೊನ್ನಲಾಪುರಕ್ಕೆ

ಶೀಘ್ರದಲ್ಲಿಯೇ ಮುಟ್ಟಬೇಕೆಂಬ ಮಹತ್ವಾಕಾಂಕ್ಷೆಯುಳ್ಳವರಾಗಿ ಮಾರ್ಗ ಕ್ರಮಣ ಮಾಡುತ್ತಿರಲು ಶಿವಯೋಗಿಗಳ ಶರೀರದಲ್ಲಿ ಪಿತ್ತ ವಿಕಾರದಿಂದ ಜ್ವರ ಬಂದು ಆಯಾಸವಾಗಿ ಮುಂದೆ ಪ್ರಯಾಣ ಮಾಡುವದಾಗದೆ ಮಾರ್ಗದಲ್ಲಿ ಲಿಂಗಾಯತರಿಲ್ಲದಿರುವ ಒಂದು ಗ್ರಾಮದ ಬಹಿರ್ಭಾಗದ ಶಿವಾಲಯದಲ್ಲಿ ಸ್ವಸ್ಥವಾಗಿ ಮಲಗಿಕೊಂಡು ದೇಹದಲ್ಲಿ ಅತಿ ಆಯಾಸ ವಾಗಿದ್ದರೂ ತನ್ನ ನಿತ್ಯಾಚರಣೆಗಳನ್ನೆಲ್ಲಾ ಸಾಂಗಗೊಳಿಸಿ ದೇವಾಲಯ ದಲ್ಲಿ ತಾನೊಬ್ಬನೇ ತನ್ನ ದೇಹಕ್ಕಾದ ಅತಿ ಆಯಾಸವಂ ಕಂಡು ಅದಕ್ಕೆ ಏನೂ ಔಷದೋಪಚಾರವನ್ನು ಮಾಡದೆ ಬಾಲ್ಯ ಯೌವನ ಜರೆ ಮೊದಲಾದ ಮೂರವಸ್ಥೆಗಳಿಂದ ಕೂಡಿದ ಈ ಶರೀರಕ್ಕೂ ನನಗೂ ಯಾವ ಸಂಬಂಧವಿಪೆ ಷಡ್ರುಚಿಗಳನ್ನಪೇಕ್ಷಿಸುವ ಈ ಶರೀರವು ವಾತ ಪಿತ್ತಾದಿ ಅನಂತ ರೋಗಗಳಿಗಾಹುತಿಯಾಗಿ ಎಂದಾದರೊಂದು ದಿನ ನಾಶವಾಗುವದು ನಿಶ್ಚಯ ನಾಶವಾಗುವದಕ್ಕೆ ನಾನೇಕೆ ವ್ಯಸನ ಪಡ ಬೇಕು ಶರೀರವಿರುವಾಗಲೇ ಶಿವಧ್ಯಾನವನ್ನು ಮಾಡಿ ಶಿವಪ್ರೀತಿ ಪಾತ್ರ ರಾಗುವದು ಯೋಗ್ಯವೆಂಬ ಭಾವಶಿ–

ನೋಡಬಾರದೇನೋ ಶಿವನೆ । ನೋಡಬಾರದೇನೋ॥

ಎಂಬ ಪದವನ್ನು ಪರಮಾತ್ಮನನ್ನು ಕುರಿತು ಹೇ ಪರಮಾತ್ಮ ಶರಣ ಶರೀರವೇ ಶಿವಾತ್ಮವೆಂದು ಶೃತಿ ಸಾರುತ್ತಿರುವಾಗ ನಿನ್ನ ಶರೀರಕ್ಕೆ ಆಲಶ್ಯವಾಗಿರುವದು ನಿನಗರಿಯದ ವಿಷಯವೇ ನಿನಗೆ ಬೇಡಾಗಿದ್ದರೆ ಔಷಧಾದಿಗಳಿಂದ ನಾನೇಕೆ ಉಪಚರಿಸಲಿ ಎಂದು ಪರಮಾತ್ಮನ ಸ್ತೋತ್ರರೂಪವಾಗಿ ಮೂರು ನುಡಿ ಪದವನ್ನು ಪೂರ್ಣಮಾಡಿ ಪರಶಿವ ಧ್ಯಾನದಲ್ಲಿಯೇ ಮಲಗಲು ಸೂರ್ಯೋದಯವಾಗುವದರೊಳಗೆ ದೇಹ ಕ್ಕಾದ ಆಯಾಸವೆಲ್ಲ ಅಳಿದುದಕ್ಕೆ ಆನಂದವುಳ್ಳವರಾಗಿ ತಮ್ಮ ಸ್ನಾನ ಪೂಜಾದಿ ಕರ್ಮಗಳನ್ನು ಅದೇ ಶಿವಾಲಯದಲ್ಲಿ ತೀರಿಸಿಕೊಂಡು ಸಮೀ ಪವಿರುವ ಸೊನ್ನಲಾಪುರಕ್ಕೆ ಮುಟ್ಟುವವರಾಗಿ ಸೊನ್ನಲಾಪುರದ ಸೊಬ ಗನ್ನು ನೋಡುತ್ತ ಶಿವಾಂಶ ಸಂಭೂತನಾದ ಸಿದ್ಧರಾಮನವತರಿಸಿದ

ಈ ಭೂಮಿಯು ಪುಣ್ಯಕ್ಷೇತ್ರವೆಂದು ಭಾವಿಸಿ ಸಿದ್ಧರಾಮೇಶ್ವರನ ಸುಂದರ ನಾದ ಶಿವಾಲಯಕ್ಕೆ ಬರುವವರಾಗಿದ್ದಾರೆ.

ಇವರು ದೇವಸ್ಥಾನದ ಮುಂದೆ ಬಂದಕ್ಷಣವೇ ಅಲ್ಲಿದ್ದ ಅರ್ಚಕರು ಇವರ ಗಡ್ಡ ಮೀಶೆಗಳಿಂದ ಮುಚ್ಚಿದ ಮುಖವನ್ನೂ ಕಾಷಾಯಾಂಬರವನ್ನೂ ಕಂಡು, ಮಂದಮತಿಗಳಾದ ಮಾನವರು ಮಹಾತ್ಮರೆಂದರಿಯದ ದ್ವಾರಕ್ಕೆ ಬೀಗ ಹಾಕಿದಾಕ್ಷಣವೇ ಘನಮಠೇಶರು ಬಾಗಿಲು ಭದ್ರವಾದದ್ದನ್ನು ಕಂಡು ಇದೇನು ದೂರದಿಂದ ದರ್ಶನಾಪೇಕ್ಷಿಯಾಗಿ ಸಿದ್ಧರಾಮನ ಸನ್ನಿಧಿಗೆ ಬಂದರೆ ಅಜ್ಞಾನಿಗಳಾದ ಅರ್ಚಕರು ಅಡ್ಡಿ ಮಾಡಬೇಕೆ ಆಗಲಿ ಸರ್ವಾಂತರ್ಯಾಮಿಯಾದ ಸಿದ್ಧರಾಮನು ಒಳಗಿದ್ದಾನೆ ಹೊರಗಿಲ್ಲವೇ ಅಣೋರಣೀಯಾನ್ । ಮಹತೋಮಹೀಯಾನ್॥ ಕಲ್ಲು ಕೊನೆಯಲ್ಲಿ ಮುಳ್ಳು ಮೊನೆಯಲ್ಲಿಯೂ ಸಹ ಶಿವನಿದ್ದಾನೆಂದು ಶೃತಿಗಳು ಸಾರುತ್ತಿರುವಾಗ ಶ್ರಮ ಪಡುವದೇಕೆ ಹೊರಗಿನಿಂದಲೇ ಸಿದ್ಧರಾಮನ ಸ್ತವನವನ್ನು ಮಾಡಿದರೆ ಒಳಗಿದ್ದ ಶಿದ್ಧರಾಮನಿಗೆ ಕೇಳಿಸುವದಿಲ್ಲವೇ ಶಿದ್ಧರಾಮನೇನು ಬಧಿರನೆ ಎಂದು–

ಶಿದ್ಧರಾಮಸೋ ನಿಜಗುರು ಶಿದ್ಧರಾಮಹೊ ॥

ಈ ಪ್ರಕಾರ ಶಿದ್ಧರಾಮೇಶ್ವರನ ಅನಂತ ಪವಾಡಗಳಿಂದ ಪೂರ್ಣವಾದ ನಾಲ್ವತ್ತೊಂದು ನುಡಿ ಪದವನ್ನು ಭಾವನಾ ಪರವಶರಾಗಿ ಭಕ್ತಿಯ ಆವೇಶದಿಂದ ಪೂರ್ಣ ಮಾಡಲು ಪೂಜಾರಿಗಳಿಂದ ಬಾಗಿಲಕ್ಕೆ ಹಾಕಿದ ಬೀಗಗಳು ಕಳಚಿಬಿದ್ದು ದೇವಾಲಯದ ದ್ವಾರಗಳು, ತಮ್ಮಿಂದ ತಾವೇ ತಗೆದಾಕ್ಷಣವೇ ಶಿವಯೋಗಿಗಳು ಅಹಹಾ ಭಕ್ತಾಭಿಮಾನಿಯಾದ ಶಿದ್ಧರಾಮ ಶಿವಶಿದ್ಧರಾಮ ಎಂದು ಗರ್ಭಗುಡಿಯನ್ನು ಪ್ರವೇಶಿಸಿ ಶಿದ್ಧರಾಮೇಶನ ದರ್ಶನ ಮಾಡಿಕೊಂಡು ಹೊರಗೆ ಬಂದಾಕ್ಷಣವೇ ಅಲ್ಪಬುದ್ಧಿಯುಳ್ಳ ಅರ್ಚಕರು ಮಹಾತ್ಮರ ಮಹಿಮೆಯನ್ನು ಕಣ್ಣಾರೆ ಕಂಡು ತಮ್ಮ ಅಜ್ಞಾನದಿಂದ ಮಾಡಿದ ಅಪರಾಧಕ್ಕೆ ಪ್ರಾಯಶ್ಚಿತ ಪಟ್ಟು

ಶಿವಯೋಗಿಗಳ ಸಮ್ಮುಖದಲ್ಲಿ ಸಾಷ್ಟಾಂಗಹಾಕಿ ಮಹಿಮರೇ
ತಮ್ಮ ಪ್ರಭಾವವನ್ನರಿಯದೆ ನಾವು ಮಾಡಿದ ಅಪಕೃತಿಯನ್ನು ಮನ್ನಿ
ಸಲು ಕ್ಷಮಾ ಬೇಡುತ್ತೇವೆಯೆಂದು ಅನಂತರೀತಿಯಿಂದ ಪ್ರಾರ್ಥಿಸಲು
ಘನಮಠೇಶರು ಆಗ ಅವರೆಲ್ಲರನ್ನು ಮನ್ನಿಸಿ ಸಮ್ಮುಖದಲ್ಲಿ ಕುಳ್ಳಿರಿಸಿ
ಕೊಂಡು ಅಜ್ಞಾನಿಗಳಿರಾ ಶಿವಾರ್ಚಕರಾದ ನಿಮಗೆ ಶಿವಭಕ್ತರ ಗುರುತು
ಇರುವದಿಲ್ಲವೇ (ಲಾಂಛನಕ್ಕೆ ಶರಣೆಂಬೆ) ಎಂಬ ಶಿವಶರಣರ ವಚನ
ವನ್ನು ಕೇಳಿಲ್ಲವೇ ನನಗೆ ದರ್ಶನವಾಗಗೊಡಬಾರದೆಂದು ನೀವು
ಬಾಗಿಲ ಬಂಧನಮಾಡಿದರೆ ದೇವರು ನಿಮ್ಮ ಅಧೀನನೇ ದೇವರು ಭಕ್ತಾ
ಭಿಮಾನಿಯಲ್ಲವೇ ಈ ನಿಮ್ಮ ಡಾಂಭಿಕ ಪೂಜೆಯಿಂದ ನಿಮಗೆ ದೇವ
ನೊಲಿವನೆ ಸರ್ವಜೀವರಾಶಿಗಳಲ್ಲಿ ಈ ಮಹತ್ತರವಾದ ಮಾನವ
ಜನ್ಮವೇ ಶ್ರೇಷ್ಠ. ಅದರಲ್ಲಿಯೂ ವಿಖ್ಯಾತವಾದ ವೀರಶೈವ ಮತದಲ್ಲಿ
ಹುಟ್ಟಿದ ನೀವು ನೀತಿ ಧರ್ಮಗಳಿಲ್ಲದೆ ಅಹಂಕಾರದಿಂದ ಆಚರಿಸಿದರೆ
ದೇವರು ನಿಮಗೆ ಕೊಟ್ಟ ಮಾನವ ಜನ್ಮವು ಅಸಾರ್ಥಕವಾಗುವದಿಲ್ಲವೇ
ಮಾನವನು ಮೊದಲು ಅಹಂಕಾರವಳಿಯಬೇಕು. ನೋಡಿರಿ ಅಹಂಕಾರ
ದಿಂದ ನಾನೇ ಎಂದು ನೆಟ್ಟಗೆ ಬೆಳೆದ ಸಜ್ಜೆಯು ತೆನೆಯು ಕಾಳು ನವ
ಧಾನ್ಯಗಳೊಳಗೆ ಸೇರದೇ ಹೋಯಿತು. ನೀನೇ ಗತಿಯೆಂದು ವಿನಯ
ದಿಂದ ತಲೆಬಾಗಿ ಬೆಳೆದ ಭತ್ತವು ಶಿವನ ನೈವೇದ್ಯಕ್ಕೆ ಪ್ರಸಾದವಾಯಿತು
ಮಾನವನು ಜ್ಞಾನಿಯಾಗಬೇಕಾದರೆ ನೀತಿಯೇ ನೆಲೆಗಟ್ಟು ನೀತಿಯೇ
ಸುಖ ಜೀವನದ ಆದರ್ಶ ಇನ್ನುಮುಂದೆ ನೀವು ಸುಖಿಗಳಾಗಿ ಶಿವನ
ಪ್ರೇಮಕ್ಕೆ ಪಾತ್ರರಾಗಬೇಕಿದ್ದರೆ ಸಿದ್ಧರಾಮನ ಪೂಜೆಯನ್ನು ಬದ್ಧವಾದ
ಭಕ್ತಿಯಿಂದ ಮಾಡಿ ಮಾನವ ಜನ್ಮದ ಸಾರ್ಥಕತೆಯನ್ನು ಮಾಡಿಕೊಳ್ಳಿರಿ
ಈ ಪ್ರಕಾರವಾಗಿ ಘನಮಠೇಶರು ಪೂಜಾರಿಗಳಿಗೆ ಸದುಪದೇಶವನ್ನು
ಮಾಡಿ ಸೊನ್ನಲಾಪುರದ ಬಹಿರ್ಭಾಗದಲ್ಲಿರುವ ಯುಗ ಯುಗಾಂತರ
ವೀರಶೈವ ಮತಸ್ಥಾಪಕರಲ್ಲೊಬ್ಬರಾದ ರೇವಣಾರಾಧ್ಯರ ದೇವಸ್ಥಾ
ನಕ್ಕೆ ಬಂದು ರೇಣುಕರ ಲಿಂಗದಮುಂದೆ ನಿಂತು–

ಸಿದ್ಧಗುರುವರೇಣ್ಯ । ರೇವಣಸಿದ್ಧ ಗುರುವರೇಣ್ಯ ॥

ಎಂಬ ಮುವತ್ತುಮೂರು ನುಡಿ ರೇಣುಕರು ಮಾಡಿದ ಮಹಿಮೆಯಸಿ ಪದವನ್ನು ಪ್ರಾಸುಗಳಿಂದ ಅಂದವಾಗಿ ಮಾಡಿ ಆನಂದದಿಂದ ಹಾಡುತ್ತ ಸೊನ್ನಲಾಪುರವನ್ನು ಬಿಟ್ಟು ದಕ್ಷಿಣ ಕರ್ನಾಟಕದ ಕಡೆಗೆ ಪ್ರಯಾಣಮಾಡಿ ಊರೂರಿಗೆ ವಾಸಮಾಡಿ ಭಕ್ತರಿಗೆ ಭೋಧೆ ಮಾಡುತ್ತ ತಾವು ಶಿವನ ಪರವಾಗಿ ಶಿವಶರಣರ ಪರವಾಗಿ ಮಾಡಿದ ಪದ್ಯಗಳನ್ನು ಭಕ್ತರಿಗೆ ಕಲಿಸಿ ಅವರಿಂದ ಅವನ್ನು ಹಾಡಿಸಿ ಅವರು ಅವನ್ನು ಹಾಡುವದನ್ನು ತಾವು ಕೇಳಿ ಆನಂದಪಡುತ್ತ ಒಂದಾನೊಂದು ಊರಿಗೆ ಬರಲಾಗಿ ಆ ದಿವಶ ನಾಗರ ಪಂಚಮಿಯ ದಿವಸವಿದ್ದದರಿಂದ ಅಲ್ಲಿಯ ಭಕ್ತರು ನಾಗಪ್ಪನಿಗೆ ಹಾಲು ಹಾಕುವದಕ್ಕೆ ದೇವಸ್ಥಾನಕ್ಕೋ ಹೊಲಗಳಿಗೋ ಹೋದ ಸಮಯದಲ್ಲಿ ಇವರು ತಮ್ಮ ಸ್ನಾನಾದಿ ಕರ್ಮಗಳನ್ನು ತೀರಿಸಿಕೊಂಡು ಕಂತೆಯ ಬಿಕ್ಷಕ್ಕಾಗಿ ಯಾರ ಮನೆಗೆ ಹೋದರೂ ಯಾರೂ ಮನೆಯಲ್ಲಿಲ್ಲದ್ದನ್ನು ಕಂಡು ಒಂದು ಮನೆಯ ಮುಂದೆ ಮನೆ ಕಾಯುವದಕ್ಕಾಗಿ ಕುಳಿತ ಒಬ್ಬ ಮುದಕನು ಘನಮಠೇಶರಿಗೆ ಸ್ವಾಮಿ ಎಲ್ಲರೂ ನಾಗಪ್ಪನಿಗೆ ಹಾಲು ಹೊಯ್ಯಲಿಕ್ಕೆ ಹೋದ ಈ ಸಮಯದಲ್ಲಿ ನಿಮಗೆ ಯಾರು ನೀಡ ಬೇಕು. ನಾಗಪ್ಪನಿಗೆ ಹಾಲೆರೆಯದೆ ಮುಂಚಿತವಾಗಿ ನಿಮಗೆ ಹೇಗೆ ನೀಡುತ್ತಾರೆ ಎಂದು ಅಂದಾಕ್ಷಣವೇ ಘನಮಠೇಶರು ಅಲ್ಲಿಯ ಜನರ ಅಜ್ಞಾನಕೃತಿಯನ್ನು ಕಂಡು-

ಎಲ್ಲಿ ಭಕ್ತಿಯದೆಲ್ಲಿಮುಕ್ತಿಯುಮೋ।
ಈ ಸೂಳೆಮಕ್ಕಳಿಗೆಲ್ಲಿ ಭಕ್ತಿಯದೆಲ್ಲಿ ಮುಕ್ತಿಯದೋ॥

ಎಂದು ಐದು ನುಡಿ ಪದವನ್ನು ಅತ್ಯಂತ ಆವೇಶದಿಂದ ಹಾಡುತ್ತಿರಲು ಅಲ್ಲಿಯ ಭಕ್ತರು ಇವರ ಶಿಟ್ಟನ್ನು ನೋಡಿ ಇವರು ಘನಮಠದಪ್ಪನವರೆಂದು ಅರಿತು ಅಂಜುತ್ತ ಅಂಜುತ್ತ ಇವರ ಹತ್ತಿರ ಬಂದು ತಮ್ಮ ಅಜ್ಞಾನ ಕೃತಿಗೆ ತಾವೇ ನಾಚಿಕೊಂಡು ಇವರ ಮುಂಭಾಗದಲ್ಲಿ ಮುಖ ತೆಗ್ಗಿಸಿ ಕೈ ಜೋಡಿಸಿಕೊಂಡು ನಿಂತದ್ದನ್ನು ನೋಡಿ ಶಿವಯೋಗಿಗಳು ಅವರಿಗೆ ಅಜ್ಞಾನಿಗಳೇ ಇಷ್ಟಲಿಂಗವೇ ವೀರಶೈವರಿಗೆ ಅಧಿ

ದೈವತವಾಗಿ ಸದಾ ನಿಮ್ಮ ದೇಹದಮೇಲೆ ಇರುತ್ತಿರಲಾಗಿ ಅಜ್ಞಾ
ಗಳಂತೆ ಅಡವಿಯಲ್ಲಿರುವ ಶೀಮೆಯ ಕಲ್ಲುಗಳಿಗೆ ದೇವರೆಂದೂ ಕಲ್ಲ
ನಾಗಪ್ಪಗಳಿಗೆ ನಾಗಪ್ಪನೆಂದು ತೃಪ್ತಿಯಾಗದ ಕಲ್ಲಿನ ಮೇಲೆ ಹಂಗ
ನೂಲು ಹಾಕಿ ಹಾಲು ಸುರುವಿದರೆ ಆಗುವ ಫಲವೇನು ಪರಮಾ
ತ್ಮನೇ ಜಂಗಮ ರೂಪದಿಂದಲೂ ಗುರು ರೂಪದಿಂದಲೂ ಭೂಲೋಕ
ದಲ್ಲಿ ಭಕ್ತರಿಗೆ ಬೋಧೆ ಮಾಡುವ ನಿಮಿತ್ತ ಮನೆ ಗನೆಗೆ ಬಂದರೂ-

ಶಿವಯೋಗಿನ ಸಂತೃಪ್ತೆ । ತೃಪ್ತೋ ಭವತಿ ಶಂಕರಃ॥

ಎಂಬುವದನ್ನರಿಯದೆ ಶಿವಸ್ವರೂಪಿಯಾದ ಜಂಗಮನನ್ನು ಜರಿದ
ಅಡವಿಯ ಕಲ್ಲುಗಳ ಮುಂದೆ ಅಡ್ಡ ಉದ್ದ ಬಿದ್ದು ಹೊರಳಾಡುವದನ್ನು
ನೋಡಿದರೆ ನಿಮಗೇನನ್ನಬೇಕು. ( ಪತಿ ದೈವಾತ್ಪರಂ ನಾಸ್ತಿ ) ಎಂಬ
ಪೂರ್ವೋಕ್ತಿಯಂತೆ ಪತಿವ್ರತೆಗೆ ತನ್ನ ಗಂಡನ ಹೊರ್ತಾಗಿ ಹ್ಯಾ
ಅನ್ಯ ದೇವರಿಲ್ಲವೋ ವೀರಶೈವರಾದ ನಮಗೆ ಸರ್ವೋತ್ತಮನಾದ ಶಿವನೇ
ಇಷ್ಟಲಿಂಗವಾಗಿ ನಮ್ಮ ವಕ್ಷಸ್ಥಳದಲ್ಲಿ ವಾಸಿಸುತ್ತಿರುವಾಗ ಕ್ಷುದ್ರ
ದೇವತೆಗಳಾದ ಮೂರ್ತಿ ಪೂಜೆಯ ಭ್ರಾಂತಿ ಏಕೆ ಎಂದು ಅವ
ಭ್ರಾಂತಿಯನ್ನೆಲ್ಲ ಬಯಲುಮಾಡಿ ಅವರಿಂದ ತೃಪ್ತಿ ಹೊಂದಿ ಬಸವ
ಮಹಿಮೆಗಳನ್ನು ಕೊಂಡಾಡುತ್ತ ಬೇಡಿದಿಷ್ಟಾರ್ಥಗಳನ್ನು ಕೊಡು
ಬಸವನೇ ನನ್ನ ಮೇಲೆ ಇರುವಾಗ ಕರುಣಿಸುವ ಭಾಗ್ಯನಿಧಿ ಬಸವನಿರ
ವಾಗ ಭಕ್ತನಿಗಾವ ಕೊರತೆಯುಂದು-

ಬಸವರಾಜ ಪಾಲಿಸಯ್ಯ । ಶಶಿಧರನವತಾರ॥

ಎಂಬ ಪದವನ್ನು ತಮ್ಮ ಪಾಂಡಿತ್ಯದಿಂದ ಪೂರ್ಣಮಾ
ಭಕ್ತಿಯಿಂದ ಹಾಡುತ್ತಾ ಮನಬಂದಕಡೆ ಸಂಚಾರ ಮಾಡುತ್ತಾ ಹೋ
ಹೋದಲ್ಲಿ ಜನರ ಅನಾಚಾರಗಳನ್ನು ಅಳಿದು ಸದಾಚಾರ ಸದ್ಬೋ
ಗಳನ್ನು ಮಾಡುತ್ತಾ ಹೈದರಾಬಾದ ನಿಜಾಮ ಸಂಸ್ಥಾನದ ಶಹಪೂ
ಸುರುಪೂರಗಳಲ್ಲಿ ವಾಸಮಾಡಿ ಕಲಬುರ್ಗಿ ಜಿಲ್ಲೆಯ ಚಿಂಚೋಳಿಯಂ

ಗ್ರಾಮಕ್ಕೆ ಬರುವವರಾಗಿದ್ದಾರೆ. ಶಿವಯೋಗಿಗಳ ಮನಸ್ಸಿನ ಮುಖ್ಯ ಉದ್ದೇಶವೆಂದರೆ ಸಮಾಜದ ಸರ್ವತೋಮುಖ ಏಳ್ಗೆಗಾಗಿ ತಮ್ಮ ಸರ್ವಸ್ವವನ್ನು ಸೂರೆಗೊಂಡು ಊರೂರಿಗೆ ವಾಸಮಾಡಿ ವೀರಶೈವರಲ್ಲಿ ಅಜ್ಞತೆಯಿಂದ ತಾಂಡವವಾಡುತ್ತಿದ್ದ ಅನಾಚಾರವನ್ನು ಕಂಡು ಸಹಿಸಲಾರದೆ ತಮ್ಮ ಶಿವಾನುಭವ ಸ್ವಾನುಭವಗಳ ಸಾಮರ್ಥ್ಯದಿಂದ ನಿಷ್ಕಾಮ ಕರ್ಮದಿಂದ ಕನ್ನಡ ನಾಡಿನ ತನ್ನ ಭಕ್ತರ ತನ್ನ ಸಮಾಜದ ಕಲ್ಯಾಣವೇ ತನ್ನ ಕಲ್ಯಾಣವೆಂದು ಕಾರ್ಯ ತತ್ಪರನಾಗಿ ವೀರಶೈವರಧಿಕ ಸಂಖ್ಯೆಯುಳ್ಳ ಚಿಂಚೋಳಿ ಗ್ರಾಮದ ಪ್ರಸಿದ್ಧಿಯನ್ನು ಕೇಳಿ ಪರಮ ಹರುಷಿತನಾಗಿ ಗ್ರಾಮದೊಳಗೆ ಬಂದಾಕ್ಷಣವೇ ಅಲ್ಲಿಯ ಸದ್ಭಕ್ತರು ಇವರನ್ನು ಯಾರೋ ಶಿವಯೋಗಿಗಳೆಂದು ನಮಸ್ಕರಿಸುವದನ್ನೂ ಅವರ ಹಣೆಯ ಮೇಲಿರುವ ವೀರಶೈವರ ಹೆಗ್ಗುರುತಾದ ತ್ರಿಪುಂಡ್ರ ಧಾರಣೆಯನ್ನೂ ಕುಂಕುಮಾಂಕಿತರಾದ ಸುವಾಸಿನಿಯರು ತುಂಬಿದ ಕೊಡಗಳಿಂದ ಎದುರಿಗೆ ಬರುವದನ್ನು ಕಂಡು ಅತ್ಯಾನಂದವುಳ್ಳರಾಗಿ ಊರೊಳಗಿರುವ ಮಠಕ್ಕೆ ಹೋಗಿ ತನ್ನ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಭಕ್ತರ ಮನೆಗೆ ಹೋಗಿ ಭಿಕ್ಷಾನ್ನವನ್ನು ತಂದು ಲಿಂಗಾರ್ಪಿತವ ಮಾಡಿಕೊಂಡು ಮಠದಲ್ಲಿ ಸ್ವಸ್ಥನಾಗಿ ಕುಳಿತು ವಚನ ಶಾಸ್ತ್ರವನ್ನವಲೋಕಿಸುತ್ತ ಕುಳಿತಿರಲು ಮಠಕ್ಕೆ ಯಾರೋ ಶಿವಯೋಗಿಗಳು ಬಂದಿರುವರೆಂಬ ಸುದ್ದಿಯು ಊರಲ್ಲಿ ಹಬ್ಬಲು ಕೇಳಿದ ಕೆಲವು ಶಿವಭಕ್ತರು ಮಠಕ್ಕೆ ಬಂದು ಶಿವಯೋಗಿಗಳಿಗೆ ನಮಸ್ಕಾರ ಮಾಡಿ ಕುಳಿತಾಕ್ಷಣವೇ ಘನ ಮಠೇಶರು ಬಂದವರಿಗೆಲ್ಲಾ ಕುಶಲ ಪ್ರಶ್ನೆಯನ್ನು ಮಾಡಿ ಭಕ್ತರಿರಾ ಶಿವಾಚಾರದಲ್ಲಿ ಶ್ರದ್ಧೆಯುಳ್ಳ ನಿಮ್ಮ ಗ್ರಾಮವನ್ನು ಕಂಡು ಮನಸ್ಸಿಗೆ ಬಹು ತೃಪ್ತಿಯಾಯಿತು!

ಶಿವನು ನಿಮಗೆ ಶುಭವನ್ನುಂಟು ಮಾಡಲಿ ಎಂದು ಆಶೀರ್ವದಿಸಲು ನಂತರ ಬಂದವರು ಭಕ್ತಿಯಿಂದ ಘನಮಠೇಶರಿಗೆ ಸ್ವಾಮಿೊ ತಮ್ಮ ಊರಾವುದು, ತಮ್ಮ ಪವಿತ್ರ ನಾಮವೇನು, ತಮ್ಮ ಕಾಯಕವೇನು ಎಂದು ಬಹು ವಿನಯದಿಂದ ಪ್ರಾರ್ಥಿಸಲು ಶಿವಯೋಗಿಗಳು ಭಕ್ತರೆ

ಜಗತ್ತಿನಲ್ಲಿ ಜಂಗಮ ರೂಪದಿಂದ ತಿರಿದುಣ್ಣುವವನಿಗೆ ಯಾವ ಊರಿದೆ.
ಬಸವ ಸಮಾನರಾದ ಭಕ್ತರು ಈ ಭೂಮಿಯಲ್ಲಿ ಘನಮಠದ ನಾಗಭೂ
ಷಣನೆಂದು ಕರೆಯುತ್ತಿರುವರು. ಪರಮಾತ್ಮನ ಪ್ರೇರಣೆಯಾದಂತೆ
ಪ್ರಯಾಣ ಮಾಡುತ್ತಾ ನಿಮ್ಮ ಗ್ರಾಮಕ್ಕೆ ಬಂದದ್ದಾಯಿತು ಎಂದು
ಹೇಳಲು ಭಕ್ತರು ಮೊದಲೇ ಎಲ್ಲಾ ಕಡೆಗೂ ಪ್ರಸಿದ್ಧವಾಗಿರುವ
ಇವರ ಹೆಸರನ್ನು ಕೇಳಿದೊಡನೆ ಬುದ್ಧೀ ತಮ್ಮ ದರ್ಶನದಿಂದ ಧನ್ಯರಾ
ದೆವು, ಆದರೆ ತಮ್ಮಲ್ಲಿ ವಿನಯದಿಂದ ವಿಜ್ಞಾಪನೆ ಮಾಡಿಕೊಳ್ಳುವ
ದೇನೆಂದರೆ ನಮ್ಮ ಗ್ರಾಮದಲ್ಲಿ ಶ್ರಾವಣ ಮಾಸಾರಂಭದಿಂದ ಪ್ರಾರಂಭ
ವಾದ ಬಸವೇಶ್ವರ ಪುರಾಣವು ಪರಿಸಮಾಪ್ತಿಯಾಗುವ ವರೆಗೆ ತಾವು
ನಮ್ಮಲ್ಲಿಯೇ ಇರಬೇಕೆಂದು ನಮ್ಮ ಪ್ರಾರ್ಥನೆ ಈ ಪ್ರಕಾರ ಅವರ
ಆಗ್ರಹವನ್ನು ಕಂಡು ಘನಮಠೇಶರು ಬಸವ ಪುರಾಣವೆಂದಾಕ್ಷಣವೇ
ಆನಂದದಿಂದ ಮೈಯುಬ್ಬಿದವರಾಗಿ ಅಹಾ ಅನಾಯಾಸವಾಗಿ ಪ್ರಾಪ್ತ
ವಾದ ಬಸವನ ಸೇವೆಯನ್ನು ಭಕ್ತಿಯಿಂದ ಮಾಡದವರಾರು ಆಗಲಿ
ಭಕ್ತರೆ ನಾವೂ ನೀವೂ ಬಸವನ ಸೇವೆಯಲ್ಲಿ ಶರೀರವನ್ನು ಸವೆಯಿಸಿ
ಧನ್ಯರಾಗೋಣ ಎಂದು ಅವರಿಗೆ ಆನಂದಪಡಿಸಿ ಸಾಯಂಕಾಲವಾದೊ
ಡನೆ ಬಸವ ಪುರಾಣದ ಮೇಲಿನ ಪ್ರೇಮದಿಂದ ಮುಖ ಮಾರ್ಜನೆ
ಮಾಡಿಕೊಂಡು ಭಕ್ತರು ಕರೆಯಲು ಬರುವ ಮುಂಚೆಯೇ ತಾನಿಳಿದ
ಮಠದಿಂದ ಪುರಾಣ ಹಚ್ಚಿದ ಸ್ಥಳವನ್ನು ಕೇಳುತ್ತಾ ಹೊರಟಿರುವಾಗ
ಆ ಊರ ಸದ್ಭಕ್ತರು ಘನಮಠೇಶರನ್ನು ಪುರಾಣಕ್ಕೆ ಕರಕೊಂಡು
ಹೋಗಬೇಕೆಂಬ ಉತ್ಕಟೇಚ್ಛೆಯುಳ್ಳವರಾಗಿ ಎದುರಿಗೆ ಬರುತ್ತಿರಲು
ಅವರನ್ನು ಕಂಡು ಘನಮಠೇಶರು ನೀವೇಕೆ ಶ್ರಮವಹಿಸಿದಿರಿ ಪುರಾ
ಣಾದಿ ಪುಣ್ಯ ಕಾರ್ಯಗಳಿಗೆ ಆಮಂತ್ರಣವಿಲ್ಲದೆ ಆಗಮಿಸುವದೇ ನಮ್ಮ
ಆರ್ಯ ಪದ್ಧತಿ ಕರೆಯಿಸಿಕೊಳ್ಳಬೇಕೆಂಬ ದುರಭಿಮಾನವವು ಭಕ್ತಿಯೆ
ನಿಸಲಾರದು ಈ ಪ್ರಕಾರ ಮಾತಾಡುತ್ತ ಅವರೊಡನೆ ಪುರಾಣ ಹಚ್ಚಿದ
ಸ್ಥಳಕ್ಕೆ ಹೋಗಿ ಅಲ್ಲಿಯ ಭಕ್ತ ಸಮೂಹವೆಲ್ಲಾ ಇವರ ಆಜಾನು
ಬಾಹುದೇಹವನ್ನೂ ಬಸವ ಪುರಾಣದ ಮೇಲಿರುವ ಪ್ರೇಮವನ್ನೂ ಕಂಡು
ಇವರು ಮಹಿಮಾ ಶಾಲಿಗಳೆಂದು ಮನದಲ್ಲಿಯೇ ಕೊಂಡಾಡುತ್ತಾ

ಇವರ ಸಲುವಾಗಿ ಮೊದಲೇ ತಯಾರು ಮಾಡಿದ ಉಚಿತಾಸನದಲ್ಲಿ ಕೂಡ್ರಲಿಕ್ಕೆ ಸರ್ವರೂ ಪ್ರಾರ್ಥಿಸಿದರೂ ಘನಮಠೇಶರು ಸರ್ವರಿಗೂ ಸಮಾಧಾನ ಹೇಳಿ ತಾವೂ ಸರ್ವರಂತೆ ಕೆಳಭಾಗದಲ್ಲಿಯೇ ಬಸವಾ ಬಸವಾ ಎಂದು ಬಸವನಾಮವನ್ನುಚ್ಚರಿಸುತ್ತಾ ಬಸವನಲ್ಲಿ ಭಕ್ತಿ ಇದ್ದವರು ಮೇಲು ಕೆಳಗೆಂಬ ಭಾವನೆ ಇರಬಾರದು ಎಂದು ಎಲ್ಲರನ್ನೂ ಕೂಡ್ರಿಸಿ ತಾವೂ ಕುಳಿತು ಪುರಾಣ ಶ್ರವಣ ಮಾಡಿಕೊಂಡು ಪುರಾಣ ಸಮಾಪ್ತಿಯ ನಂತರ ತಾವಿಳಿದ ಮಠಕ್ಕೆ ದಯಮಾಡಿಸಿ ತಮ್ಮ ಕರ್ಮಾಚರಣೆ ನಡೆಸುತ್ತಿರಲು ಅಲ್ಲಿಯ ಭಕ್ತರು ಇವರು ಒಂದೇ ಊರಲ್ಲಿ ಇರುವವರಲ್ಲವೆಂದೂ ಇವರು ಸಂಚಾರ ಮೂರ್ತಿಗಳೆಂದು ಇಂಥಾ ಮಹಿಮಾಶಾಲಿಗಳಿದ್ದರೆ ಪುರಾಣಕ್ಕೆ ಶೋಭೆಯೆಂದು ಭಾವಿಸಿ ಮರುದಿವಸ ಮಠಕ್ಕೆ ಹೋಗಿ ಸರ್ವರೂ ಘನಮಠೇಶರಿಗೆ ತಾವು ಪುರಾಣ ಸಮಾಪ್ತಿಯಾಗುವವರೆಗೆ ನಮ್ಮಲ್ಲಿದ್ದು ಈ ಮಹಾ ಪುರಾಣ ಕಾರ್ಯ ಪೂರೈಸಬೇಕೆಂದು ಪ್ರಾರ್ಥಿಸಲು ಅದಕ್ಕೆ ಘನಮಠೇಶರು ಅವರ ಆಗ್ರಹಕ್ಕೆ ಒಪ್ಪಿ ಭಕ್ತರ ಬಿನ್ನಹದ ಮೇರೆಗೆ ಬಸವ ಪುರಾಣದ ಮೇಲಿನ ತಮ್ಮ ಬಯಕೆಯಿಂದ ಶ್ರಾವಣ ಶುದ್ಧ ಪ್ರತಿಪದಿಗೆ ಪ್ರಾರಂಭವಾದ ಪುರಾಣವು ಆಶ್ವೀಜ ಬಹುಳ ಅಮವಾಸ್ಯೆಯ ಅಂತ್ಯಕ್ಕೆ ಬಂದಿತು.

ಶ್ರೀ ಘನಮಠೇಶರು ಎಲ್ಲ ಭಕ್ತರನ್ನು ಕೂಡಿಸಿ ಮಹಾ ಮಹಿಮನಾದ ಬಸವನ ಪುರಾಣವು ಸಮಾಪ್ತಿಯಾಗುವ ಕಾಲ ಸಮೀಪಿಸಿದೆ ಕಾರಣ ರಾಜಯೋಗವುಳ್ಳ ಇದೇ ಕಾರ್ತಿಕ ಶುದ್ಧ ಪಂಚಮಿಯ ಪವಿತ್ರ ದಿನದಲ್ಲಿ ಸಮಾಪ್ತಗೊಳಿಸಿ ದಾಸೋಹ ಮೂರ್ತಿಯಾದ ಬಸವೇಶ್ವರನಿಗೆ ಗಣತೃಪ್ತಿಯೇ ಆತನ ತೃಪ್ತಿಗೆ ಕಾರಣ ಭೂರಿಗಣಾರಾಧನೆಯನ್ನು ಮಾಡಿ ಪುರದ ಬೀದಿಗಳಲ್ಲೆಲ್ಲಾ ಪುರಾಣ ಮೆರವಣಿಗೆ ಮಾಡಿದರೆ ನಿಮ್ಮ ಗ್ರಾಮದ ಮತ್ತು ನಿಮ್ಮ ಕೀರ್ತಿಯೂ ದಶದಿಶಗಳಲ್ಲಿ ಪ್ರಸಿದ್ಧವಾಗುವದು ಎಂದು ಭಕ್ತ ಸಮೂಹಕ್ಕೆಲ್ಲಾ ಆಜ್ಞಾಪಿಸಿದಾಕ್ಷಣವೇ ಸರ್ವರೂ ಮಹಾತ್ಮರಪ್ಪಣೆಯಂತೆ ಹಗಲಿರುಳು ಅವಿಶ್ರಾಂತ ಶ್ರಮಪಟ್ಟು ಗಣಾರಾಧನೆಯ ಸಾಹಿತ್ಯಗಳನ್ನೆಲ್ಲ ಸಿದ್ಧಗೊಳಿಸಿ ಸರಿಯಾದ ಬ್ರಾಹ್ಮೀ

ಮುಹೂರ್ತದಲ್ಲಿ ಬಂದ ಗಣ ಸಮೂಹಕ್ಕೆ ವಿಧ ವಿಧದ ಪಕ್ವಾನ್ನ ಪಲ್ಲೆ
ಕಾಯಿ ಹಪ್ಪಳ ಸಂಡಿಗೆ ಮೊದಲಾದ ಷಡ್ರುಚಿಯುಕ್ತವಾದ ಅಡಿಗೆಗ
ಳಿಂದ ಅನ್ನ ಸಂತರ್ಪಣೆ ಮಾಡಿ ನಂತರ ತಾಂಬೂಲ ದಕ್ಷಿಣೆಯಿಂದ
ಮಹೇಶ್ವರರ ಮನಃ ಶಾಂತಿಗೊಳಿಸುತ್ತಿರಲು .ನಮ್ಮ ಶಿವಯೋಗಿಗಳು
ಸಮಾರಾಧನೆ ಸಾಗುವ ಮುನ್ನವೇ ಸೂರ್ಯೋದಯದೊಳಗಾಗಿ ತಮ್ಮ
ನಿತ್ಯಾಚಾರಣೆಗಳನ್ನು ಸಮಾಪ್ತಗೊಳಿಸಿಕೊಂಡು ಗಣಾರಾಧನೆಯಲ್ಲಿ
ಏನೂ ಗಡಿಬಿಡಿಯಾಗದಂತೆ ತಾವೇ ಸ್ವತಃ ನಿಂತುಕೊಂಡು ಸರ್ವರಿಗೆ
ಸರಿಯಾಗಿ ತೃಪ್ತಿಬಡಿಸಿ ಸಕಲ ಭಕ್ತರು ಬಸವನ ಕಾರ್ಯದಲ್ಲಿ ತ್ರಿಕರಣ
ಪೂರ್ವಕವಾಗಿ ಸೇವೆ ಸಲ್ಲಿಸುವದನ್ನು ಕಂಡು ತೃಪ್ತರಾಗಿ ಸಮಾರಾಧ
ನೆಯು ಸಮಾಪ್ತಿಯಾದ ನಂತರ ಬಸವ ಪುರಾಣದ ಮೆರವಣಿಗೆಯ
ಮಹೋತ್ಸವವನ್ನು ಹೊರಡಿಸಲು ಆಜ್ಞಾಪಿಸಿ ಸಕಲರೂ ಮೆರವಣಿಗೆಯ
ಸಾಮಗ್ರಿಗಳಾದ ದಶವಿಧ ವಾದ್ಯಗಳನ್ನೂ ನಂದೀ ಧ್ವಜ ಮಕರತೋರ
ಣಾದಿ ಎಪ್ಪತ್ತೆರಡು ಬಿರುದಾವಳಿಗಳನ್ನೂ ಅಣಿಮಾಡಿ ಅನಂತರ ಅನೇಕ
ಪ್ರಕಾರವಾದ ಅಲಂಕಾರಳಿಂದ ಶೃಂಗರಿಸಲ್ಪಟ್ಟ ಚಿಂಚೋಳಿಯ
ಮುಖ್ಯ ಬೀದಿಗಳಲ್ಲಿ ಶ್ರೀ ಬಸವ ಪುರಾಣದ ಅಡ್ಡ ಪಲ್ಲಕ್ಕಿಯ ಮಹೋ
ತ್ಸವವು ಮಹಾತ್ಮರ ಅನುಜ್ಞೆಯ ಪ್ರಕಾರ ಸರ್ವರೂ ಉಘೇ ಉಘೇ
ಚಾಂಗುಭಲರೇ ಸಾಂಬ ಜಯ ನಮಃ ಪಾರ್ವತೇ ಪತೇ ಹರ ಹರ ಮಹಾ
ದೇವ ಎಂದು ಜಯಘೋಷ ಮಾಡುತ್ತ ಭಕ್ತಿಯಿಂದ ಬೆನ್ನ ಮೇಲೆ ಅಡ್ಡ
ಪಲ್ಲಕ್ಕಿಯನ್ನು ಹೊತ್ತುಕೊಂಡು ರಾಜ ಬೀದಿಯಲ್ಲಿ ಸರ್ವ ಸಂಭ್ರಮ
ದಿಂದ ಉತ್ಸವವು ಸಾಗಿರಲು ಘನಮಹೇಶರು ಈ ಅಭೂತಪೂರ್ವವಾದ
ಸಂಭ್ರಮವನ್ನು ನೋಡುತ್ತ ಉತ್ಸವದ ಹಿಂದೆ ಮೆಲ್ಲ ಮೆಲ್ಲನೆ ಬಸವ
ಮಹಿಮೆಯನ್ನು ಭಾವದಲ್ಲಿಯೇ ಕೊಂಡಾಡುತ್ತ ಅನಂತ ವಿಧವಾದ
ವಾದ್ಯಗಳ ಧ್ವನಿಯಿಂದಲೂ ಮೇಲಿಂದ ಮೇಲೆ ಬಸವನೇ ಶಿವ ಶಿವನೇ
ಬಸವನೆಂಬ ಪರಾಕುಗಳಿಂದಲೂ ಪ್ರೇಕ್ಷಕ ಸಮುದಾಯದ ಕರತಾಡನದ
ಚಪ್ಪಾಳೆಗಳಿಂದಲೂ ಉತ್ಸವದ ಹಿಂದೆ ಮಂದಗಮನೆಯರು ಮಂಜುಳ
ಧ್ವನಿಯಿಂದ ಪಾಡುವ ಮಂಗಲ ಗೀತೆಗಳಿಂದಲೂ ನಭೂತೋನಭವಿ
ಷ್ಯತಿ ಎಂಬ ನಾಣ್ಣುಡಿಯಂತೆ ಸಂಭ್ರಮವು ಸಾಗಿರಲು ಬಸವ ಮಹಿಮೆ

ಯು ಪ್ರಪಂಚದಲ್ಲಿ ಇನ್ನಷ್ಟು ಪ್ರಬಲವಾಗಿ ಪ್ರಕಾಶಿಸಲೆಂದೋ ಅಥವಾ
ಪರಮತ ಸಹಿಷ್ಣುತೆಯ ಅಭಾವದಿಂದಲೋ ಚಿಂಚೋಳಿ ಗ್ರಾಮದ ಬ್ರಾಹ್ಮ
ಣಮತದ ಪ್ರಮುಖ ದೇಸಾಯಿಯು ಪರಮತದ ವಾಲ್ಮೀಕಾದಿಗಳನ್ನು
ಮುಂದು ಮಾಡಿ ಬಸವ ಪುರಾಣದ ಮೆರವಣಿಗೆಯನ್ನು ಬಂದುಮಾಡ
ಬೇಕೆಂಬ ಬಯಕೆಯುಳ್ಳವನಾಗಿ ತನ್ನವರಾದ ಕೆಲವು ಮಂದ ಬುದ್ಧಿಯ
ಮುತ್ಸಾಳರನ್ನು ಕರೆದು ನೀವು ಈಗಲೇ ಹೋಗಿ ಬ್ರಾಹ್ಮಣ ಮತದ
ಉಪನಯನಾದಿಗಳನ್ನು ತಿರಸ್ಕರಿಸಿ ವೀರಶೈವ ಮತದ ಸಂಸ್ಕಾರ
ಹೊಂದಿ ಶಿವ ಮತವನ್ನು ಶಿಖರಕ್ಕೇರಿಸಿದ ಆ ಬಸವ ಪುರಾಣದ ಮೆರವ
ಣಿಗೆಯನ್ನು ಮುಂದಕ್ಕೆ ಒಂದು ಹೆಜ್ಜೆಯನ್ನೂ ಸಹ ಇಡಗೊಡದೆ ಬಂದು
ಮಾಡಿ ಬರ್ರಿ ಎಂದು ಈ ಪ್ರಕಾರ ಅಜ್ಞಾನಿಗಳಿಗೆ ಅರುಹಿ ಕಳುಹಲು
ಅವರು ಬಂದು ಸಂಭ್ರಮದಿಂದ ಸಾಗಿರುವ ಉತ್ಸವದ ಮುಂದೆ ಹುಯ್
ಹುಯ್ ಎಂದು ವಿಕಾರವಾಗಿ ಒದರುತ್ತ ಕೈಯಲ್ಲಿ ಕೋಲು ಗುದಿಗೆ
ಗಳನ್ನು ಹಿಡಕೊಂಡು ಶಾಂತವಾಗಿ ಸಾಗಿದ ಸಂಭ್ರಮದಲ್ಲಿ ಶಿವಪೂಜೆ
ಯಲ್ಲಿ ಕರಡಿ ಬಿಟ್ಟಂತೆ ಕಲ ಕಲ ಧ್ವನಿ ಮಾಡುತ್ತ ಮೆರವಣಿಗೆಯ
ಮುಂಭಾಗದಲ್ಲಿರುವ ವಾದ್ಯದವರನ್ನು ಜೆದರಿಸಿ ಹಾರುತ್ತ ಚೀರುತ್ತ
ಎಲೋ ಬಾರಿಸುವದನ್ನು ಬಂದು ಮಾಡಿರಿ. ಈ ಮೆರವಣಿಗೆಯನ್ನು
ನಾವು ಮಾಡಗೊಡುವದಿಲ್ಲ ಇಷ್ಟಕ್ಕೆ ಹಿಂದಿರುಗಿ ನೀವು ನಿಮ್ಮ ಮನೆ
ಗಳಿಗೆ ಹೋಗಿರಿ ಇಲ್ಲವಾದರೆ ಕೈಗೆ ಕೈ ಹತ್ತಿ ನಿಮ್ಮ ಪರಿಣಾಮವು
ನೆಟ್ಟಗಾಗುವದಿಲ್ಲ.

ಈ ಪ್ರಕಾರ ಪರವಾದಿಗಳು ಅಡ್ಡಿ ಮಾಡಿದೊಡನೆ ತಮ್ಮ
ಉತ್ಸವಕ್ಕೆ ಏಕಾ ಏಕಿ ವಿಘ್ನವಾದುದನ್ನು ಕಂಡು ವೀರಶೈವರ ಸಮುದಾ
ಯವು ಯಾವದೂ ಉಪಾಯಗಾಣದೆ ನಿರುಪಾಯರಾಗಿ ಉತ್ಸವದ
ಹಿಂದೆ ಬರುತ್ತಿರುವ ನಮ್ಮ ನಾಗಭೂಷಣ ಶಿವಯೋಗಿಗಳ ಸನ್ನಿಧಿಗೆ
ಬಂದು ಮ್ಲಾನವದನರಾಗಿ ಮುಖ ತಗ್ಗಿಸಿಕೊಂಡು ಪತಕೀಯಸ್ಥಾದ
ಪರವಾದಿಗಳಿಂದ ತಮಗಾದ ಉತ್ಸವದ ವಿಘ್ನವನ್ನು ತಿಳಿಸಲು ಘನಮ
ಹೇಶರು ಕರ್ಣ ಕಠೋರವಾದ ಪುರಾಣೋತ್ಸವದ ಪ್ರತಿಬಂಧ ಶಬ್ದವು

ಕಿವಿಗೆ ಬಿದ್ದಾಕ್ಷಣವೇ ಕಿಡಿಕಿಡಿಯಾಗಿ ಆಪಾದಮಸ್ತಕ ಕೋಪಜ್ವಾ
ಯಿಂದ ಕೆಂಪಡರಿದ ಕೆಂಗಣ್ಣುಗಳಿಂದ ಕಿಡಿಗಳನ್ನುದರಿಸುತ್ತ ಸರ್ವಮ
ಶ್ರೇಷ್ಠವಾದ ವೀರಶೈವ ಮತವೆಂಬ ವಾರಿಧಿಗೆ ಚಂದ್ರ ಸಮಾನನಾ
ಬಸವನ ಕಾರ್ಯಕ್ಕೆ ಪ್ರತಿಬಂಧವೇ ಭಲಾ ಬಸವನಿಗಿಂತಲೂ ಬಲ್ಲಿ
ನಾವನು ಈ ಭೂಮಿಯಲ್ಲಿ ಅವತರಿಸಿ ಬಂದನು, ಆಗಲಿ ಬಸವನ
ಬಲ್ಲಿದನಾದರೆ ಭವಿಗಳಿಂದ ತಡೆಯಲ್ಪಟ್ಟ ತನ್ನ ಉತ್ಸವವನ್ನು ನಿರಾ
ಯಾಸವಾಗಿ ನಿರ್ವಿಘ್ನಗೊಳಿಸಲಿ ನೀವು ಎಳ್ಳಷ್ಟೂ ಚಿಂತಿಸಬೇಡಿರೆಂದ
ತಾನು ಭಕ್ತಿಯ ಆವೇಶದಿಂದ ಪರವಶನಾಗಿ ಬಸವಾ ಬಸವಾ ಏನಿದ
ಬಸವಾ ಹಿಂದಕ್ಕೆ ಏಳು ನೂರು ವರ್ಷಗಳ ಹಿಂದೆ ಕಲ್ಯಾಣದಲ್ಲಿ ಪ
ವಾದಿಗಳೆಂಬ ಕಪ್ಪು ಮೋಡಗಳಿಗೆ ಝಂಝಾಮಾರುತ ಸಮಾನನಾ
ಶಿವಭಕ್ತಾಗ್ರೇಸರನೆಂಬ ಮಾತು ಪುರಾಣದೊಳಗಿನದು. ನೀನು ಭಕ್ತಾ
ಮಾನಿಯೇ ನಿಜವಾಗಿದ್ದಲ್ಲಿ ನಿನ್ನ ಭಕ್ತರು ಭಕ್ತಿವಹಿಸಿ ಮಾಡುವ ಕಾರ್ಯಕ್
ಬಂದ ಕಂಟಕದಿಂದ ಬಯಲು ಮಾಡಿ ಬಸವನೇ ಭಕ್ತನೆಂಬ ಬಿರುದನ್ನು
ಸಾರ್ಥಕ ಮಾಡು ಇಲ್ಲಿವೇ ಆಳಿನಪಮಾನ ಆಳ್ದಂಗೆ ಎಂಬ ನೇಮದಂ
ನಿನ್ನ ಭಕ್ತರು ಮಾಡುವ ನಿನ್ನ ಪುರಾಣ ಮೆರವಣಿಗೆಯ ಅಪಮಾನ
ಭಕ್ತರಾಜನಾದ ನಿನಗರುವಿಕೆ ಇದ್ದರೆ ನಿವಾರಿಸು ಇಲ್ಲವೇ ಬಿಡು. ಅಂದ
ಕಲ್ಯಾಣದಲ್ಲಿ ಮದನೇರಿದ ಮದ್ದಾನೆಗಳೆಂಬ ಜೈನಮತ ಸಮುದಾಯಕ್
ಅಂಕುಶ ಪ್ರಾಯನಾಗಿ ಪರವಾದಿಗಳ ಪರಾಕ್ರಮವನ್ನು ಪಲಾಯನ
ಗೊಳಿಸಿದ ಪರಾಕ್ರಮವಿಂದೆಲ್ಲಿ ಹೋಯಿತು. ಬಸವಾ ಕಲ್ಯಾಣದ
ಮಂತ್ರಿಯಾಗಿ ನಿತ್ಯದಲ್ಲೂ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣ
ತೃಪ್ತಿಪಡಿಸಿ ಬೇಡಿದವರಿಗೆ ಬೇಡಿದ ಇಷ್ಟಾರ್ಥವನ್ನು ಕೊಟ್ಟು ನಿತ್ಯದ
ಮುನ್ನೂರಾ ಅರವತ್ತು ಪವಾಡಗಳನ್ನು ಮಾಡಿ ಪುರಾಣ ಪ್ರಸಿದ್ಧವಾ
ಬಸವಾ ಆ ವೀರ ವೃತ್ತಿ ಇಂದು ಮಾಯವಾಯಿತೇ ಎಂದು ಘನಮ
ಶರು ತಮ್ಮ ಶ್ರೇಷ್ಠವಾದ ಕ್ರಿಯಾ ಶಕ್ತಿಯ ಬಲದಿಂದ–

ಬಸವಾ ಪೂರ್ಣಶಶಿವಾ । ಭಕ್ತವಿಸರಾಭಿ ಮಾನಿ ಮರೆವರೇ
ನಿಮ್ಮ ಝಸವಾ ॥

ಎಂಬ ಬಸವ ಪವಾಡಗಳಿಂದ ಕೂಡಿದ ಹನ್ನೊಂದು ನುಡಿಯ ಪದವನ್ನು ಆಗಿಂದಾಗಲೇ ಆವೇಶದಿಂದ ಅಬ್ಬರಿಸಿ ಅನ್ನುತ್ತಿರಲು ಇವರ ತಪಃ ಶಕ್ತಿಯ ಪ್ರಭಾವದಿಂದಲೊ ಬಸವೇಶನು ತನ್ನ ಭಕ್ತರಿಗಾದ ಅಪಮಾನವನ್ನು ಸಹಿಸಲಾರದ ಶೌರ್ಯದಿಂದಲೋ ಅಥವಾ ಶಿವಮತ ಶ್ರೇಷ್ಠತೆಯು ಪ್ರಪಂಚದಲ್ಲಿ ಪ್ರಸಿದ್ಧವಾಗಲೆಂದು ಪರಮಾತ್ಮನ ಪ್ರೇರಣೆಯಿಂದಲೋ ಪುರಾಣೋತ್ಸವವನ್ನು ಪ್ರತಿಬಂಧ ಮಾಡಿದ ಪರವಾದಿಗಳಿಗೆ ಹೃದಯದಲ್ಲಿ ಭೂತ ಸಂಚಾರವುಂಟಾಗಿ ನಿಂತ ನಿಂತಲ್ಲಿಯೇ ಅಂಗವಿಕಾರಗಳನ್ನು ಮಾಡುತ್ತಾ ತಮ್ಮ ದೇಹದ ಮೇಲಿನ ತಮ್ಮ ಅರಿವೆಗಳನ್ನು ತಾವೇ ಕಿತ್ತಿಕೊಳ್ಳುತ್ತಾ ತಮ್ಮ ಕೈಗಳಿಂದ ತಲೆಗೂದಲುಗಳನ್ನು ಕೆದರಿಕೊಳ್ಳುತ್ತಾ ತಮ್ಮ ತಮ್ಮಲ್ಲಿಯೇ ಒಬ್ಬರಿಗೊಬ್ಬರು ಬಡಿದಾಡುತ್ತಾ ದೇಹದ ಮೇಲಿನ ಅರುವಿಲ್ಲದ ಹಾರಾಡುತ್ತಿರಲು ಈ ವಿಪರೀತವಾದ ವಿಷಯವನ್ನು ಅವರ ಮನೆಯವರು ಕೇಳಿ ಹೌಹಾರಿ ಅಲ್ಲಿಗೆ ಓಡಿಬಂದು ಅರುವುಗೆಟ್ಟು ಅಂಗ ಚೇಷ್ಟೆಗಳನ್ನು ಮಾಡುವ ಅಜ್ಞಾನಿಗಳನ್ನು ಕಂಡು ಪಾಪಿಗಳು ಮಹಾತ್ಮರ ಮಹಿಮೆಯನ್ನರಿಯದೆ ಪವಿತ್ರ ಕಾರ್ಯಗಳಿಗೆ ಪ್ರತಿಬಂಧ ಮಾಡಲು ಬಂದದ್ದಕ್ಕೆ ಪ್ರಾಯಶ್ಚಿತ್ತ ನೆಟ್ಟಗಾಯಿತು.

ಇದಕ್ಕೇನು ಮಾಡಬೇಕು ಯಾರ ಮೊರೆ ಹೋಗಬೇಕು ಎಂದು ಅತ್ತಿತ್ತ ಹೌಹಾರಿ ಅಡ್ಡಾಡುತ್ತಿರಲು ಉತ್ಸವದ ಮುಂಭಾಗದಲ್ಲಿ ವೀರಾವೇಶದಿಂದ ವೀರಭದ್ರನಂತೆ ವಿರಾಡ್ರೂಪದಿಂದ ವಿರಾಜಿಸುತ್ತಿರುವ ಶಿವಯೋಗಿಯ ಸನ್ನಿಧಿಗೆ ಬಂದು ಸಾಷ್ಟಾಂಗ ನಮಸ್ಕಾರ ಹಾಕಿ ಮಹಿಮಾಶಾಲಿಯಾದ ಮಹಾತ್ಮನೆ ಶಿವಶರಣರ ಶಕ್ತಿಯನ್ನರಿಯದೆ ಶಿವಭಕ್ತರ ಕಾರ್ಯದಲ್ಲಿ ಕೈಹಾಕಿ ಅಜ್ಞಾನಿಗಳಾದ ನಮ್ಮವರು ಅನುಭವಿಸುವ ಯಾತನೆಗಳನ್ನು ಶಾಪಾನುಗ್ರಹ ಶಕ್ತರಾದ ತಾವು ದಯಾ ದೃಷ್ಟಿಯಿಂದ ಕ್ಷಮಿಸಿ ರಕ್ಷಿಸಬೇಕೆಂದು ಪಾದ ಸನ್ನಿಧಿಯಲ್ಲಿ ಬಿದ್ದು ಬೇಡುವ ಭವಿಗಳನ್ನು ಘನಮಠೇಶರು ದಯಾದೃಷ್ಟಿಯಿಂದ ನೋಡಿ–

ಉತ್ತಮಾನಾಂ ಕ್ಷಣಂ ಕೋಪಃ ॥

ಎಂಬ ಸುಭಾಷಿತದಂತೆ ಶಾಂತರಾಗಿ ಅಯ್ಯಾ ನಿಮ್ಮನ್ನುದ್ಧರಿ

ಸಲಿಕ್ಕೆ ನಾವೆಷ್ಟರವರು ದುಷ್ಟ ನಿಗ್ರಹ ಶಿಷ್ಟ ಪರಿಪಾಲಕ ಎಂಬ ಬಿರು
ದುಳ್ಳ ಪರಮಾತ್ಮನು ಮಾನವನ ಬಯಕೆಗಳ ಭಾವನೆಗೆ ತಕ್ಕಂತೆ ಫಲ
ಗಳನ್ನು ಕೊಡುತ್ತಾನೆ. ನಾವು ಮಾಡಿದ್ದನ್ನು ನಾವು ಉಣ್ಣಲೇಬೇಕು.
ಯಾವನ ಕಾರ್ಯಕ್ಕೆ ನೀವು ವಿಘ್ನ ಮಾಡಿರುವಿರೋ ಅದೇ ಮಹಾತ್ಮನ
ಕಾರ್ಯವನ್ನು ಭಕ್ತಿಯಿಂದ ಭಾವ ಶುದ್ಧರಾಗಿ ಮನಸಾ ಮಾಡಿದರೆ
ನಿಮ್ಮವರಿಗಾದ ಕಷ್ಟಗಳನ್ನೆಲ್ಲ ಆ ಬಸವನೇ ಬಯಲು ಮಾಡುತ್ತಾನೆ.
ಸರ್ವರೂ ಸಮಭಾಗಿಗಳಾಗಿ ಸ್ವಾಮಿಯ ಕಾರ್ಯವನ್ನು ಪೂರ್ಣ
ಮಾಡಿರಿ ಎಂದು ಸರ್ವರನ್ನು ದಯಾದೃಷ್ಟಿಯಿಂದ ನೋಡಲು ಸರ್ವ
ರಿಗೂ ಪ್ರಾಪ್ತವಾದ ಭೂತ ಚೇಷ್ಟೆಯು ನಾಶವಾಗಿ ಮೊದಲಿನಂತೆ
ನಿಶ್ಚಲ ಬುದ್ಧಿಯವರಾಗಿ ಆನಂದದಿಂದ ಘನಮಠೇಶರ ಅಘಟಿತ ಘಟ
ನಾ ಶಕ್ತಿಯನ್ನು ಕಂಡು ಮಹಾತ್ಮಾ ಮಂದ ಬುದ್ಧಿಯುಳ್ಳ ನಾವು
ನಿನ್ನಿಂದಲೇ ಬಸವ ಮಹಿಮೆಯನ್ನರಿತೆವು. ನಾವೇ ಈ ಮಹಾತ್ಮನ
ಪಲ್ಲಕ್ಕಿಯನ್ನು ನಮ್ಮ ಹೆಗಲ ಮೇಲೆ ಹೊತ್ತು ಪಾಪಪೂರಿತಗಳಾದ ಈ
ದೇಹಗಳನ್ನು ಸಾರ್ಥಕ ಮಾಡಿಕೊಳ್ಳುವೆವು ಎಂದು ಸರ್ವರೂ ಸಮ್ಮಿಳಿ
ತರಾಗಿ ಮೊದಲಿಗಿಂತಲೂ ಅತಿ ವಿಜೃಂಭಣೆಯಿಂದ ಸರ್ವ ಶ್ರೇಷ್ಠವಾದ
ಶಿವ ನಾಮವನ್ನು ಉಚ್ಚರಿಸುತ್ತ ಗೊತ್ತು ಮಾಡಿದ ಸ್ಥಳಕ್ಕೆ ಮೆರವಣಿಗೆ
ಯನ್ನು ಮುಕ್ತಾಯಗೊಳಿಸಿ ಸರ್ವರೂ ಕಾಯಿ ಕರ್ಪೂರಾರತಿಗಳಿಂದ
ಮಂಗಲಾರತಿಯಂ ಮಾಡಿ ಮಹಾತ್ಮ ಘನಮಠೇಶರಿಂದ ಆಶೀರ್ವಾ
ದವಂ ಹೊಂದಿ ತಮ್ಮ ತಮ್ಮ ಆಲಯಂಗಳಿಗೆ ಆಗಮಿಸಿದರು.

**೪ ನೆಯ ಪ್ರಕರಣಂ ಸಮಾಪ್ತಂ**



# ೫ ನೆಯ ಪ್ರಕರಣಂ



ಕಂದ:- ಕರುನಾಡ ಕಂಡು ಮುದದಿಂ|
ಗಿರಿವರ ಪರಶಿವನ ಭಕ್ತಿಯಿಂ| ಭೂತಲದೋಳ್||
ಘುರು ಶಿವಶರಣರ ಮಾರ್ಗವ|
ನೊರೆವುತ್ತೂರೂರ್ಗೆ ನಿತ್ಯ ನೇಮದಿ ನಡೆದಂ||

ಘನಮಠೇಶರು ಚಿಂಚೋಳಿ ಗ್ರಾಮದಲ್ಲಿ ಬಸವ ಪುರಾಣದ ಸಂಭ್ರಮವನ್ನು ಬಂದ ವಿಘ್ನಾದಿಗಳಿಂದ ಬಯಲು ಮಾಡಿ ಸರ್ವ ಭಕ್ತರ ಮನಾನಂದವಾಗುವಂತೆ ಸಮಾಪ್ತಗೊಳಿಸಿ ಸಕಲರಿಗೂ ಶುಭಾಶೀರ್ವಾದ ಮಾಡಿ ಸರ್ವೇಶ್ವರನ ಪ್ರೇರಣೆಯಂತೆ ಪ್ರಯಾಣ ಸಿದ್ಧರಾಗಲು ಆ ಗ್ರಾಮದ ಸದ್ಭಕ್ತರು ಶಿವಯೋಗಿಗಳ ಪ್ರಯಾಣ ಸಿದ್ಧತೆಯನ್ನರಿತು ಘನಮಠೇಶರನ್ನು ತಮ್ಮ ಗ್ರಾಮದಲ್ಲಿಯೇ ಇಟ್ಟುಕೊಳ್ಳಬೇಕೆಂಬ ಹಿರಿಯಾಶೆಯಿಂದ ಸ್ವಾಮಿಗಳ ಸಮ್ಮುಖದಲ್ಲಿ ಸಾಷ್ಟಾಂಗವೆರಗಿ ವಿನಯದಿಂದ ಮಹಾತ್ಮರೆ ದಯಮಾಡಿ ತಾವು ಕಡೆತನಕಲೂ ಈ ಜಡ ಭಕ್ತರು ಮಾಡುವ ಸೇವೆಯನ್ನು ಸ್ವೀಕರಿಸಿ ಇಲ್ಲಿಯೇ ಇರಬೇಕೆಂದು ಆಗ್ರಹ ಪಟ್ಟರೂ ಅದಕ್ಕವರೂ ಆಶೇ ಬೀಳದೆ ಅವರಿಗೆ ಸಮಾಧಾನದಿಂದ ಜಗತ್ಕುಟುಂಬಿಗಳಾದ ನಾವು ಒಂದೇ ಸ್ಥಾನದಲ್ಲಿದ್ದರೆ ಶಂಭುವಿನ ಸೇವೆ ಅಥವಾ ಸಮಾಜ ಸೇವೆ ಹೇಗೆ ನಡೆಯುಬೇಕು.

ನಮ್ಮ ಪ್ರಯಾಣಕ್ಕೆ ಪ್ರತಿಬಂಧ ಮಾಡಬೇಡಿರಿ ಶಿವನು ಸರ್ವರಿಗೂ ಶುಭವನುಂಟುಮಾಡಲಿ ಎಂದು ಅವರಿಗೆ ಆಶೀರ್ವದಿಸಿ ಮತ್ತು ಮುಂದೆ ಪ್ರಯಾಣ ಮಾಡುತ್ತಾ ಊರೂರಿಗೆ ವಾಸ ಮಾಡಿ ಶಿವಭಕ್ತರಲ್ಲಿಯ ಕುಂದು ಕೊರತೆಗಳನ್ನು ಕಿತ್ತಿ ಬಸವಾದಿ ಶಿವಶರಣರ ವಚನ

ಭೋಧೆಯೆಂಬ ಭಕ್ತಿಯ ಬೀಜವನ್ನೂರಿ ಭಕ್ತರಿಂ ಆದರಾತಿಥ್ಯವಂ ಸ್ವೀಕರಿಸುತ್ತಾ ಸ್ವಾರ್ಥಕ್ಕಾಗಿ ಯಾರಿಂದ ಏನೂ ಪರಿಗ್ರಹಿಸದೆ ಪರಿಶುದ್ಧ ಮಾನಸರಾಗಿ ಪರಮಾತ್ಮನ ಪ್ರೇರಣೆಯಂತೆ ಪ್ರಪಂಚದಲ್ಲಿ ಪಂಚಕ್ಲೇಶ ಗಳಿಂದ ಪರಿವೃತವಾದ ಮಾನವರ ಮನವನ್ನು ಪರಿಶುದ್ಧಗೊಳಿಸಿ ಪಶುಪ ತಿಯ ಮತವನ್ನು ಪ್ರಪಂಚದಲ್ಲಿ ಪ್ರಸ್ಥಾಪಿಸುವ ಘಣದಿಂದ ಪ್ರಯಾಣ ಮಾಡುತ್ತಿರಲು ಘನಮಠೇಶರು ವಿವೇಕಿಗಳಾದ ವೀರಶೈವರಿಂದಲೂ ಸಕಲ ಸಂಪತ್ತಿನಿಂದಲೂ ನಾನಾವರ್ಣದ ಜನರಿಂದಲೂ ಸುಂದರವಾದ ಶಿವಾಲಯಗಳಿಂದಲೂ ಪರಿಶೋಭಿಸುವ ನಾರಾಯಣ ಪೇಟೆಯೆಂಬ ನಗರದೊಳು ಹೊಕ್ಕು ತನ್ನ ಆಚಾರಕ್ಕೆ ಅನುಕೂಲವಿರುವ ಆ ಊರ ಹಿರೇಮಠಕ್ಕೆ ಹೋಗಿ ಅಲ್ಲಿ ತಳವೂರಿದನು.

ನಂತರ ಅಲ್ಲಿಯ ಸದ್ಭಕ್ತರು ಚಿಂಚೋಳಿಯಲ್ಲಿ ಬಸವ ಪುರಾ ಣವನ್ನು ತಮ್ಮ ತಪಃ ಪ್ರಭಾವದಿಂದ ಪೂರ್ಣಮಾಡಿದವರೂ ಶಾಪಾ ನುಗ್ರಹಶಕ್ತರೂ ಶಿವಮತದ ಸರ್ವೋತ್ಕರ್ಷತೆಯೇ ಮನಸ್ಸಿನ ಮುಖ್ಯ ಧ್ಯೇಯವಾಗಿಟ್ಟುಕೊಂಡು ಜಗತ್ತಿನಲ್ಲಿ ಸಂಚಾರ ಮಾಡುವ ಶಿವಯೋಗಿ ಘನಮಠೇಶರೆಂಬುವರು ಇವರೇ ಎಂದು ನಿಶ್ಚಯಿಸಿ ಶೀಘ್ರವಾಗಿ ಸರ್ವರೂ ಮಠಕ್ಕೆ ಬಂದು ಮಠದಲ್ಲಿ ಮಹೂರ್ತಮಾಡಿರುವ ಮಹಾ ತ್ಮರಿಗೆ ಮನಸಾ ವಂದನೆಮಾಡಿ ಸಿಂದಾಕ್ಷಣವೇ ಘನಮಠೇಶರು ಹಸನ್ಮುಖಿಗಳಾಗಿ ಆಗಂತುಕರಿಗೆ ಅಯ್ಯಾ ಎಲ್ಲರಿಗೂ ಈಶ್ವರೇಚ್ಛೆ ಯಿಂದ ಕ್ಷೇಮವೇ ಸದಾಚಾರದಿಂದ ಶೋಭಿಸುವ ನಿಮ್ಮೆಲ್ಲರನ್ನು ಕಂಡು ಸಂತೋಷವಾಯಿತು. ಅಷ್ಟಾವರಣದಲ್ಲಿ ಅಭಿಮಾನಿಗಳಾಗಿ ಆಚಾರ ಮಾರ್ಗವನ್ನು ಅನುಸರಿಸಿ ನಡೆಯುವದೇ ವೀರಶೈವರ ಕರ್ತವ್ಯ. ತನ್ನ ಸಮಾಜದಲ್ಲಿ ಅಭಿವೃದ್ಧಿಗಾಗಿ ಅಹರ್ನಿಶ ಶ್ರಮಪಡುವದೇ ಶಿವ ಭಕ್ತರ ಶ್ರೇಷ್ಠ ಕಾಯಕ ನಶ್ವರವಾದ ನರಜನ್ಮವಿರುವಾಗಲೇ ಹರಶರ ಣರ ಸೇವೆಮಾಡುವದೇ ಮಾನವ ಜನ್ಮದ ಮುಖ್ಯತ್ವ ಮಾನವನು ಇಂಥ ಪುರುಷಾರ್ಥದ ಪರವೆ ಇಲ್ಲದೆ ಬಿಂದು ಮಾತ್ರ ಸುಖಕ್ಕಾಗಿ ಪರ್ವತ ಪ್ರಾಯವಾದ ದುಃಖವನ್ನು ಅನುಭವಿಸಿ ವಿನಾಶವಾದ ವಿಭವಾದಿಗಳಿಗೆ.

ಆಶೆ ಬಿದ್ದು ಅಮೌಲ್ಯವಾದ ಅಲಭ್ಯವಾದ ಮಾನವ ಜನ್ಮದ ಲಭ್ಯತೆಯೇ ಅಪರೂಪ ಅದಕಿಂತಲೂ ಅಭವ ಪ್ರೇಮಕ್ಕೆ ಅತಿ ಸಮೀಪವಾದ ಶಿವಭಕ್ತನ ಜನ್ಮವೇ ಸರ್ವಶ್ರೇಷ್ಠ ಬಸವಾದಿ ಶಿವಶರಣರು ದಯಾ ದಾಕ್ಷಿಣ್ಯಾದಿ ಸದ್ಗುಣಗಳಿಂದ ತಮ್ಮ ಜನ್ಮ ಪರಿಯಂತರ ಶಿವನ ಪ್ರಪಂಚ ವನ್ನೆ ಮಾಡಿ ತಮ್ಮ ಭೌತಿಕ ಶರೀರದಿಂದ ಬಯಲಾಗಿದ್ದರೂ ಅವರ ಕೀರ್ತಿಕಾಯ ಮಾತ್ರ ಆಚಂದ್ರಾರ್ಕವಾಗಿದೆ ನನ್ನದು ನಾನು ಎಂದು ಅಹಂಕಾರ ಪಡುವ ಅಜ್ಞಾನಿಗೆ ಯಾವದು ಸ್ವತಂತ್ರವದೆ ಸರ್ವವೂ (ಶಿವಮಯಂ ಜಗತ್) ಎಂದು ಶೃತಿ ಸಾರುತ್ತಿರಲು ನಾವು ನಮ್ಮ ಪ್ರಪಂಚವನ್ನೆಲ್ಲ ಶಿವಾರ್ಪಿತವೆಂದು ಶಿವನ ಮೇಲೆ ಹಾಕಿ ಶಿವ ಪ್ರೇಮಕ್ಕೆ ಪಾತ್ರರಾಗುವದೇ ವಿವೇಕಿಗಳ ವಿಚಾರ. ನಮ್ಮ ಪುರಾತನರ ಮತ ಈ ಪ್ರಕಾರವಾಗಿ ಶಿವಯೋಗಿಗಳು ಸರ್ವರನ್ನೂ ಕೂಡ್ರಿಸಿಕೊಂಡು ಮಾನವ ಜನ್ಮದ ಮಹತ್ವವನ್ನು ಬೋಧಿಸುತ್ತಿರಲು ಹೊತ್ತು ಬಹಳ ಆದದ್ದರಿಂದ ಭಕ್ತರು ಶಿವಯೋಗಿಗಳನ್ನು ಶಿವಾರ್ಚನೆ ಮಾಡಲು ನಮ್ಮ ಮನೆಗೆ ನಿಮ್ಮ ಮನೆಗೆ ಬರಬೇಕೆಂದು ಒಬ್ಬರಿಗೊಬ್ಬರು ಮೇಲಾಡಹತ್ತಿದರು.

ಶಿವಯೋಗಿಗಳು ಅಪ್ಪಾ ನಮ್ಮ ಶಿವಾರ್ಚನೆಯ ಸಲುವಾಗಿ ನೀವೇಕೆ ಮೇಲಾಡುವಿರಿ ನಮ್ಮ ಪೂಜೆಯ ಚಿಂತೆ ನಮಗೆ. ನೀವು ಯಾರೂ ಕಷ್ಟಪಡುವ ಕಾರಣವಿಲ್ಲ ಅನ್ಯರಿಕೆ ಆಯಾಸ ಕೊಟ್ಟು ಹಾದಿ ನ್ನಿಸಿಕೊಳ್ಳುವ ಆಚರಣೆಯನ್ನು ನಾವು ಇಟ್ಟುಕೊಂಡಿಲ್ಲಿ ಸ್ವತಂತ್ರತೆ ಯಿಂದ ಮಾಡಿದ ಶಿವಪೂಜೆಯು ಶಿವನಿಗರ್ಪಿತವಾಗುತ್ತದೆ ವೀರಶೈವ ರಾದ ನಾವು ವೇಳೆಯನ್ನು ವ್ಯರ್ಥ ಗಳೆಯದೆ ಪ್ರತಿಯೊಬ್ಬ ಪುರುಷನು ತನ್ನ ಪ್ರಪಂಚದಲ್ಲಿ ಪ್ರಾಪ್ತವಾಗುವ ದುಶ್ಚಟ ದುರ್ನಡತೆಗಳಿಂದ ತನ್ನ ಮನಸ್ಸನ್ನು ದೂಷಿತವಾಗದಂತೆ ದೂರ ಇಟ್ಟು ಸದಾಶಿವ ಪೂಜೆ ಶಿವ ಭಜನೆಗಳಿಂದ ಶುಚಿಯಾಗಿರುವ ಸದುದ್ದೇಶವೇ ಶಿವಪೂಜೆಯ ಶಿಷ್ಟಾ ಚಾರ ಬಹಿರಂಗದ ಆಡಂಬರಕ್ಕಾಗಿ ಹನ್ನೆರಡು ತಾಸು ಮಾಡುವ ಡಾಂಭಿಕ ಪೂಜೆಗಿಂತಲೂ ನಿರ್ಜನ ಪ್ರದೇಶದಲ್ಲಿ ನಿಶ್ಚಲ ಮನಸ್ಸಿನಿಂದ ನಿಮಿಷ ಮಾತ್ರ ಮಾಡುವ ಅಂತರಂಗದ ಅಭವ ಪೂಜೆಯೇ ಅತಿಶ್ರೇಷ್ಠ

ವಾದದ್ದು. ಸರ್ವಜ್ಞ ಮೂರ್ತಿಯು ಸಹ–

ಹಂಗಿನರಮನೆಗಿಂತ ಇಂಗಡದ ಗುಡಿಲೇಸು।
ಭಂಗಬಟ್ಟುಂಬ ಬಿಸಿಯನ್ನದಕಿಂತ। ತಂಗುಳುವೆಲೇಸು ಸರ್ವಜ್ಞ।

ಎಂದು ಅಂದಿರುವಾಗ ಭಕ್ತಿ ಇಲ್ಲದ ಭಕ್ತರ ಮನೆಯು ಬಿನ್ನಹಕ್ಕೆ ಆಶೆ ಮಾಡುವದಕ್ಕಿಂತಲೂ ನಾವಿಳಿದ ಮಠದಲ್ಲಿಯೇ ನಮ್ಮ ನಿತ್ಯನೇಮಗಳನ್ನು ತೀರಿಸಿಕೊಳ್ಳುತ್ತೇವೆ ಎಂದು ಅವರಿಗೆ ಸಮಾಧಾನ ಹೇಳಿ ಮಠದಲ್ಲಿಯೇ ತಮ್ಮ ನಿತ್ಯಾಚರಣೆಗಳನ್ನು ಮುಗಿಸಿಕೊಂಡು ತಮ್ಮ ನೇಮದಂತೆ ಐದು ಮನೆ ಕಂತೆಭಿಕ್ಷ ತಂದು ತಮ್ಮ ಪ್ರಸಾದ ಮುಗಿಸುತ್ತಿದ್ದರೂ ಆ ಊರಲ್ಲಿ ಚನವೀರಪ್ಪನೆಂಬ ಸದ್ಭಕ್ತನು ಬಡವನಾದರೂ ಬಹು ಭಕ್ತಿಯಿಂದಲೂ ಸದಾಚಾರದಿಂದಲೂ ವಿನಯಾದಿ ಸದ್ಗುಣದಿಂದಲೂ ತನ್ನ ಆಚಾರಕ್ಕೆ ಅನುಕೂಲಳಾದ ಸತಿಯಿಂದಲೂ ಬಸವಪ್ಪನೆಂಬ ಐದಾರು ವರ್ಷದ ಓರ್ವ ಮಗನಿಂದಲೂ ನಿತ್ಯದಲ್ಲೂ ಜಂಗಮ ತೃಪ್ತಿ ಇಲ್ಲದೆ ಊಟಮಾಡದೆ ಶಿವನು ಕೊಟ್ಟದ್ದರಲ್ಲಿಯೇ ತಾನೂ ತೃಪ್ತನಾಗಿ ಶಿವಧ್ಯಾನದಲ್ಲಿಯೇ ಕಾಲಕ್ಷೇಪ ಮಾಡುತ್ತಿರಲು ಅಕಸ್ಮಾತ್ ಊರಿಗೆ ಯಾರಾದರೂ ಜಂಗಮರು ಬಂದರೆ ಅವರಿಗೆ ಬಿನ್ನಹ ಮಾಡಿ ಶಿವ ಸ್ವರೂಪಿಗಳೆಂದು ಮನೆಗೆ ಕರೆದುಕೊಂಡು ಹೋಗಿ ತನಲ್ಲಿದ್ದುದನ್ನೇ ಅವರಿಗೆ ತೃಪ್ತಿಬಡಿಸುತ್ತಿದ್ದನು. ಮಠದಲ್ಲಿ ಯಾರೋ ಶಿವಯೋಗಿಗಳು ಬಂದಿರುವರೆಂಬ ಸುದ್ದಿಯನ್ನು ಜನರಿಂದ ತಿಳಿದು ಮನೆಯಲ್ಲಿ ಬಹಳ ಬೇನೆಯಿಂದ ಮಗನು ಮರಣೋನ್ಮುಖನಾಗಿದ್ದರೂ ಅದನ್ನು ಮನಸ್ಸಿಗೆ ತಾರದೆ ಮಠಕ್ಕೆ ಹೋಗಿ ಶಿವಯೋಗಿ ಘನಮಠೇಶರಿಗೆ ವಂದಿಸಿ ಅತ್ಯಂತ ವಿನಯದಿಂದ ಮಹಾತ್ಮರೇ ನಾಳಿನ ದಿವಸ ಈ ಬಡಭಕ್ತನ ಬಿನ್ನಹವನ್ನು ಸ್ವೀಕರಿಸಿ ಬಡವನ ಮನೆಗೆ ದಯಮಾಡಿಸಬೇಕು. ಎಂದು ಪ್ರಾರ್ಥಿಸಲು ಘನಮಠೇಶರು ಇವನ ಭಕ್ತಿಯ ಭಾವವನ್ನರಿತು ಆನಂದದಿಂದ ಅವನಿಗೆ ಅನುಜ್ಞೆಯನ್ನುಕೊಟ್ಟು ಕಳುಹಲು ಚನವೀರಪ್ಪನು ಮನೆಗೆ ಬಂದು ಮಗನಿಗೆ ಮಹತ್ತರವಾದ ಬೇನೆ ಇದ್ದರೂ ಅದನ್ನು ಲಕ್ಷಿಸದೇ, ಮಡದಿಯೊಡನೆ ಈ ಸಮಾಚಾರವನ್ನು ಅರುಹಿ ನಾಳೆ ಸೂರ್ಯೋದಯದೊಳಗಾಗಿ ಸಕಲ ಸಿದ್ಧತೆಯಾಗಬೇಕು.

ಎಂದು ಹೇಳಲು ಆ ಸಾಧ್ವಿಯು ಸಹ ತನ್ನ ಗಂಡನಿಗೆ ಎದುರಾಡದೆ ಮಗನ ಮೋಹಕ್ಕೆ ಬೀಳದೆ ಮನೆಯನ್ನು ಸಾರಣೆ ಕಾರಣೆಗಳಿಂದ ಶುದ್ಧಗೊಳಿಸಿ ಮಡಿಯಿಂದ ಶುಚಿರ್ಭೂತಳಾಗಿ ಬೆಳಗಾಗುವದರೊಳಗೆ ಬೇಕಾದ ಅಡಿಗೆಗಳನ್ನೆಲ್ಲ ಅಣಿಮಾಡಲು ಚನವೀರಪ್ಪನು ಉದಯಕ್ಕೆ ತನ್ನ ಸ್ನಾನಾದಿಗಳನ್ನು ತೀರಿಸಿಕೊಂಡು ಊರೊಳಗಿನ ಮಹೇಶ್ವರರಲ್ಲಿ ಅವರವರ ಮಠಕ್ಕೆ ಹೋಗಿ ಆದರದಿಂದ ಅವರನ್ನು ಕರೆಕೊಂಡು ಬಂದು ಮನೆಯಲ್ಲಿ ಮುಹೂರ್ತ ಮಾಡಿಸಿ ಘನಮಠೇಶರಿರುವ ಮಠಕ್ಕೆ ಹೋಗಿ ನಮಸ್ಕಾರಮಾಡಿ ವಿನಯದಿಂದ ಅವರನ್ನು ತನ್ನ ಮನೆಗೆ ಕರೆತಂದು ಮಹಾತ್ಮರೇ ಮಹೇಶ್ವರರೆಲ್ಲ ಮೊದಲೇ ದಯಮಾಡಿಸಿ ಬಹಳ ಹೊತ್ತಾಯಿತು. ತಾವು ಸ್ನಾನಮಾಡಿ ತಮ್ಮ ಶಿವಾರ್ಚನೆ ಮುಗಿಸುವದೊಂದೇ ಉಳಿದಿದೆ ಸ್ನಾನಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಲು ಘನಮಠೇಶರು ಮಹೇಶ್ವರರಲ್ಲಿ ಚನವೀರಪ್ಪನಿಗಿರುವ ಮಹತ್ತರವಾದ ಭಕ್ತಿಯನ್ನು ಕಂಡು ಆನಂದದಿಂದ ಹಾಗೆ ಆಗಲಿಯೆಂದು ತಾವು ಸ್ನಾನಮಾಡಿ ದೇವರ ಮನೆಯಲ್ಲಿ ಶಿವಾರ್ಚನೆಗೆ ಕುಳಿತರು.

ಈ ಮೊದಲೇ ಜಡ್ಡಿನಿಂದ ಕೋಣೆಯಲ್ಲಿ ಕೊರಗುತ್ತಿರುವ ಚನವೀರಪ್ಪನ ಮಗ ಬಸಪ್ಪನ ಬಳಲಿಕೆಯು ಹೆಚ್ಚಾಗಿ ಬೇನೆಯಿಂದ ಈಗ ಸಾಯುವನೋ ಇನ್ನೊಂದು ಕ್ಷಣಕ್ಕೆ ಸಾಯುವನೋ ಎನ್ನುವ ಹಾಗೆ ಕ್ಷೀಣಸ್ವರದಿಂದ ಮಗನು ಮುನುಗುತ್ತಿದ್ದರೂ ಜಂಗಮ ಪ್ರೇಮಿಗಳಾದ ಸತಿ ಪತಿಗಳು ಸುತನಕಡೆಗೆ ಸ್ವಲ್ಪಾದರೂ ಹೊರಳಿ ನೋಡದೇ ಜಂಗಮ ಸೇವೆಯಲ್ಲಿಯೇ ನಿರತರಾದದ್ದನ್ನು ಕಂಡು ಜಂಗಮ ಸಮುದಾಯವು ಇವರೆಂಥ ಸದ್ಭಕ್ತರು ಮಗನು ಮಹತ್ತರವಾದ ಬೇನೆಯಿಂದ ಮರಣೋನ್ಮುಖನಾಗಿ ಮಲಗಿದ್ದರೂ ಮಂದಶ್ಮಿತರಾಗಿ ಮಾಹೇಶ್ವರ ತೃಪ್ತಿಯೇ ಮಹತ್ತರವೆಂದು ನಂಬಿರುವರಲ್ಲ. ಎಂದು ತಾವೇ ಆ ಕೂಸಿನ ಸಮೀಪಕ್ಕೆ ಹೋಗಿ ಕಷ್ಟದಿಂದ ಕಳವಳ ಪಟ್ಟು ಕಣ್ಣಿನಲ್ಲಿ ಜೀವ ಹಿಡಿದಿರುವ ಚನವೀರಪ್ಪನ ಮಗನನ್ನು ನೋಡಿ ಈ ಕೂಸು ಈಗ ಸಾಯು

ತ್ತದೆಯೋ ಇನ್ನೊಂದು ಘಳಿಗೆಯಲ್ಲಿ ಸಾಯುತ್ತದೆಯೋ ಎಂದು ಸಂಶಯ ಉಳ್ಳವರಾಗಿ ತಮ್ಮ ತಮ್ಮೊಳಗೆ ಆವೆ ನಮ್ಮ ಊಟವಾಗುವ ವರೆಗೂ ಈ ಹುಡುಗನು ಉಳಿಯುವನೋ ಅಳಿಯುವನೊ ಎಂಬುದರ ನಿಶ್ಚಯವಿಲ್ಲ. ಎಂದು ಮಾತಾಡುವ ಶಬ್ಧವು ದೇವರ ಮನೆಯಲ್ಲಿ ಶಿವ ಪೂಜಾ ಸಮಾಪ್ತಗೊಳಿಸಿ ಸುಖಾಶೀನರಾದ ಶಿವಯೋಗಿಗಳ ಕರ್ಣದಲ್ಲಿ ಬೀಳಲು ಘನಮಠೇಶರು ಅದೇನು. ಆವದೋ ವಿಷಯವನ್ನು ನೀವು ಗೂಢವಾಗಿರಲು ಗುಜು ಗುಜು ಮಾತಾಡುತ್ತಿರುವಿರಿ. ಪ್ರಸ್ತುತ ವಿಷ ಯವನ್ನು ಮುಚ್ಚಿಡುವದರಿಂದ ಮತ್ತಷ್ಟು ಮನಸ್ಸಿನ ಸಂಶಯವು ಹೆಚ್ಚಾ ಗುತ್ತದೆ. ಅದೇ ವಿಷಯವನ್ನು ಬಹಿರಂಗಪಡಿಸಿ ಬಲ್ಲವರಿಂದ ಸಂಶಯ ನಿವಾರಣೆ ಮಾಡಿಕೊಳ್ಳುವದೇ ಮಹತ್ತರ ವಿಚಾರ ಕಾರಣ ನಿಮ್ಮ ಮನಸ್ಸಿನೊಳಗಿನ ಮಾತನ್ನು ನಿಮ್ಮಲ್ಲಿಯೇ ಮುಚ್ಚಿಕೊಂಡರೆ ನಮ ಗೇನು ತಿಳಿಯಬೇಕು.

ಎಂದು ಶಿವಯೋಗಿಗಳು ಕೇಳಿದಾಕ್ಷಣವೇ ಅಲ್ಲಿದ್ದ ಮಹೇಶ್ವ ರರೆಲ್ಲ ಆದ್ಯಂತ ವಿಷಯವನ್ನು ಅರಹಲು ಘನಮಠೇಶರು ಸರ್ವರಿಗೂ ಸಮಾಧಾನ ಹೇಳಿ ಯಾರೂ ಘಾಬರಿಯಾಗುವ ಕಾರಣವಿಲ್ಲ. ಶಿವ ಭಕ್ತರ ಸಂಕಟವನ್ನು ದೂರಮಾಡಲು ಶಿವನು ಸಿದ್ಧನಿದ್ದಾನೆ ಜಂಗಮ ಪಾದೋದಕವನ್ನು ಬೇನೆಯಿಂದ ಬಳಲುವ ಬಾಲಕನ ಮೇಲೆ ಪ್ರೋಕ್ಷಣೆ ಮಾಡಿರಿ ಭಸಿತವನ್ನು ಧರಿಸಿ ಮಡಿ ವಸ್ತ್ರವನ್ನು ಬಾಲಕನ ಮೇಲೆ ಪೂರ್ಣವಾಗಿ ಹೊಂದಿಸಿ ನಂತರ ಚನವೀರಪ್ಪನವರಿಗೆ ಭಕ್ತಾ ಗ್ರೇಸರಾ ನಿನ್ನ ಮಗನ ಚಿಂತೆಯನ್ನು ಬಿಡು. ಮೃತ್ಯುಂಜಯನಿದ್ದಾನೆ. ನೀನು ನಿನ್ನ ನೇಮದಂತೆ ಶಿವರೂಪಿಗಳಾದ ಈ ಜಂಗಮರಿಗೆ ತೃಪ್ತಿಬಡಿಸು ನಿನ್ನ ಭಾವ ಶುದ್ಧತೆಯಿಂದ ಬಂದ ಬಂಧನವೆಲ್ಲ ತಾನೇ ಬಯಲಾಗುತ್ತದೆ. ಎಂದೂ ಎಲ್ಲರಿಗೂ ಎಡಿಯಿಂ ಮಾಡಿಸಿ ಶಿವಯೋ ಗಿನ ಸಂತೃಪ್ತೇ ತೃಪ್ತೋಭವತಿ ಶಂಕರಃ ಎಂದು ಶಿವಾನಾಮ ಘೋಷ ಣೆಮಾಡುತ್ತ ಅನನ್ಯಭಕ್ತಿಯಿಂದ ತನ್ನನ್ನೇ ನಂಬಿ ಬಾಳುವ ಭಕ್ತರ ಭಕ್ತಿಯ ಶುದ್ಧಭಾವನೆಯನ್ನು ಭಾವಜಾರಿಯಾದ ಪರಮಾತ್ಮನು ಅರಿ ಯಲಾರನೇ ಹೇಗೆ ಭಂಗಾರವನ್ನು ಪರೀಕ್ಷಿಸಬೇಕಾದರೆ–

ಹೇಮ್ನಃ ಸಂಮಲಕ್ಷತೇಹ್ಯಗ್ನೌ ವಿಶುದ್ಧಿಃ ಶ್ಯಾಮಿಕಾಪಿವಾ॥

ಎಂಬ ನೇಮದಂತೆ ಭಕ್ತರ ನಡೆ ನುಡಿಗಳ ಶುದ್ಧತೆಯನ್ನು ಶೋಧಿಸುವದಕ್ಕಾಗಿಯೇ ಸದಾಶಿವನು ಇಂಥ ಅಗ್ನಿ ಪರೀಕ್ಷೆಗಳನ್ನು ತಂದೇತರುತ್ತಾನೆ ಯಾವನು ಸುಖ ದುಃಖಗಳೆರಡನ್ನು ಸಮಾನ ದೃಷ್ಟಿಯಿಂದ ನೋಡುವನೋ ಅವನೇ ಶಿವನ ಪ್ರೇಮಕ್ಕೆ ಪಾತ್ರನು ಸರ್ವವೂ ಶಿವನ ಪ್ರೇರಣೆ ಎಂದೂ ಶಿವನಾಮವನ್ನುಚ್ಚರಿಸುತ್ತ ಸರ್ವರನ್ನೂ ಕೂಡಿಕೊಂಡು ಪ್ರಸಾದ ತೃಪ್ತಿ ಪೂರ್ಣವಾಗುವದರೊಳಗೆ ಬಹುಕಾಲ ಬೇನೆಯಿಂದ ಬಳಲುವ ಬಾಲಕನು ನಿದ್ರೆಯಿಂದ ಎದ್ದವನಂತೆ ಎದ್ದು ಬಂದು ತನ್ನ ತಾಯಿಯ ತೆಕ್ಕೆ ಬೀಳಲು ಎಲ್ಲರೂ ಆನಂದಾಶ್ಚರ್ಯವುಳ್ಳವರಾಗಿ ಮಹಾತ್ಮರ ಮಹಿಮೆಯನ್ನು ಕೊಂಡಾಡುತ್ತ ಜನನ ಮರಣಗಳನ್ನು ದೂರಮಾಡಿ ಮೃತ್ಯುಂಜಯನೆನಿಸಿದ ಮಹಾದೇವನಂತೆ ಮರಣದ ಬಾಯಲ್ಲಿದ್ದ ಮಗನನ್ನು ಬದುಕಿಸಿದ ಶಿವಯೋಗಿಗಳ ಶಕ್ತಿಯು ಸಾಮಾನ್ಯವೇ ಚಿಂಚೋಳಿಯಲ್ಲಿ ಜವಾಡವನ್ನುಂಟುಮಾಡಿ ಜವಾಡಿಗಳನ್ನು ಗೆದ್ದ ಸುದ್ದಿಯನ್ನು ನಾವು ಕರ್ನದಿಂದ ಕೇಳಿದ್ದೇವು ಆದರೆ ಈ ದಿವ್ಸ ನಮ್ಮ ಕಣ್ಣೆದುರಿನಲ್ಲಿಯೇ ಕಂಡ ವಿಷಯವನ್ನು ವರ್ಣಿಸಲು ಪಾಮರರಾದ ನಮ್ಮಿಂದ ಸಾಧ್ಯವೇ ಎಂದು ಕೂಡಿದ ಭಕ್ತ ಮಹೇಶ್ವರರೆಲ್ಲ ಕೊಂಡಾಡುತ್ತಿರಲು ಮರಣದಿಂದೆದ್ದು ಬಂದ ಮಗನನ್ನು ಚನವೀರಪ್ಪನ ಮಡದಿಯು ಮಹಾತ್ಮರ ಪಾದಕ್ಕೆ ತಂದು ಹಾಕಿ ಮಹನೀಯರಾದ ಘನಮಠೇಶರ ಮಹಿಮಾತಿಶಯವನ್ನು ಮನಸಾ ಹಾಡಿ ಹರಿಸಿ ಬಂದ ಗಣ ಸಮೂಹಕ್ಕೆ ತಾಂಬೂಲ ದಕ್ಷಿಣಾದಿಗಳಿಂದ ತೃಪ್ತಿಪಡಿಸಿ ಅವರಿಗೆ ಅಪ್ಪಣೆಕೊಟ್ಟರು.

ಅಲ್ಲಿಯ ಸದ್ಭಕ್ತರೆಲ್ಲ ಸಮ್ಮಿಲಿತರಾಗಿ ಚನವೀರಪ್ಪನ ಮನೆಯೊಳಗಿನ ಮಹತ್ವವನ್ನು ಕೇಳಿ ಮಠಕ್ಕೆ ಬಂದು ಮಹಾತ್ಮರನ್ನು ತಮ್ಮ ಗ್ರಾಮದಲ್ಲಿರಬೇಕೆಂದು ಎಷ್ಟು ಪ್ರಕಾರ ಪ್ರಾರ್ಥಿಸಿದರೂ ಅದಕ್ಕೆ ಘನಮಠೇಶರು ಶಿವ ರೂಪವೇ ಜಂಗಮ ರೂಪವಾಗಿ ಜಗತ್ತಿನಲ್ಲಿ ಸಂಚರಿಸುತ್ತಿರಲು ಅವರೆಲ್ಲರನ್ನು ಬಿಟ್ಟು ನಮಗೇಕೆ ನೀವು ಆಗ್ರಹ ಮಾಡು

ತ್ತೀರಿ ಶಿವಮತದಿಂದ ತುಂಬಿರುವ ಕರ್ನಾಟಕದಲ್ಲೆಲ್ಲಾ ಶಿವ ಸಂದೇ
ವನ್ನು ತಲೆಯಮೇಲೆ ಹೊತ್ತು ಊರೂರಿಗೆ ಮುಟ್ಟಿಸ ಬೇಕೆಂಬ ಮಹಾ
ತ್ವಾಕಾಂಕ್ಷೆಯಿಂದ ತಿರುಗುವ ನಾವು ಒಂದೇ ಊರಲ್ಲಿ ಒಂದೇ ಕಡೆಯ
ಇರಲು ಈಶ್ವರನ ಇಚ್ಛೆ ಇಲ್ಲ ಈಶ್ವರೇಚ್ಛೆಯ ವಿರುದ್ಧ ಯಾರೂ ಹೋ
ಬಾರದು ಎಂದು ಪ್ರಯಾಣಮಾಡಿದರು.

ದಾರಿಯಲ್ಲಿ ದಾರೂರು ಕಿಣಿಕೇರಿ ಬಾಡವೆಂಬ ಹಲವಾರ
ಗ್ರಾಮಗಳನ್ನು ಸುತ್ತುತ್ತಾ ಅಲ್ಲಿಯ ಭಕ್ತರ ಆಚರಣೆಗಳನ್ನು ಕಂಡ
ಆನಂದ ಬಡುತ್ತಾ ಮಾರ್ಗದಲ್ಲಿ ಫಲಭರಿತಗಳಾವ ಹೊಲ ಗದ್ದೆಗಳನ್ನ
ನೋಡುತ್ತಾ ತನಗೆ ಮಾರ್ಗಾಯಾಸ ವಾಗಿದ್ದರೂ ಮಾರ್ಗಶಿರ ಮಾಸದ
ಹಿಮ ವಿಶೇಷದಿಂದ ಸೂರ್ಯೋದಯದ ಸಮಯದಲ್ಲಿ ಹಿಮದಿಂದ ಗಿರಿವ
ಪುರ ಪ್ರದೇಶದಲ್ಲೆಲ್ಲ ಮಂಜಿನಿಂದ ಅಚ್ಛಾದಿತವಾದ ನಿಸರ್ಗ ಸೇಮವನ್ನ
ಕಂಡು ಭೂದೇವಿಯು ಚಳಿಯಿಂದ ಬಿಳಿಯ ಕಂಬಳಿಯನ್ನು ಹೊತ್ತಿರ
ವಳೆಂದು ಉಹಿಸಿ ತಾನೂ ಬಿಳಿ ಕಂಬಳಿಯ ಕೊಪ್ಪಿಯನ್ನು ತಲೆಯ
ಮೇಲೆ ಇಟ್ಟುಕೊಂಡು ಪ್ರಾತಃಕಾಲದ ಪ್ರಬಲವಾದ ಥಂಡಿಯಿಂ
ಥರಥರನೆ ನಡಗುತ್ತಾ ಎಡಬಿದವೆ ಶಿವನಾಮವನ್ನು ಹೆಜ್ಜೇಹೆಜ್ಜೆಗೂ
ವಟಗುಡುತ್ತಾ ಪ್ರಶಾಂತವಾದ ಪಾತಃಕಾಲದಲ್ಲಿ ಪಕ್ಷಿಗಳ ಕಲಕಲ ಧ್ವ
ಯನ್ನು ಕಿವಿಯಿಂದಾ ಕೇಳುತ್ತಾ ಹೊಲಕ್ಕೆ ಎತ್ತುಗಳನ್ನು ಮೇಯಿಸಲ
ಹೊರಟ ಒಕ್ಕಲಿಗರ ಹಣೆಯ ಮೇಲಿನ ತ್ರಿಪುಂಡ್ರವನ್ನು ಕಂಡೂ ಶಿ
ಭಕ್ತರಿಂದ ಸನ್ನಿಹಿತವಾದ ಗ್ರಾಮವು ಸಮೀಪದಲ್ಲಿರಬಹುದೆಂಬ ಭಾ
ನೆಯಿಂದ ಬರುತ್ತಿರಲು ಭಕ್ತರ ಅಂತರಂಗದ ಭಕ್ತಿಯು ಬಹಿರಂಗದ
ಪ್ರಕಾಶಿಸುತ್ತದೆಯೋ ಏನೋ ಅನ್ನುವಂತೆ ಥಳಥಳಿಸುವ ಶಿವಾಲಯ
ಗಳ ಕಳಸಗಳಿಂದಲೂ ಬೆಳೆಯಿಂದ ಭಾರವಾಗಿ ಶೋಭಿಸುವ ಹೊಲ
ಳಿಂದಲೂ ಊರ ಮುಂದಿನ ನೀರ ಭಾವಿಗೆ ಬಂದ ವಾರಿಜಾಕ್ಷಿಯ
ಕುಂಕುಮಾಂಕಿತ ಮುಖ ಕಮಲಗಳಿಂದಲೂ ಸೂರ್ಯೋದಯದ ಶು
ಸಮಯದಲ್ಲಿ ಶಿವ ಭಕ್ತರು ಶಿವಾಲಯಂಗಳಲ್ಲಿ ಮಾಡುವ ಶಿವನಾವ
ಘೋಷಣೆಯಿಂದಲೂ ಮೆರೆಯುವ ನೀರಡಗುಂಭ ಗ್ರಾಮವನ್ನು ಘ

ಮಠೇಶರು ಕಂಡು ಮಾರ್ಗದಲ್ಲಿಯು ಸರ್ವ ಶುಭ ಶಕುನಗಳನ್ನು ನೋಡಿ ದರೆ ಪಾತಃಕಾಲದ ಪರಮಾತ್ಮನ ಪವಿತ್ರ ನಾಮಸ್ಮರಣೆಯನ್ನು ಕೇಳಿದರೆ ಶಿವಾಂಶ ಸಂಭೂತರಾದ ಶಿವಶರಣರು ಈ ಗ್ರಾಮದಲ್ಲಿ ಇರ ಲಿಕ್ಕೇಬೇಕು. ಎಂದು ಊಹಿಸಿ ಊರ ಮುಂದೆ ನಿಂತು ಬರುವ ಭಕ್ತ ರನ್ನು ಈ ಊರಲ್ಲಿ ಪ್ರವಾಶಿಕರು ಇಳಿಯಲು ಪವಿತ್ರಗಳಾದ ಮಠಗ ಳೇನಾದರೂ ಉಂಟೆ ಎಂದು ಪ್ರಶ್ನಿಸಲು ಅದಕ್ಕವರು ಇವರ ತೇಜಸ್ವಿ ಮಯವಾದ ಅಜಾನುಬಾಹು ದೇಹವನ್ನೂ ಶಿವಲಾಂಛನಮಯವಾದ ಉಡಪನ್ನೂ ಕಂಡು ಇವರು ಯಾರೋ ಶಿಪಯೋಗಿಗಳೆಂದು ತಿಳಿದು ತಮ್ಮ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಪುರಾಣ ಪ್ರಸಿದ್ಧವಾದ ಪರಂಪ ರಾಗತ ಪರಮ ತಪಸ್ವಿಗಳಿಂದ ವಿಖ್ಯಾತವಾದ ವಿರಕ್ತಮಠವೇ ಇವರಿಗೆ ಯೋಗ್ಯವೆಂದು ಭಾವಿಸಿ ಸ್ವಾಮೀ ಈಗ ವೇಳೆಯಾಗಿದೆ ಆ ಮಠದ ಲ್ಲಿಯೇ ಅಸಾಧಾರಣ ಜಕ್ತಿಯನ್ನಿಟ್ಟು ನನೆಯುವ ಭಕ್ತಶ್ರೇಷ್ಠನಾದ ಶಾಂತವೀರಪ್ಪನೆಂಬ ಗೌಡನ ಮನೆಯು ಇಲ್ಲಿಯೇ ಸಮೀಪದಲ್ಲಿದೆ ಅಲ್ಲಿ ನಿಮ್ಮ ಶಿವಾರ್ಚನಾದಿಗಳನ್ನು ತೀರಿಸಿಕೊಂಡರೆ ಆ ಗೌಡನೇ ನಿಮ್ಮನ್ನು ಮಠಕ್ಕೆ ಕರೆದುಕೊಂಡು ಹೋಗಿ ಸ್ವಾಮಿಗಳಿಗೆ ಭೆಟ್ಟಿ ಮಾಡಿಸುತ್ತಾನೆ. ಎಂದು ಹೇಳಿ ಗೌಡನ ಮನೆಗೆ ಘನಮಠೇಶರನ್ನು ಕಳುಹಲು ಬರುವ ಘನಮಠೇಶರನ್ನು ಕಂಡು ಗೌಡನು ದೂರದಿಂದಲೇ ನೋಡಿ ಎದ್ದು ಎದುರಿಗೆ ಬಂದು ಶಿವಯೋಗಿಗಳನ್ನು ಆದರ ಪೂರ್ವಕವಾಗಿ ಆಸನ ಕೊಟ್ಟು ಕೈ ಮುಗಿದು ಶಿವಾರ್ಚನಾ ಸಮಯವಾಗಿದೆ ಸ್ನಾನಕ್ಕೇಳಬೇ ಕೆಂದು ಪ್ರಾರ್ಥಿಸಿದನು.

ಘನಮಠೇಶರು ಗೌಡನ ಸರಳವಾದ ಭಕ್ತಿಯನ್ನು ಕಂಡು ಆತನ ಪ್ರಾರ್ಥನೆಯನ್ನು ನಿರಾಕರಿಸಬಾರದೆಂದು ತಮ್ಮ ನಿತ್ಯ ಕರ್ಮ ಗಳನ್ನು ತೀರಿಸಿಗೊಂಡು ಪ್ರಸಾದಿಂದ ಪರಿತೃಪ್ತರಾಗಿ ಪಡಸಾಲೆಯಲ್ಲಿ ಪರಮಾನಂದದಿಂದ ಕುಳಿತಿರಲು ಗೌಡನು ತನ್ನ ಹೆಸರಿಗೆ ತಕ್ಕಂತೆ ಶಾಂತಸ್ವಭಾವದಿಂದ ಹಸನ್ಮುಖಿಯಾಗಿ ಮಹಾತ್ಮರೇ ಅನಿಮಿತ್ತ ಬಾಂಧವರಂತೆ ಆಕಸ್ಮಾತ್ ಅಲ್ಪನಾದ ನನ್ನ ಸೇವೆಯನ್ನು ಸ್ವೀಕರಿಸಲು

ದಯಮಾಡಿಶಿದ ತಾವು ಯಾರು ತಮ್ಮ ಪವಿತ್ರ ನಾಮವಾವುದು ಎಂದ
ಕೇಳಲು ನನ್ನ ಶೃತಿಪುಟಗಳನ್ನು ಆತುರಗೊಳ್ಳುತ್ತಲಿವೆ. ದಯಮಾ
ಬರಿದಾದ ಭಕ್ತನ ಹೃದಯವನ್ನು ತಮ್ಮ ನಾಮಾಮೃತದಿಂದ ತುಂ
ಆನಂದಪಡಿಸಬೇಕಾಗಿ ಆಶಿಸುವೆನು.

ಎಂದು ಪ್ರಾರ್ಥಿಸಲು ಘನಮಠೇಶರು ಗೌಡನಿಗೆ ಬಸ
ಸ್ವರೂಪಿಯಾದ ಭಕ್ತಾ ಭಕ್ತಿಯ ಆಳತೆಯನ್ನು ತಿಳಿಯಲಾರದೆ ಭ್ರಾಂ
ಯಿಂದ ಭೂಮಿಯ ಮೇಲಿನ ಭಕ್ತ ಮಹೇಶ್ವರರ ಬಹು ವಿಧವಾ
ಭಕ್ತಿಯ ಭಾವವನ್ನು ತಿಳಿಯಲುದ್ದಿಶ್ಯವಾಗಿ ತಿರುಗುವ ಈ ತಿರುಪೆಯ
ಜಂಗಮನಿಗೆ ಘನಮಠದ ನಾಗಭೂಷಣನೆಂದು ನಾಡಿನ ಭಕ್ತರ
ನುಡಿಯುತ್ತಿರುವರು. ಭಕ್ತಿ ಜ್ಞಾನ ಕ್ರಿಯಾದಿಗಳಲ್ಲಿ ಪಾರಂಗತರ
ಪರಮ ತಪಸ್ವಿಗಳೂ ಎಂದು ಪ್ರಸಿದ್ಧರಾಗಿರುವ ನಿಮ್ಮ ಗ್ರಾಮದ ಶಿದ್ಧ
ಲಿಂಗ ಶಿವಯೋಗಿಗಳ ದರ್ಶನಾಪೇಕ್ಷೆಗಾಗಿ ಬಂದದ್ದಾಯಿತು. ನಿಮ
ಸ್ವಾಮಿಗಳನ್ನು ಭೆಟ್ಟಿಮಾಡಿಸಿ ಮನಸ್ಸಿನ ಮಹಾ ಬಯಕೆಯನ್ನು ಪೂರ್ಣ
ಮಾಡು ಎಂದು ಹೇಳಿದಾಕ್ಷಣವೇ ಗೌಡನು ರೋಗಿಯು ಬಯಸಿದೂ
ಅದೆ. ವೈದ್ಯ ಹೇಳಿದ್ದೂ ಅದೇ ಅನ್ನುವಂತೆ ಹಸಾದ ಪೂಜ್ಯರೇ ಎಂದ
ಘನಮಠೇಶರನ್ನು ವಿರಕ್ತಮಠಕ್ಕೆ ಹಾಲಿದ್ದೆಡೆಗೆ ಸಕ್ಕರೆಯನ್ನು ತರುವಂ
ಶಿದ್ಧಲಿಂಗಸ್ವಾಮಿಗಳೆಡೆಗೆ ಕರತಂದು ಹಾಲು ಸಕ್ಕರೆಯನ್ನು ಸಮ್ಮಿಶ್ರ
ಗೊಳಿಸುವಂತೆ ಉಭಯ ಶಿವಯೋಗಿಗಳ ಸಂಗಮವನ್ನು ಮಾಡಿದನು

ಉಭಯ ಶಿವಯೋಗಿಗಳು ಪರಸ್ಪರ ಪ್ರಣಾಮವಂಗೈದ
ಉಚಿತಾಸನದಲ್ಲಿ ಮುಹೂರ್ತಮಾಡಿದ ನಂತರ ನೀರಡಗುಂಭ
ನಿರಂಜನ ನಿರಾಭಾರಿ ದೇಶಿಕೋತ್ತಮರಾದ ಶ್ರೀ ಶಿದ್ಧಲಿಂಗಸ್ವಾಮಿಗಳ
ತಮ್ಮ ಸದ್ಭಕ್ತನಾದ ಗೌಡನಿಗೆ ಬಂದ ಶಿವಯೋಗಿಗಳಾರೆಂದು ಕೇಳ
ಚಿಂಚೋಳಿ ನಾರಾಯಣಪೇಟಿ ಮೊದಲಾದ ಗ್ರಾಮಗಳಲ್ಲಿ ತಪ
ಕ್ರಿಯಾ ಬಲದಿಂದ ಅನಂತ ಪವಾಡಗಳನ್ನುಂಟುಮಾಡಿ ಪ್ರಸಿದ್ಧರಾ
ಘನಮಠೇಶರೆಂಬುವರು ಇವರೇ ಎಂದು ಹೇಳಲು ಶಿದ್ಧಲಿಂಗಸ್ವಾಮಿಗಳ
ಸಂತೋಷದಿಂದ ಕರ್ಣೋಪ ಕರ್ಣವಾಗಿ ಇವರ ವಾರ್ತೆಯನ

ಕೇಳುತ್ತಿದ್ದ ನಾವು ಇಂದು ಇವರ ಪ್ರತ್ಯಕ್ಷ ದರ್ಶನದಿಂದ ಧನ್ಯರಾದೆವು. ಇಂದಿನ ದಿನವೇ ಶುಭದಿನವು ಮಹಾತ್ಮರ ಅವತಾರವು ಪರೋಪಕಾರಾರ್ಥವಾಗಿಯೇ ಪರಿಣಮಿಸಿ ಪ್ರಪಂಚದಲ್ಲಿ ಪ್ರಸಿದ್ಧರಾಗಿ ಅಂತ್ಯಕ್ಕೆ ಅವರ ಕೀರ್ತಿಯು ಅಜರಾಮರವಾಗುವದರಲ್ಲಿ ಸಂದೇಹವಿಲ್ಲ. ಮಹಾತ್ಮರು ಮಾನವರಂತೆ ಮರ್ತ್ಯದಲ್ಲಿ ಸಂಚರಿಸುತ್ತಿದ್ದರೂ ಶಿವಲೋಕದಿಂದ ಶಿವಾಜ್ಞೆಯನ್ನು ಶಿರಸಾವಹಿಸಿ ಮರ್ತ್ಯದಲ್ಲಿ ಅರಿಷಡ್ವರ್ಗಾದಿಗಳಿಂದ ಆವೃತರಾಗಿ ಅಜ್ಞಾನದಿಂದ ಅಧೋಪಾತಕ್ಕಿಳಿಯುವ ಮಾನವ ಕುಲದ ಉದ್ಧಾರಕ್ಕಾಗಿಯೇ ಇಂಥಾ ಶಿವಯೋಗಿಗಳ ಅವತಾರವಾಗುತ್ತದೆ.

ಎಂದು ಶಿದ್ಧಲಿಂಗಸ್ವಾಮಿಗಳು ಶಾಂತವೀರಪ್ಪ ಗೌಡನಮುಂದೆ ಶಿವಯೋಗಿ ಘನಮಠೇಶರ ಪ್ರಶಂಶೆ ಮಾಡುತ್ತಿರಲು. ಘನಮಠೇಶರು ಆತ್ಮ ಪ್ರಶಂಶೆಯನ್ನು ಅಷ್ಟಕ್ಕೆ ನಿಲ್ಲಿಸಿ ಶಿದ್ಧಲಿಂಗ ಸ್ವಾಮಿಗಳಿಗೆ ಸ್ವಾಮೀ ತಮ್ಮ ಮಠದ ಪ್ರಶಂಶೆಯು ಪ್ರಪಂಚದಲ್ಲಿ ಪ್ರಸಿದ್ಧವಾಗಿರುವದನ್ನು ಕರ್ಣದಿಂದ ಕೇಳಿ ಕಣ್ಣಿನಿಂದ ನೋಡಿ ತಮ್ಮ ಪಾದದರ್ಶನದಿಂದ ಧನ್ಯನಾಗಬೇಕೆಂಬ ಬಯಕೆಯಿಂದ ಬಂದ ನನ್ನನ್ನೇ ನೀವು ವರ್ಣಿಸಲಿಕ್ಕೆ ಹತ್ತಿದರೆ ಅಲ್ಪನಾದ ನಾನು ಮುಂದೆ ಮಾಡುವದಾದರೂ ಏನು ಶಿವಸ್ವರೂಪಿಗಳಾದ ನಿಮ್ಮಂಥ ಶಿವಯೋಗಿಗಳ ಪ್ರಭಾವವನ್ನು ಪ್ರಪಂಚದಲ್ಲಿ ಪ್ರಸಿದ್ಧಗೊಳಿಸಿ ಬಸವಾದಿ ಶಿವಶರಣರ ಸತ್ಪಥವನ್ನು ಭೂತಲದಲ್ಲಿ ಬೀರಿ ಬಯಲಾಗಲಾಶೆಯಿಂದ ತಮ್ಮ ಸನ್ನಧಿಗೆ ಬಂದಿದ್ದೇನೆ.

ಎಂದು ಘನಮಠೇಶರು ಹೇಳಲು ಶಿದ್ಧಲಿಂಗ ಸ್ವಾಮಿಗಳು ಘನಮಠೇಶರಿಗೆ ಏನು ಮಹಾತ್ಮಾ ನಮ್ಮನ್ನೇಕೆ ನಿಲುಕಲಾರದ ಅಟ್ಟಕ್ಕೇರಿಸುವೆ ನಾನು ಸ್ವಾಮಿ ನಾನು ದೊಡ್ಡವನು ಎಂಬ ಹಮ್ಮಿನಿಂದ ಬಿಮ್ಮನೇ ಬಿರಿಯುವ ನಮ್ಮಂಥವರಿಗೆಲ್ಲಾದರೂ ಶಿವತತ್ವವು ಸಾಧ್ಯವಾಗ ಬಹುದೇ ಹಿಂದಕ್ಕೆ ಇದೇ ಮಠದಲ್ಲಿ ವೀರ ವಿರತರೆನಿಸಿ ನಿರಂಜನ ನಿರಾಭಾರಿಗಳೆಂಬ ಶಬ್ದಗಳಂದೆ ಅಕ್ಷರಶಃ ನಡೆದು ನಿಜವಾದ ವಿರತಿಭಾವದಿಂದ ನೆಲದ ಜನರಿಗೆ ಮಹಾ ಮಹಿಮೆಗಳನ್ನು ತೋರಿ

ಭಕ್ತರ ಬಯಕೆಗಳನ್ನು ಪೂರ್ಣಮಾಡಿ ವಿಷಯ ವಿಮುಖರಾಗಿ
ಜೇಷ್ಠಜಿತೇಂದ್ರಿಯರೆನಿಸಿ ಪರಮಲಿಂಗಾನು ಸಂಧಾನ ಸುಖದಲ್ಲಿಯೇ
ಲೋಲುಪ್ತರಾಗಿ ಅನ್ಯರಿಂದ ಆವುದನ್ನೂ ಅಪೇಕ್ಷಿಸದೆ ಆರಾದರೂ
ಭಕ್ತರು ಭಕ್ತಿಯಿಂದ ಪಾದಗಾಣಿಕೆಯನ್ನು ತಮ್ಮ ಸನ್ನಿಧಿಯಲ್ಲಿ
ತಂದಿಟ್ಟರೆ ಶಿವಶಿವಾ ಸಂಸಾರ ರಹಿತರಾಗಿ ಸನ್ಯಾಸಿಗಳಾದ ನಮ್ಮ
ಗೇಕ ಈ ಒಡವೆಗಳ ದರ್ಶನವೆಂದು ತಮ್ಮ ಕೈಗೋಲಿನಿಂದ ಮುಂದಿಟ್ಟ
ವಸ್ತುಗಳನ್ನು ದೂರ ಚಿಮ್ಮುತ್ತ ನಿರಾಶಾವಾದಿಗಳೆಂದು ಪ್ರಸಿದ್ಧರಾದ
ನಮ್ಮ ಪೂರ್ವದ ಶಿದ್ಧಲಿಂಗ ಸ್ವಾಮಿಗಳೆಂಬವರು ಪ್ರಸಿದ್ಧರಾಗಿ ಹೋಗಿದ್ದಾರೆ

ಅವರ ಸಂಪ್ರದಾಯಿಗಳಾದ ನಾವು ಅವರ ಆಶೀರ್ವಾದ
ಬಲದಿಂದಲೇ ಈ ಮಠದಲ್ಲಿದ್ದೇವೆ. ಹಿಂದಿನ ಸ್ವಾಮಿಗಳ ನಿರಾಶಾಮಯ
ಮಹಿಮೆಗಳನಂತವಿದ್ದರೂ ಅವೆಲ್ಲವುಗಳಲ್ಲಿ ಈಗ್ಯೂ ಈ ಮಠದಲ್ಲಿ ಪ್ರಸಿ
ದ್ಧವಾಗಿ ಮೆರೆಯುವ ಈ ಕಬ್ಬಿಣದ ದೊಡ್ಡ ಧೂಪಾರತಿಯೇ ಸಾಕ್ಷಿ
ಯಾಗಿದೆ. ಸ್ವಾಮಿಗಳ ಕಾಲಕ್ಕೆ ಮರಿಚೇಡ ಗ್ರಾಮದಲ್ಲಿ ವಿರುಪಾಕ್ಷ
ರಾಯನೆಂಬ ದೇಸಾಯಿಯು ಸಕಲ ಸಂಪತ್ತಿನಿಂದಿರುತ್ತಿರಲು ಶಿದ್ಧ
ಲಿಂಗ ದೇವರಲ್ಲಿ ಭಕ್ತಿಯುಕ್ತನಾಗಿ ದರ್ಶನಾಪೇಕ್ಷೆಯಿಂದ ಮಠಕ್ಕೆ ಬಂದು
ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತಾನು ತಂದ ಭಂಗಾರದ
ಆಭರಣಗಳನ್ನು ಅವರ ಮುಂದೆ ಇಡಲು ಸ್ವಾಮಿಗಳು ಸಿಟ್ಟಿಗೆದ್ದು
ಎಲೋ ಮಣ್ಣಿಗೆ ಸಮವಾದ ಈ ಮಣಿ ಹೇಪಾಟಗಳನ್ನು ಆಶಾರಹಿತ
ರಾದ ನಾವೇನು ಮಾಡಬೇಕು. ಎಂದು ತಮ್ಮ ಕರದಲ್ಲಿದ್ದ ಬೆತ್ತದಿಂದ
ತಮ್ಮ ಕಣ್ಣಿಗೆ ಕಾಣದಂತೆ ದೂರ ದಬ್ಬಿ ವಿರುಪಾಕ್ಷರಾಯನಿಗೆ ಎಲೋ
ಮೂರ್ಖಾ ಮನೆ ಮನೆಗೆ ಬಂದು ಯಾಚಿಸುವ ಯಾಚಕರಿಗೆ
ಏನೊಂದೂ ಕೊಡಲಾರದ ನೀವು ಬೇಡುವದನ್ನು ಬಿಟ್ಟು ರುದ್ರಭೂಮಿ
ಯಲ್ಲಿ ಮಠ ಕೊಟ್ಟುಕೊಂಡು ನಾವು ಕುಳಿತರೂ ಇದ್ದಲ್ಲಿಗೆ ಬಂದು ಇಲ್ಲಿಲ್ಲದ
ಆಶೆ ಹುಟ್ಟಿಸುವಿಯಾ ಎಂದು ದೇಸಾಯಿಯನ್ನು ಜರಿಯಲು ಮರಿಚೇಡದ
ಮಂದಮತಿಯಾದ ವಿರುಪಾಕ್ಷರಾಯನು ಥರ ಥರನೆ ನಡುಗುತ್ತ ಬುದ್ಧಿ
ನನ್ನ ಕೃತಾಪರಾಧವನ್ನು ಕ್ಷಮಿಸಿ ತಮ್ಮ ಮಠಕ್ಕೆ ಯಾವ ಪದಾರ್ಥವ

ತನ್ನಿಂದ ಸಲ್ಲಿಸಲು ಯೋಗ್ಯವದೆ ಅದನ್ನಾದರೂ ಅರುಹಿ ನನ್ನ ಅಜ್ಞಾನವನ್ನು ದೂರಮಾಡಿರಿ.

ಎಂದು ಮತ್ತೆ ಮಹಾತ್ಮರೆದುರು ಮಣಿಯಲು ಸ್ವಾಮಿಗಳು ಶಾಂತರಾಗಿ ಒಳ್ಳೇದು ದೇಸಾಯಿ ನಿನ್ನ ಅಪೇಕ್ಷೆಹಾಗಿದ್ದರೆ ಸುಗಂಧ ಪ್ರಿಯನಾದ ಶಿವನಿಗೆ ಸದ್ವಾಸನೆಯನ್ನು ಅರ್ಪಿಸಲು ಅಗ್ನಿಯನ್ನು ತರಲಿಕ್ಕೆ ಧೂಪಾರತಿ ಮಾತ್ರ ಯೋಗ್ಯವಾಗುತ್ತದೆ. ಆದರೆ ಅದನ್ನು ನೀನು ಬೆಲೆಬಾಳುವ ಬೆಳ್ಳಿ ಭಂಗಾರದಿಂದ ಮಾಡಿಸಿದೆ ಯಾವ ಕಾಲಕ್ಕೂ ಯಾರೂ ಅಪೇಕ್ಷೆ ಮಾಡದಂಥ ಲೋಹದಿಂದ ಮಾಡಿದ ದೊಡ್ಡ ಧೂಪಾರತಿಯನ್ನು ಮಾತ್ರ ಮಠಕ್ಕೆ ತಂದು ಕೊಡಬಹುದು.

ಎಂದು ಅಜ್ಞಾಪಿಸಲು ಅದಕ್ಕೆ ಅವನು ಆನಂದ ಮನಸ್ಕನಾಗಿ ಅಂದು ತಂದು ಅರ್ಪಿಸಿದ ಧೂಪಾರತಿಯು ಇಂದಿಗೂ ಮಠದಲ್ಲಿ ಮೆರೆಯುತ್ತದೆ. ನಿರಾಶಾಮಯರಾದ ಅಂಥವರಿಗೇನೆ ನಿರಂಜನ ನಿರಾಭಾರಿಗಳೆಂದು ಹೇಳಲು ಯೋಗ್ಯವೆನಿಸುತ್ತದೆ. ಸುಮ್ಮನೇ ಅಂಥವರ ಅಂಶ ಹಿಡಿದು ಅವರ ಮಠದಲ್ಲಿ ನಾಮಧಾರೀ ವಿರಕ್ತರಾದ ನಮ್ಮಂಥವರಿಗೆಲ್ಲಾ ಯದರೂ ವಿರತಿ ಶಬ್ದವು ಯೋಗ್ಯವಾಗಬಹುದೇ ಸಂಸಾರಿಗಳಾದರೂ ಸಂಸಾರಕ್ಕೆ ನೀರುಬಿಟ್ಟು ನಿಜವಾದ ವಿರತರಿಗೂ ವಶವಾಗದ ವೈರಾಗ್ಯದಿಂದ ವಿಶ್ವದಲ್ಲಿ ವ್ಯವಹರಿಸುವ ತಾವು ಸಾಮಾನ್ಯರೇ ನಿಜವಾದ ವಿರತಿಭಾವವು ಮಾನವನಲ್ಲಿ ಉತ್ಪನ್ನವಾಗಬೇಕಾದರೆ ಪೂರ್ವ ಜನ್ಮದ ಪುಣ್ಯ ಪ್ರಭಲವಾಗಿರಬೇಕು. ತಮ್ಮಂಥವರಿಂದಲೇ ಅಹರ್ನಿಶೆಗಳುಂಟಾಗಿ ಜಗದ್ವ್ಯಾಪಾರ ನಡೆಯುತ್ತದೆ.

ಈ ಪ್ರಕಾರ ಶಿದ್ಧಲಿಂಗಸ್ವಾಮಿಗಳು ತಮ್ಮ ಪೂರ್ವದ ಸ್ವಾಮಿಗಳ ಪವಾಡಗಳನ್ನು ಘನಮಠೇಶರ ಮುಂದೆ ಪ್ರಶಂಶಿಸುತ್ತಿರಲು ಶಾಂತವೀರಪ್ಪ ಗೌಡನು ಸಾವಧಾನವಾಗಿ ಎದ್ದು ಈರ್ವರಿಗೆ ಕೈ ಜೋಡಿಸಿ ಶಿವಾರ್ಚನೆಗೆ ಸಮಯವಾಗಿದೆ ಎಂದು ಪ್ರಾರ್ಥಿಸಲು ಗೌಡನ ಪ್ರಾರ್ಥನಾನುಸಾರ ಉಭಯ ಶಿವಯೋಗಿಗಳು ಆತ್ಮಾನುಭವದಿಂದ ಅಭವ

ಚಿಂತನ ಮಾಡುತ್ತ ಶಿವಲಿಂಗಾರ್ಚನಾದಿ ಸತ್ಕ್ರಿಯೆಗಳನ್ನು ಪೂರೈಸಿ ಕೊಂಡು ನಂತರ ಲಿಂಗಾಂಗ ಸಾಮರಸ್ಯ ಜ್ಞಾನಬೋಧಕಗಳಾದ ಬಸವಾದಿ ಶಿವಶರಣರ ವಚನಸಾಹಿತ್ಯದಿಂದ ಸಮಯವನ್ನು ಸವೆಯಿ ಸುತ್ತ ಕೈಲಾಸದಲ್ಲಿ ಶಿವಷಡಾನನರ ಸಂಗಮದಂತೆ ಉಭಯ ಶಿವ ಯೋಗಿಗಳ ಸಂಗಮವಾಗಿ ಶ್ರವಣ ಮನನನಿಧಿಧ್ಯಾಸನಾದಿಗಳಲ್ಲಿಯೇ ಹತ್ತೆಂಟು ದಿವಸಗಳು ಗತಿಸಿರಲು ಆಕಸ್ಮಾತ್ ಅಲ್ಲಿಗೆ ಲಿಂಗಾಂಗ ಸಾಮರಸ್ಯದ ರಹಸ್ಯವನ್ನು ಬಲ್ಲವರೂ ಜೀವಭಾವನೆಯಳಿದು ಶಿವಾನು ಭವಿಗಳಾಗಿ ಸದಾ ಸತ್ಕ್ರಿಯೆಗಳಾದ ಷಟಸ್ಥಲ ಮಾರ್ಗದ ಮರ್ಮವನ್ನು ತಿಳಿದು ಅಂತರಂಗ ಬಹಿರಂಗ ಭಾವನೆಗಳನ್ನೆಲ್ಲ ಬಯಲು ಮಾಡಿ ಸದಾ ಸಚ್ಚಿದಾನಂದ ಸ್ವರೂಪರಾದ ಷಂಸಾಬಾದಿಮಠದ ನಿರಂಜನ ನಿರಾಭಾರಿ ಗಳಾದ ವಿರತಿಯಲ್ಲಿ ವಿಖ್ಯಾತರಾದ ಚನ್ನಬಸವ ಸ್ವಾಮಿಗಳ ಶುಭಾಗ ಮನವಾಯಿತು.

ಅದೇ ಅಧ್ಯಾತ್ಮ ಚಿಂತನೆಯಲ್ಲಿದ್ದ ಶಿದ್ಧಲಿಂಗಸ್ವಾಮಿಗಳು ಘನ ಮಠೇಶರು ಮತ್ತು ಶಾಂತವೀರಪ್ಪಗೌಡ ಈ ಮೂವರು ಮಹದರ್ಷಿತ ರಾಗಿ ತಮ್ಮ ಸ್ಥಾನದಿಂದೆದ್ದು ಬಂದ ಯತೀಶ್ವರರನ್ನು ಆದರ ಪೂರ್ವಕ ವಾಗಿ ಸ್ವಾಗತಿಸಿ ಉಚಿತಾಸನದಲ್ಲಿ ಅವರನ್ನು ಕುಳ್ಳಿರಿಸಿ ಅಭಿವಂದನಾ ದಿಗಳನರ್ಪಿಸಿ ಸಕಲರೂ ತಮ್ಮ ಆಸನದಲ್ಲಿ ಆಸೀನರಾದನಂತರ ಶಾಂತ ವೀರಪ್ಪ ಗೌಡನು ಸಾ ವ ಧಾ ನ ದಿಂ ದ ಚನ್ನಬಸವ ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಪೂಜ್ಯರೆ ಕಾಮಿತಾರ್ಥವನ್ನು ಕೊಡುವ ಕಲ್ಪವೃಕ್ಷವಿರುವ ನಂದನವನಕ್ಕೆ ಕಾಮಧೇನು ಬಂದಂತೆ ತಮ್ಮ ಶುಭಾಗ ಮನವಾಯಿತು. ಸದ್ಯಕ್ಕೆ ಶಿವಾರ್ಚನೆಯನ್ನು ಮುಗಿಸಿಕೊಳ್ಳಿರಿ. ಎಂದು ವಿನಂತಿ ಮಾಡಿಕೊಳ್ಳಲು ಗೌಡನ ಪ್ರಾರ್ಥನೆಯ ಮೇರೆಗೆ ತ್ರಿಮೂರ್ತಿ ಸಮ ರಾದ ಶಿವಯೋಗಿತ್ರಯರು ಸ್ನಾನಾದಿ ಕಾರ್ಯಗಳನ್ನು ಮುಗಿಸಿ ಲಿಂಗಾರ್ಚನಾನಂತರ ಪದ್ಧತಿ ಪ್ರಕಾರ ಭಕ್ತ ಮಹೇಶರೆಂಬ ಭಾವನೆ ಯಳಿದು ಪಾದೋದಕ ಪ್ರಸಾದದಿಂದ ಅಷ್ಟಾವರ್ಣದ ಪರಿಪೂರ್ಣತೆ ಗೊಳಿಸಿ ಸರ್ವರೂ ಸುಖಾಸೀನರಾಗಿ ಮಠದಲ್ಲಿ ಕುಳಿತಿರಲು ಪಾದೋ

ದಕದ ವಿಚಾರವಾಗಿ ಘನಮಠೇಶರು ವೀರಶೈವಾಚಾರ ಪದ್ಧತಿಗನುಸ
ರಿಸಿ ಭಕ್ತ ಮಾಹೇಶ್ವರರ ಕ್ರಿಯಾರೂಪದಿಂದುತ್ಪನ್ನವಾದ ಕ್ರಿಯಾ
ಪಾದೋದಕವನ್ನು ಗ್ರಹಿಸಲು ಸತಿ ಪತಿಗಳ ಸಾಮರಸ್ಯದಂತೆ ಗುರು
ಶಿಷ್ಯರೀರ್ವರೇ ಯೋಗ್ಯರಲ್ಲದೆ ಕ್ರಿಯಾಜ್ಞಾನರಹಿತರಾದ ಮಂದಮತಿ
ಮಾನವರು ಪವಿತ್ರವಾದ ಪಾದೋದಕವನ್ನು ಪಡೆಯಲು ಪಾತ್ರರಲ್ಲ
ವೆಂದು ಪುರಾಣ ಪ್ರಸಿದ್ಧವಿದ್ದರೂ (ಯೋಗಾದ್ರೂಢಿಬಲೀಯಸೀ)
ಎಂಬಂತೆ ಸಂಪ್ರದಾಯವೇ ಶಾಸ್ತ್ರ ವಿರುದ್ಧ ಸಾಗಿದೆ. ಸುಜ್ಞಾನಿಗಳಾದ
ತಮ್ಮಂಥ ಶಿವಯೋಗಿಗಳೂ ಸಹ ರೂಢಿಯನ್ನೇ ಅನುಸರಿಸಬೇಕೆ
ಎಂದು ಮಾತಿಗಾರಂಭಿಸಲು ಚನ್ನಬಸವ ಸ್ವಾಮಿಗಳು ಹಾಗಲ್ಲ ಘನ
ಮಠೇಶರೇ ನೀವನ್ನುವಂತೆ ಭಕ್ತಜಂಗಮರೀರ್ವರೇ ಪಾದೋದಕ ಪಡೆ
ಯಲು ಅರ್ಹರೆಂದು ಶಿವಭಕ್ತರಾಗಿ ಪಂಗ್ತಿ ಭೇದ ಮಾಡಿದ ಪಾಪಕ್ಕೆ
ಬಾಧ್ಯರಾಗುವದಿಲ್ಲವೇ ಕಾಗೆ ಕೋಳಿಗಳೂ ಸಹ ತಮ್ಮ ಕುಲವನ್ನೆಲ್ಲ
ಕೂಡಿಕೊಂಡು ಸಹಕರಿಸುವಾಗ ಶಿವಭಕ್ತರಾಗಿ ಪಾದೋದಕ ಪ್ರಸಾ
ದಾದಿ ಸಮಯಕ್ಕೆ ಭಕ್ತರಲ್ಲಿ ಭೇದವೆಣಿಸಬಹುದೇ. ಬಸವಾದಿ ಶಿವ
ಶರಣರ ವಚನಕ್ಕೆ ಭಂಗ ಬರುವದಿಲ್ಲವೇ ಆಕಳು ತನ್ನ ಕರುವಿಗಾಗಿ
ಹಾಲು ಕೊಟ್ಟರೂ ಇತರರೂ ಸಹ ಆ ಹಾಲನ್ನು ಉಪಯೋಗಿಸಿ ತೃಪ್ತ
ರಾಗುವಂತೆ ಜಗದುಪಕಾರಾರ್ಥವಾಗಿ ಜಂಗಮನಿಂದುತ್ಪನ್ನವಾದ
ಪದಾಂಬುವನ್ನು ಪಡೆಯಲು ಭಕ್ತಮಹೇಶ್ವರರೆಲ್ಲ ಬಾಧ್ಯರೇ ಇರುತ್ತಾರೆ.

ವೀರಶೈವ ಮತದ ಮೋಲ್ಮಟ್ಟವನ್ನು ಹತ್ತಬೇಕಾದರೆ ಭಕ್ತಮಾಹೇ
ಶ್ವರರೀರ್ವರೂ ಮತತತ್ವದಂತೆ ಪಂಚಾಚಾರ ಅಷ್ಟಾವರಣಗಳನ್ನು ಪರಿ
ಪಾಲಿಸುತ್ತ ಮೋಕ್ಷಮಂದಿರವನ್ನು ಪ್ರವೇಶಿಸಲು ಭಕ್ತಿಯಿಂದ ಮೋಕ್ಷಕ್ಕೆ
ಮೂಲಸಾಧನಗಳಾದ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ
ಐಕ್ಯ ಎಂಬ ಆರು ಪಾವಟಿಗೆಗಳನ್ನು ಕ್ರಮವಾಗಿ ಒಂದೊಂದೆ ಹತ್ತು
ತ್ತಹೋದರೆ ಮುಕ್ತಿಮಂದಿರವನ್ನು ಮಾನವನು ಜೀವಭಾವನೆಯಳಿದು
ತಾನೇ ಶಿವನಾಗಿ ಪರಮಾತ್ಮನ ಪಾದಾರವಿಂದಗಳನ್ನು ಸೇರಲು
ಯೋಗ್ಯನಾಗುತ್ತಾನೆ.

ಮರ್ತ್ಯದಲ್ಲಿ ಮಾನವನು ಮುಕ್ತಿಯನ್ನು ಪಡೆಯಲು ಬರೇ ಜ್ಞಾನವಂದೇ ಸಾಲದು ಅಂತರಂಗದ ಶುದ್ಧಿಗಾಗಿ ಬಹಿರಂಗದಲ್ಲಿ ನೀತಿ ಕ್ರಿಯಾಚಾರದಂತೆ ನಡೆಯುವದೇ ಶಾಸ್ತ್ರಸಮ್ಮತವಾದದ್ದು. ಕ್ರಿಯಾದಿಗಳಿಂದ ಪರಿಶುದ್ಧನಾದ ಮಾನವನಿಗೆ ಹುಳಿಯಿಂದ ಕೂಡಿದ ಮೊಸರಿನಲ್ಲಿ ಮಂಥನಾದಿ ಕ್ರಿಯೆಯಿಂದ ಹೇಗೆ ಅಮೃತಕ್ಕೆ ಸಮವಾದ ಘೃತವು ಹೊರಡುವಂತೆ ನೀತಿ ಕ್ರಿಯಾ ಮೊದಲಾದ ಶುದ್ಧಾಚರಣೆಗಳಿಂದ ಪವಿತ್ರವಾದ ಜ್ಞಾನವು ಉತ್ಪನ್ನವಾಗಿ ಮಾನವನಿಗೆ ಮೋಕ್ಷಮಾರ್ಗವನ್ನು ತೋರಿಸುತ್ತದೆ.

ಎಂದು ಚನಬಸವಸ್ವಾಮಿಗಳು ಘನಮಠೇಶರಿಗೆ ಜ್ಞಾನ ಕ್ರಿಯಾ ಇವೆರಡರಲ್ಲಿ ಜ್ಞಾನದಿಂದಲೇ ಮುಕ್ತಿ ಕ್ರಿಯೆಯಿಂದಲೇ ಮುಕ್ತಿ ಎಂದು ಹೇಳಲು ಬೀಜವೃಕ್ಷ ನ್ಯಾಯದಂತೆ ಭೇದಮಾಡಲು ಬಾರದಾಗಿದೆ ಉಡಿಗೆ ತೊಡಿಗೆಗಳಿಂದ ಮಾನದ ಶರೀರವು ಮಾನದಿಂದ ಹೇಗೆ ಶೋಭಿಸುವದೋ ಮಾನಿನಿಯ ಕೊರಳು ಮಾಂಗಲ್ಯ ವಿಲ್ಲದಿದ್ದರೆ ಹೇಗೆ ಶೋಭಿಸುವದಿಲ್ಲವೋ ಹಾಗೆಯೇ ಕ್ರಿಯಾರಹಿತವಾದ ಜ್ಞಾನವು ಕತ್ತಲೆಯಲ್ಲಿ ಕೈಯಾಡಿಸಿದರೆ ಕಳೆದ ವಸ್ತುವೇನಾದರೂ ಸಿಗಬಹುದೇ ಈ ಪ್ರಕಾರ ಜ್ಞಾನ ಕ್ರಿಯೆಗಳ ವಿವರಣೆಯನ್ನು ಮಾಡುತ್ತಿರಲು ಘನಮಠೇಶರು ಚನ್ನಬಸವ ಸ್ವಾಮಿಗಳಿಗೆ ಸ್ವಾಮಿ ನಾನು ಕ್ರಿಯಾದಿಗಳನ್ನು ಹೀಯಾಳಿಸುವದಿಲ್ಲ ಜ್ಞಾನ ಸಮೃದ್ಧಿಯಿಂದ ನಿತ್ಯಾನಂದನಾಗಿ ನಿಜಸ್ವರೂಪವನ್ನು ತಿಳಿದ ಜ್ಞಾನಿಗೆ ಕರ್ಮಾಚರಣೆಯಿಂದ ಸಿಗತಕ್ಕ ಫಲವಾದರೂ ಏನು (ಶ್ರೇಯೋಸ್ತು ಇತರೇಜನಾಃ) ಎಂಬ ಗೀತೋಕ್ತಿಯಂತೆ ಮರ್ತ್ಯದ ಮಂದಮಾನವರಿಗೆ ಮಾರ್ಗ ದರ್ಶನ ಮಾಡಿಕೊಡುವದಕ್ಕಾಗಿಯೇ ಸುಜ್ಞಾನಿಗಳಾದ ಸತ್ಪುರುಷರು ಪರೋಪಕಾರಿ ಬುದ್ಧಿಯಿಂದ ತಮ್ಮ ಆಚರಣೆಯಂತೆ ಅನುಸರಿಸಿ ಅಜ್ಞಾನಿಗಳು ಆಚರಿಸಲೆಂಬ ಸದುದ್ದೇಶದಿಂದಲೇ ಕ್ರಿಯಾಬದ್ಧರಾಗಿ ನಡೆಯುವರು. ತಾಯಿಯು ತಾನು ದೇಹದಿಂದ ಸದೃಢಳಾಗಿ ಆರೋಗ್ಯಸ್ಥಿತಿಯಲ್ಲಿದ್ದರೂ ತನ್ನ ಕೂಸಿಗೆ ಯಾವ ರೋಗಾದಿಗಳು ಬರಬಾರದೆಂಬ ಸದ್ಭಾವನೆಯಿಂದ ಪಥ್ಯಾಹಾರವನ್ನು

ಹೇಗೆ ಸೇವಿಸುವಳೋ ಹಾಗೆಯೇ ಮಹನೀಯರಾದ ಶಿವಜ್ಞಾನಿಗಳು ತಮಗವಶ್ಯವಲ್ಲದಿದ್ದರೂ ಜಗದ್ಧಿತಾರ್ಥವಾಗಿಯೇ ಸತ್ಕ್ರಿಯಾವಂತರಹರು ನಿಷ್ಕಾಮ ಪೂಜಾ ಧುರಂಧರರೆನಿಸಿದ ವೀರಶೈವರಿಗೆ ಕರ್ಮಾಚರಣೆಯಿಂದ ಫಲವೇನು ಪರಮಾತ್ಮನ ಪಾದಾರವಿಂದವನ್ನು ಸೇರಲು ಜ್ಞಾನವೊಂದಿದ್ದರೆ ಸಾಕು. ವಿಚಾರಿಗಳಾದ ತಮ್ಮಲ್ಲಿ ವಿಶೇಷ ಹೇಳುವದರಿಂದೇನು ಪ್ರಯೋಜನವೆಂದು ಘನಮಠೇಶರು ನುಡಿದರು.

ನೀರಡಗುಂಭದ ಮಠದ ಶಿದ್ಧಲಿಂಗಸ್ವಾಮಿಗಳು ಪೂಜ್ಯರೇ ನಿಮ್ಮಿರ್ವರಲ್ಲಿ ಯಾರ ಅಭಿಪ್ರಾಯವೂ ವ್ಯರ್ಥವಾದದ್ದಲ್ಲ. ಮರ್ತ್ಯರಾದ ನಮಗೆ ಶಿವಸನ್ನಿಧಿಗೆ ಸೇರಲು ಜ್ಞಾನಕ್ರಿಯೆಗಳೆರಡೂ ಬೇಕೇಬೇಕು.

ಒಂದೇ ಪಕ್ಷದಿಂದ ಪಕ್ಷಿಯು ಆಕಾಶದಲ್ಲಿ ಹೇಗೆ ಹಾರಾಡಲಾರದೋ ತದ್ವತ್ ಶಿವನೊಳಗೆ ಶಕ್ತಿಯು ಲೀನವಾಗಿರುವಂತೆ ಶಬ್ದದಲ್ಲಿ ಅರ್ಥವು ಅಡಗಿರುವಂತೆ ಜ್ಞಾನವೇ ಶಿವರೂಪು ಕ್ರಿಯಾದಿಗಳೇ ಶಕ್ತಿಯ ರೂಪವಾಗಿ ಭೇದವಿಲ್ಲದೆ ಶಿವಶಕ್ತಿಯರು ಕೂಡಿರ್ಪಂತೆ ಕ್ರಿಯಾ ಜ್ಞಾನಗಳೆರಡೂ ಒಂದನ್ನೊಂದು ಅಗಲದೆ ಮಾನವನಿಂದ ಸದಾ ಪಾಲಿಸತಕ್ಕವುಗಳೇ ಎಂದು ಈಶ್ವರನ್ನು ಸಮಾಧಾನ ಪಡಿಸಲು ಹಟವಾದಿಗಳಾದ ಘನಮಠೇಶ ಚನ್ನ ಬಸವ ಸ್ವಾಮಿಗಳೀರ್ವರು ಒಪ್ಪಿಕೊಳ್ಳದೆ ಈ ವಾದ ಇಲ್ಲಿ ಬಗೆಹರಿಯುವದಿಲ್ಲ ನಾವೂ ನೀವೂ ಕೈಲಾಸಕ್ಕೆ ಹೋಗಿ ಪರಮಶ್ರೇಷ್ಠನಾದ ಪರಶಿವನಿಂಲೇ ಈ ಪ್ರಶ್ನೆಯನ್ನು ಪರಿಹಾರ ಮಾಡಿಕೊಳ್ಳೋಣ ಇದಕ್ಕೆ ಶಾಂತವೀರಪ್ಪ ಗೌಡ ಮತ್ತು ಶಿದ್ಧಲಿಂಗಸ್ವಾಮಿಗಳೀರ್ವರು ಸಾಕ್ಷಿ ಇರಬೇಕೆಂದು ನುಡಿಯಲು ಘನಮಠೇಶರು ಹಾಗೇ ಆಗಲಿ ಸದ್ಭಕ್ತನಾದ ಶಾಂತವೀರಪ್ಪಗೌಡಾ ನೀನು ಆ ಶಿವಸಭೆಗೆ ಸಾಕ್ಷೀಭೂತನಾಗಿ ಬರಲಿಕ್ಕೇಬೇಕು.

ಈ ದಿವಸ ಕೂಡಿದ ನಾಲ್ವರೂ ಪ್ರಮಥಾಳಿಯಿಂದ ಕೂಡಿದ ಪರಶಿವನೋಲಗಕ್ಕೆ ತಪ್ಪದೇ ಬರಲಿಕ್ಕೇಬೇಕು. ಈ ನಾಲ್ವರಲ್ಲಿ ಯಾರೂ ತಪ್ಪಿಸಿಕೊಳ್ಳಲಾಗದು ಎಂದು ಘನಮಠೇಶರಾಡಿದ್ದಕ್ಕೆ ಸರ್ವರೂ

ಒಪ್ಪಿದನಂತರ ಶಾಂತವೀರಪ್ಪ ಗೌಡನು ಅಂತರಂಗದಲ್ಲಿಯೇ ಆಶ್ಚರ್ಯ
ವುಳ್ಳವನಾಗಿ ಇವರೆಂಥ ಮಹಿಮರು ಕೈಲಾಸವೆಲ್ಲಿ ಇವರು ಮಾತಾಡುವ
ಭೂಲೋಕವೆಲ್ಲಿ ಇವರು ತಮ್ಮ ಮಾತಿನ ನಿಷ್ಕರ್ಷೆಯನ್ನು ಕೈಲಾಸ
ನಾಥನೇ ಮಾಡಬೇಕೆಂಬ ಇವರ ಮನಸ್ಸಿನ ಪಂಥವೆಲ್ಲಿ. ಅಬ್ಬಬ್ಬಾ
ಪಾಮರನಾದ ನನ್ನ ಮಂದಮತಿಗೆ ನಿಲುಕದ ವಿಷಯವೆಂದು ಸರ್ವ
ರಿಗೂ ಸಾಷ್ಟಾಂಗ ಹಾಕಿ ಅವರಿಂದ ಅಪ್ಪಣೆ ಪಡೆದು ನಾಸ್ತಿಕರ ನೆಲೆ
ವೀಡಾದ ಈ ಕಲಿಯುಗದಲ್ಲಿಯೂ ಇಂಥ ಮಹಿಮರುಂಟೆಂದು ಶಿವ
ಯೋಗಿಗಳ ಶಿವಶಕ್ತಿಯನ್ನು ಮನದಲ್ಲಿ ಕೊಂಡಾಡುತ್ತ ತನ್ನ ಮಂದಿ
ರಕ್ಕೆ ತೆರಳಿದನು.

ಘನಮಹೇಶರೂ ತಮ್ಮ ಪ್ರವಾಸ ಕಾರ್ಯ ಪ್ರತಿಬಂಧವಾಯಿ
ತೆಂದು ಮನದಲ್ಲಿ ಯೋಚಿಸಿ ಉಭಯ ಸ್ವಾಮಿಗಳ ಅನುಜ್ಞೆಯನ್ನು
ಹೊಂದಿ ಅಭವ ಮಹಿಮೆಯಂ ಭುವನದೊಳು ಬೀರಲು ನೀರಡಗುಂಭ
ದಿಂದ ಮುಂದೆ ಪ್ರಯಾಣ ಮಾಡಿದರು.

**೫ ನೆಯ ಪ್ರಕರಣಂ ಸಮಾಪ್ತಂ**



# ೭ ನೆಯ ಪ್ರಕರಣಂ



ಪದ:_ ಪರಮವೈರಾಗ್ಯದಿಂ ಕರುನಾಡ ಚರಿಸುತ್ತ|
ಹರಮತದ ತತ್ವಗಳ ಭುವನದಲಿಬೀರುತ್ತ|
ಹಿರಿಯರೋಗದಿ ಬಹಳ ಬಳಲುವಾಜಾಲಹಳ್ಳಿಯ
ವೀರಭದ್ರವಿಭುದಂ||
ಕರುಣದಿಂ ತನ್ನ ಕರದಿಂದ ಭಸಿತವ ತೊಡೆದು|
ಪಿರಿದಾದ ರೋಗವಂ ಕಳೆದು ಬಾಡಕೆ ಬಂದು|
ಪರಮ ಹೇರೂರ ಭಕ್ತರ ವಾಂಛೆಯಂ ಗೈದು ನಿಶ್ಚಿಂತೆಯಿಂ|
ನಡೆದನೂ||

ನೀರಡಗುಂಭ ಗ್ರಾಮದಿಂದ ಘನಮಠೇಶರು ಚನ್ನಬಸವ ಸ್ವಾಮಿಗಳಿಗೂ ತಮಗೂ ಶಾಸ್ತ್ರಾರ್ಥವಾಗಿ ನಡೆದ ವಾದದ ವಿಚಾರವು ದೇವಲೋಕದಲ್ಲಿ ದೇವಾಧಿದೇವನಾದ ಮಹಾದೇವನಿಂದಲೇ ನ್ಯಾಯ ನಿರ್ಣಯವಾಗಲೆಂದು ಫಣತೊಟ್ಟ ಪ್ರಸಂಗವು ಪ್ರಪಂಚದ ಕರ್ನಾಟಕದ ಭಾಗದಲ್ಲೆಲ್ಲ ಪ್ರಚಾರವಾಗಿ ನಾಡಿನ ಜನರು ಘನಮಠೇಶರೆಂದರೆ ಮಹಾ ವೈರಾಗ್ಯಮೂರ್ತಿಗಳೆಂದೂ ಶಾಪಾನುಗ್ರಹ ಶಕ್ತರೆಂದೂ ಶಿವ ಧರ್ಮ ಪ್ರಚಾರವೇ ತಮ್ಮ ದಿನಚರಿಯಾದವರೆಂದೂ ನಾನಾಪ್ರಕಾರವಾಗಿ ಆಡಿಕೊಳ್ಳುತ್ತಿರಲು ಘನಮಠೇಶರು ಮಾತ್ರ ಜಗತ್ತಿನ ಸ್ತುತಿ ನಿಂದೆಗಳ ಕಡೆಗೆ ಲಕ್ಷಗೊಡದೇ ಜಗತ್ತಿನ ಜನರನ್ನು ಅರಿಷಡ್ವರ್ಗಾದಿಗಳ ಅಜ್ಞಾನದಿಂದ ದೂರಮಾಡಿ ಮಾನವರ ಮನರಂಜನಾ ಕಾರ್ಯಗಳಲ್ಲಿ ಮನಸ್ಸುಹಾಕದೇ. ಕೇವಲ ನಿರಂಜನ ಮೂರ್ತಿಗಳಾಗಿ ಮುಂದಿನ ನಿರಂಜನ ನಿರಾಭಾರಿಗಳಿಗೆ ಮಾರ್ಗಮಾಡಿ ಕೊಡಲು ಹಿಂದೆ ಬಸವಾದಿ ಪ್ರಮಥರು ವೇದ ಆಗಮ ಉಪನಿಷತ್ ಗರ್ಭಿತವಾದ ವೀರಶೈವ

ಸಿದ್ಧಾಂತವನ್ನು ಮನುಷ್ಯರು ಮಾತಾಡುವ ಮಾತಿನಲ್ಲಿಯೇ ಹೇಗೆ ವಚನಸಾಹಿತ್ಯವನ್ನು ಜಗತ್ತಿಗೆ ಸಲ್ಲಿಸಿದರೋ ಘನಮಠೇಶರಾದರೂ ತಮ್ಮ ಅಮೋಘವಾದ ಕವಿತಾಶಕ್ತಿಯಿಂದ ವೀರಶೈವಾಚಾರ ನೀತಿ ಕ್ರಿಯಾದಿಗಳನ್ನು ಕನ್ನಡದಲ್ಲಿಯೇ ಕವಿತಾರೂಪದಿಂದ ಪದಗಳನ್ನು ರಚಿಸಿ ಸಮಾಜದ ಸರ್ವಬಂಧುಗಳಿಗೆ ಅವನ್ನು ಕಲಿಸಿ ಅವರು ಹಾಡುವ ತಮ್ಮ ಕೃತಿಗಳನ್ನು ಕೇಳಿ ತಾವೂ ಆನಂದಬಡುತ್ತ ಊರೂ ರಿಗೆ ಸಂಚಾರಮಾಡುತ್ತ ಸಾಯಂಕಾಲ ಸಮಯವಾಗಿರಲು ಗೋನ ವಾರವೆಂಬ ಸಣ್ಣಗ್ರಾಮಕ್ಕೆ ಬಂದರು.

ಗ್ರಾಮದ ಮುಂಭಾಗದಲ್ಲಿ ನಿಂತು ಅಲ್ಲಿರುವ ಜನರಿಗೆ ನಿಮ್ಮ ಗ್ರಾಮದಲ್ಲಿ ಮಾಹೇಶ್ವರರ ಮಠಗಳು ಪ್ರವಾಸಿಕರಿಳಿಯಲು ಪ್ರಶಸ್ತ ವಿರುವದೆ ಎಂದು ಪ್ರಶ್ನೆ ಮಾಡಲು ಅದಕ್ಕೆ ಆ ಗೋನವಾರದ ಜನರು ಇವರ ಶಿವಲಾಂಛನಮಯವಾದ ಆಕಾರವನ್ನು ಕಂಡು ಪೂಜ್ಯರೇ ತಮ್ಮ ಅನುಷ್ಠಾನಾದಿಗಳಿಗೆ ಅನುಕೂಲವೆಂದರೆ ಆ ಚಾರ ಮಾರ್ಗವನ್ನರಿತ ಶಿದ್ದಯ್ಯನವರ ಮಠವೇ ತಮಗೆ ಬಹಳ ಅನುಕೂಲವಾದ ಸ್ಥಳ. ತಾವು ಅಲ್ಲಿಗೆ ದಯಮಾಡಿಸಿದರೆ ಯಾವದಕ್ಕೂ ಕೊರತೆಯಾಗಲಾರದು.

ಎಂದು ಶಿವಯೋಗಿಗಳನ್ನು ಶಿವಮೂರ್ತಿ ಶಿದ್ಧಯ್ಯನವರ ಮಠಕ್ಕೆ ಕಳುಹಲು ಘನಮಠೇಶರು ಮಬ್ಬುಗತ್ತಲಾಗಿ ಮಾರ್ಗಕಾಣ ದಿದ್ದರೂ ತಮ್ಮ ಕೈಯೊಳಗಿನ ಕೋಲನ್ನೂರತ್ತ ಮಠದ ಹಿಂದೆ ಹೋಗಿ ನಿಂತಕೂಡಲೇ ಮಠದೊಡೆಯರಾದ ಶಿದ್ದಯ್ಯನವರು ಮಹಾ ವ್ಯಸನಾಕ್ರಾಂತರಾಗಿದ್ದರು ಅದನ್ನು ವ್ಯಕ್ತಮಾಡದೆ ಅಪಚಿರಿತರೆಂದು ತಿರಸ್ಕಾರ ಮಾಡದೆ ಶಿವಯೋಗಿಗಳನ್ನು ಕಂಡಕೂಡಲೇ ಆದರದಿಂದ ಬರಮಾಡಿಕೊಂಡ ಉಚಿತಾಸನದಲ್ಲಿ ಅವರನ್ನು ಕುಳ್ಳಿರಿಸಿ ಬುದ್ಧೀ ಅಕ ಸ್ಮಾತಾಗಿ ಆಗಮಿಸಿದ ತಾವು ಯಾರು ಎಲ್ಲಿಂದ ಬರೋಣವಾಯಿತು ಎಂದು ಪ್ರಶ್ನೆ ಮಾಡಲು ಶಿವಯೋಗಿಗಳು ನಾಗಭೂಷಣರೆಂದು ನಮಗೆ ಅಂಕಿತ ನಾಮವಿದ್ದರೂ ನಾಡಿನ ಭಕ್ತರು ಘನಮಠೇಶರೆಂದೂ ಘನಮಠದ ನಾಗಭೂಷಣರೆಂದೂ ಕರೆಯುವದು ರೂಢಿಯಾಗಿಬಿಟ್ಟದೆ.

ದೇಶದಲ್ಲಿ ಸಂಚಾರಮಾಡಿ ಶಿವಭಕ್ತರ ಆಚರಣೆಗಳನ್ನು ಕಂಡು ಆನಂದಬಡುವದೇ ನಮ್ಮ ದಿನಚರಿಯಾಗಿದೆ. ಆದರೆ ತಮ್ಮ ಮನೆಯನ್ನು ನೋಡಿದರೆ ಎಲ್ಲರೂ ನಿಃಶಬ್ದರಾಗಿ ಯಾವದೋ ಚಿಂತೆಯಿಲ್ಲಿರುವಂತೆ ಕಾಣುತ್ತದೆ ಕಾರಣವೇನೋ ತಿಳಿಯದು ಎಂದು ಕೇಳಲು ಅದಕ್ಕೆ ಶಿದ್ದಯ್ಯನವರು ಮ್ಲಾನವದನರಾಗಿ ಮಹಿಮರೇ ನನಗಾದ ಕಷ್ಟವನ್ನು ಏನೆಂದು ಹೇಳಲಿ ಪಯಸ್ಸಿನಿಂದ ಪ್ರಬುದ್ಧನಾಗಿ ವಿದ್ಯಾಬುದ್ಧಿಯಲ್ಲಿ ಬಲ್ಲಿದನೆನಿಸಿದ ನನ್ನ ಜೇಷ್ಠಪುತ್ರನು ಕೆಲವು ದಿವಸಗಳಿಂದ ಬೇನೆಬಿದ್ದು ಬಂದ ಬೇನೆ ಬಯಲಾಗವೆ ಇಂದೇ ಆತನು ಶಿವಾಧೀನನಾದನು. ಆತನ ಶವ ಸಂಸ್ಕಾರಗೊಳಿಸಿ ಬಂದು ಈಗೆರಡು ತಾಸು ಆಗಿರಬಹದು ಶಿವನ ಮನಸ್ಸಿಗೆ ಬಾರದ್ದಕ್ಕೆ ನಾವು ಮಾಡುವದಾದರೂ ಏನು ಎಂದು ಹೇಳಿದರು.

ಘನಮಠೇಶರು ಆಗಲಿ ಶಿದ್ದಯ್ಯನವರೇ ಎಲ್ಲವೂ ಶಿವಾಧೀನವಾಗಿರುವಾಗ ಮನುಷ್ಯಮಾತ್ರರಾದ ನಮ್ಮಿಂದ ಆಗತಕ್ಕ ಕಾರ್ಯವಾದರೂ ಏನು (ಈಶ್ವರೀಚ್ಛಾಗರೀಯಿಸಿ) ಎಂಬ ನೇಮದಂತೆ ಯಾವ ಕಾಲಕ್ಕೆ ಎನೂ ಆಗಬೇಕೋ ಅದು ಆಗೇತೀರುತ್ತದೆ. ಜನನ ಮರಣಗಳಿಂದ ಕೂಡಿದ ಈ ಪ್ರಪಂಚದಲ್ಲಿ ಸುಖಃದುಖುಗಳು ಮೇಲಿಂದಮೇಲೆ ಬರತಕ್ಕವುಗಳೇ ಸುಖದುಃಖಗಳೆರಡರಲ್ಲಿಯೂ ಸಮಾನ ಭಾವದಿಂದಿರುವದೇ ಸುಜ್ಞಾನಿಗಳ ಕರ್ತವ್ಯ ಬಂದ ದುಃಖವನ್ನು ಕಳೆದುಕೊಳ್ಳುವದೂ ಇದ್ದ ಸುಖವನ್ನು ಶಾಶ್ವತವಾಗಿ ಉಳಿಸಿಕೊಳ್ಳುವದೂ ನಮ್ಮ ಕೈಯಲ್ಲಿಲ್ಲ ಅಂದಮೇಲೆ ಕಷ್ಟ ಬಂದರೆ ಕಳವಳಪಡುವದೇಕೆ ಸುಖ ಬಂದಲ್ಲಿ ಹಿಗ್ಗುವದೇಕೆ ಸುಖ ದುಖಃಗಳೆರಡೂ ಶಿವನಾಧೀನವಾಗಿವೆ.

ಈ ಪ್ರಪಂಚದಲ್ಲಿ ಶಿವನೆಚ್ಛೆ ಇಲ್ಲದೆ ಒಂದು ಕಡ್ಡಿಯುಕೂಡಾ ಕದಲುವಂತಿಲ್ಲ ಅಂದಮೇಲೆ ಸುಖಕ್ಕೂ ದುಃಖಕ್ಕೂ ಪರಮಾತ್ಮನ ಪ್ರೇಮವೇ ಕಾರಣವಾದಂತಾಗಲಿಲ್ಲವೇ ಪ್ರಪಂಚಿಕರಾದ ನಾವು ನಮ್ಮ ಈ ಅನಿತ್ಯವಾಡ ಸಂಸಾರದಲ್ಲಿ ಶಾಶ್ವತವಾದ ಸುಖವನ್ನು ಬಯಸು

ವದಾದರೆ ನಮ್ಮ ಪೂರ್ವಜರಾದ ಬಸವಾದಿ ಶಿವಶರಣರ ನುಡಿಯಂತೆ
ನಡೆದು ಶಿವಪ್ರೇಮಕ್ಕೆ ಪಾತ್ರರಾಗುವದೇ ಮಾನವ ಜನ್ಮದ ಮುಖ್ಯತ್ವ
ವೆಂಬುದನ್ನು ಮರೆತು ಅಜ್ಞಾನಿಗಳಂತೆ ನೀವೂ ಸಹ ಅನಿತ್ಯವಾದ ಅಶಾ
ಶ್ವತವಾದ ಅಲ್ಪ ಸುಖಕ್ಕೆ ಆಶೆಬಿದ್ದು ಹಲುಬಿದರೆ ಮಹತ್ತರವಾದ
ಮಾನವ ಜನ್ಮವನ್ನು ಕಳೆದುಕೊಂಡು ಮತ್ತೂ ಭವಭವಾಂತರ ಜನನ
ಮರಣಾದಿಗಳಿಗೆ ಆಹುತಿಯಾಗುವದೇ ವಿಚಾರಪರರಾದ ನೀವು ಮಿಂಚಿ
ಹೋದ ಮಗನ ಮರಣಕ್ಕೆ ಚಿಂತಿಸುವದು ಸರ್ವಥಾ ಯೋಗ್ಯವಾಗಲಾ
ರದು ವ್ಯಸನಾಧೀನವಾದ ಮನಸ್ಸಿಗೆ ಶಿವಾರ್ಚನ ಶಿವಭಜನಾದಿಗಳಿಂದ
ಮನದ ಮೈಲಿಗೆಯನ್ನು ತೊಳೆಯುವವೇ ಮಹತ್ತರ ಉಪಾಯವೆಂದು
ಘನಮಠೇಶರ ಸದ್ಬೋಧೆಯನ್ನು ಶಿದ್ಧಯ್ಯನವರು ಕೇಳಿದಾಕ್ಷಣವೇ ಅವರ
ಅಜ್ಞಾನವೆಲ್ಲ ಅಭಾವವಾಗಿ ಮಹಾತ್ಮರೇ ದೂರದಿಂದಲೇ ತಮ್ಮ ಮಹಿ
ಮೆಯನ್ನು ಕೇಳುತ್ತಿದ್ದ ನಮಗೆ ಜಲತೃಷೆಯಿಂದ ಬಳಲುತಿದ್ದ ಹೆಳವನ
ಮುಂದೆ ಗಂಗೆಯು ಧಾರೆಯಾಗಿ ಹರಿದಂತೆ ಅನಾಯಾಸವಾಗಿ ಇದ್ದಲ್ಲಿಗೆ
ಬಂದು ತನ್ನ ದಿವ್ಯ ದರ್ಶನವಿತ್ತದ್ದಕ್ಕೆ ನಾನೇ ಧನ್ಯನು.

ಆರಿಂದಲೂ ನೀಗಲಾರದ ಮಗನ ಮರಣದ ಮಹಾಚಿಂತೆಯು
ತಮ್ಮ ದರ್ಶನಮಾತ್ರವೇ ದೂರಾಗಿ ಮಾನವಜನ್ಮದ ಮುಖ್ಯತ್ವವನ್ನು
ತೋರಿಸಿದಿರಿ ಈಗ ವೇಳೆಯಾಗಿದೆ ಶಿವಾರ್ಚನೆಯನ್ನು ತೀರಿಸಿಕೊಳ್ಳ
ಬೇಕು ಎಂದು ಪ್ರಾರ್ಥಿಸಲು ಶಿದ್ಧಯ್ಯನವರ ಪ್ರಾರ್ಥನೆಯ ಮೇರೆಗೆ
ಶಿವಯೋಗಿಗಳು ಸ್ನಾನಾರ್ಚನೆಗಳನ್ನು ತೀರಿಸಿಕೊಂಡು ತಮ್ಮ ನಿತ್ಯ
ನೇಮದಂತೆ ಭಕ್ತರ ಮನೆಯ ಕಂತೆಭಿಕ್ಷಕ್ಕೆ ಸನ್ನದ್ಧರಾಗಲು ಶಿದ್ಧ
ಯ್ಯನವರು ಸ್ವಾಮೀ ಶಿವನು ಕೊಟ್ಟ ಪ್ರಸಾದವು ಇರುತ್ತಿರಲಾಗಿ
ತಾವು ಯಾವ ವಂಚನೆಮಾಡದೆ ಈ ಭಕ್ತನ ಮನೆಯಲ್ಲಿಯೇ ಪ್ರಸಾದ
ಸ್ವೀಕರಿಸಬೇಕು. ಎಂದು ಆಗ್ರಹಮಾಡಲು ಆವನಿಚ್ಛೆಯನ್ನು ಅಲ್ಲಗ
ಳೆಯದೆ ಅಲ್ಲಿಯೇ ಪ್ರಸಾದ ಮುಗಿಸಿ ನಿತ್ಯವೂ ಮಠದಲ್ಲಿ ತಮ್ಮ ಶಿ
ಪೂಜಾದಿಗಳನ್ನು ಪೂರ್ತಿಗೊಳಿಸಿ ಬಂದ ಭಕ್ತಾದಿಗಳಿಗೆಲ್ಲ ಬಸವ ವ
ನಾಮೃತವನ್ನು ಬೋಧಮಾಡುತ್ತ ನಾಲ್ಕಾರು ದಿವಸಗಳನಂತರ ತಮ

ಸಂಚಾರ ಕಾರ್ಯ ಸ್ಮರಣೆಗೆ ಬಂದು ಅದೇ ಮಠದ ಶಿದ್ದಯ್ಯನವರ ಮಗ ನಾದ ಬಸವಯ್ಯನೆಂಬ ಹುಡುಗನ ಲಕ್ಷಣಾದಿಗಳನ್ನು ಕಂಡು ಈ ಹುಡುಗನು ಶಾಸ್ತ್ರವಿದ್ಯೆಯಲ್ಲಿ ವಿಖ್ಯಾತನಾಗುತ್ತಾನೆ.

ಈತನನ್ನು ಸಂಸ್ಕೃತಾಧ್ಯಯನ ಮಾಡಲು ಬಸವಾಂಶನಾದ ಬಳ್ಳಾರಿಯ ಸಕ್ಕರೆ ಕರಡೆಪ್ಪನವರ ಪಾಠಶಾಲೆಗೆ ಕಳುಹಿಸಿರೆಂದು ಶಿದ್ದಯ್ಯನವರಿಗೆ ಹೇಳಿ ತುಂಗಭದ್ರಾ ನದಿಯನ್ನು ದಾಟಿ ಚಿತ್ರಾಲಿ ಎಂಬ ಗ್ರಾಮದಲ್ಲಿ ವೀರಭದ್ರಪ್ಪನೆಂಬ ಭಕ್ತನು ತನ್ನ ಮನೆಯಲ್ಲಿ ನಡೆಯುವ ಗಣಾರಾಧನೆಯ ನಿಮಿತ್ತ ಘನಮಹೇಶರನ್ನು ಬಹಳ ಆಗ್ರಹದಿಂದ ತನ್ನ ಮನೆಗೆ ಕರೆದುಕೊಂಡು ಹೋದನು. ಇತ್ತ ಗೋನವಾರ ಮಠದ ಶಿದ್ದಯ್ಯನವರ ಮಗನು ಶಿವಯೋಗಿಗಳವರ ಹೇಳಿಕೆಯಂತೆ ಬಳ್ಳಾರಿಯ ಪಾಠಶಾಲೆಯಲ್ಲಿ ನಾಟಕಾಂತ ಸಾಹಿತ್ಯದ ವರೆಗೂ ಅಧ್ಯಯನ ಮಾಡಿ ಪಂಡಿತ ಬಸವಪ್ಪ ಶಾಸ್ತ್ರಿಯೆಂದು ಪ್ರಸಿದ್ಧನಾಗಿ ಸಮೀಪದಲ್ಲಿಯೇ ಶಿವಾಧೀನನಾದ ವಿಷಯ ಅಲ್ಲಿಯ ಜನರಿಂದ ತಿಳಿದುಬರುವದಲ್ಲದೆ ಘನಮಠದ ಶಿವಯೋಗಿಗಳನ್ನು ಅಸಾಮಾನ್ಯ ಮಹಿಮರೆಂದು ಆ ನಾಡಿನ ಜನರು ಇಂದಿಗೂ ಹೊಗಳುತ್ತಾರೆ.

ಶಿವಯೋಗಿಗಳು ರಚಿಸಿದ ಪದಗಳನ್ನು ಬಹುಭಕ್ತಿಯಿಂದ ಹಾಡುತ್ತಾರೆ. ಅಸ್ತು ಚಿತ್ರಾಲಿಯ ವೀರಭದ್ರಪ್ಪನ ಮನೆಯಲ್ಲಿ ನಡೆದ ಗಣಾರಾಧನೆಯಲ್ಲಿ ಪಂಕ್ತಿಭೇದವಂ ಕಂಡು ತಾವು ಊಟಮಾಡದೆ ಕೋಪಿಷ್ಠರಾಗಲು ವೀರಭದ್ರಪ್ಪನು ಥರ ಥರನೆ ನಡುಗಿ ಸ್ವಾಮಿಗಳಿಗೆ ಸಾಷ್ಟಾಂಗಮಾಡಿ ತನ್ನಿಂದ ಏನಾದರೂ ಅಪರಾಧವಾಗಿದ್ದರೆ ಕ್ಷಮಿಸಬೇಕೆಂದು ಪ್ರಾರ್ಥಿಸಲು ಅವನಿಗೆ ಪಂಕ್ತಿಭೇದದ ವಿಚಾರವನ್ನೂ ಅನ್ನ ದಾನದ ಮಹಿಮೆಯನ್ನೂ ತಿಳುಹಿ ಗಣಾರಾಧನೆಯನ್ನು ಪೂರ್ಣಗೊಳಿಸಿ ಶಿವ ಸ್ವರೂಪಿಗಳಾದ ಜಂಗಮರಲ್ಲಿ ಮುಂದಾದರೂ ಇದೇ ಪ್ರಕಾರ ಭಕ್ತಿವಂತನಾಗಿ ಬಾಳೆಂದು ವೀರಭದ್ರಪ್ಪನಿಗೆ ಆಶೀರ್ವದಿಸಿ ಅಲ್ಲಿಂದ ಮುಂದೆ ಪ್ರಯಾಣಮಾಡುತ್ತ ದೇವದುರ್ಗ ತಾಲೂಕಿನಲ್ಲಿರುವ ಜಾಲಿ

ಹಳ್ಳಿ ಗ್ರಾಮಕ್ಕೆ ಬಂದು ಅಲ್ಲಿಯ ಭಕ್ತರಿಂದ ಆ ಗ್ರಾಮದ ವೀರಭದ್ರ ಶಾಸ್ತ್ರಿಗಳೆಂಬವರು ವಿದ್ಯಾ ಸಂಪನ್ನರಾದರೂ ಅವರಿಗೆ ಅಲ್ಪ ವಯಸ್ಸಿನಲ್ಲಿಯೇ ಮಹಾ ರೋಗ ಉತ್ಪನ್ನವಾಗಿ ಅಡ್ಡಾಡಲಿಕ್ಕೆ ಸಹ ಬಾರದಂತಾಗಿ ಧರ್ಮ ವಿದ್ಯಾ ವಿಶಾರದರಾದವರಿಗೆ ಮಹಾ ರೋಗವಾದದ್ದನ್ನು ತಿಳಿದು ತಾವಿದ್ದ ಸ್ಥಾನಕ್ಕೆ ಶಾಸ್ತ್ರಿಗಳನ್ನು ಬರಮಾಡಿಕೊಂಡು ಶಾಸ್ತ್ರಿಗಳೇ ನಿಮ್ಮಿಂದ ಅರವತ್ತುಮೂರು ಮಂದಿ ಪುರಾತನರ ಪುರಾಣವನ್ನು ಬರೆಯಿಸಬೇಕೆಂಬ ಬಯಕೆಯಾಗಿದೆ.

ಎಂದು ಹೇಳಲು ವೀರಭದ್ರಶಾಸ್ತ್ರಿಗಳು ಘನಮಠೇಶರಿಗೆ ಮಹಾತ್ಮರೇ ಮಹಾರೋಗದಿಂದ ಕೈಕಾಲುಗಳು ಬೆರಳುಗಳು ಮೊಂಡಾಗಿ ಕೈಗಳಿಂದ ಲೇಖನಿಯನ್ನು ಸಹ ಹಿಡಿಯಲು ಬಾರದಾಗಿದೆ. ಪುರಾಕೃತ ಪಾಪವಿಶೇಷದಿಂದ ಪ್ರಾಯಶ್ಚಿತ್ತಪಡುವ ನನ್ನಿಂದ ತಮ್ಮ ಅಪೇಕ್ಷೆಯನ್ನು ಪೂರ್ಣ ಮಾಡಲು ಸಾಧ್ಯವೇ ಎಂದು ಹೇಳಲು ಅದಕ್ಕೆ ಘನಮಠೇಶರು ವಿಚಾರಪಡನಾದ ನಿನಗೆ ವಿಶೇಷ ಹೇಳುವದೇನು ಕರ್ಮವಿಶೇಷದಿಂದ ಕಾಯಕ್ಕೆ ಬಂದ ರೋಗಾದಿಗಳು ಕಾಯಜಾರಿಯಾದ ಹರನ ಸೇವೆಯಿಂದಾಗಲಿ ಅಥವಾ ಹರಶರಣರ ಸೇವೆಯಿಂದಲ್ಲದೆ ಮತ್ತೊಂದರಿಂದ ನಾಶವಾಗಲಾರವು ಕಾರಣ ನೀವು ವಿಶ್ವಪ್ರಯತ್ನ ಮಾಡಿ ವಿಶ್ವವಂದ್ಯರಾದ ಪುರಾತನರ ಪುಣ್ಯಚರಿತ್ರೆಯನ್ನು ಬರೆಯಲು ಸತ್ಸಂಕಲ್ಪವುಳ್ಳವನಾಗಿ ಪ್ರಾರಂಭ ಮಾಡು ನಿನಗೆ ಪ್ರಾಪ್ತವಾದ ಬೇನೆಯು ಕ್ರಮೇಣ ತಾನೇ ಕಡಿಮೆಯಾಗಿ, ನಿನ್ನ ಕೀರ್ತಿಯು ಆಚಂದ್ರಾರ್ಕವಾಗಿ ಉಳಿಯುತ್ತದೆ.

ಎಂದು ಘನಮಠೇಶರು ತಮ್ಮ ಬಕುಲದಲ್ಲಿಯ ಭಸ್ಮವನ್ನು ಶಾಸ್ತ್ರಿಗಳ ಅಂಗಾಂಗಕ್ಕೆಲ್ಲಾ ಲೇಪಿಸಿನ ನಿನ್ನ ಮಹರೋಗವೆಲ್ಲಾ ವಾಸಿಯಾಗಿ ನಿನ್ನಿಂದ ಪುರಾತನರ ಪುರಾಣವು ಪೂರ್ತಿಯಾಗಲಿ ಈ ಕಾರ್ಯ ಪೂರೈಸುವವರೆಗೂ ಅನ್ಯ ಕಾರ್ಯಕ್ಕೆ ಕೈ ಹಾಕಲಾರದೆ ಸತ್ಸಂಕಲ್ಪದಿಂದ ಕಾರ್ಯಾರಂಭ ಮಾಡು ಎಂದು ಆಶೀರ್ವದಿಸಲು ಮಹಸೀಯರ ಆಶೀರ್ವಾ

ದವನ್ನು ಹೊಂದಿ ವೀರಭಧ್ರಶಾಸ್ತ್ರಿಗಳು ತಮ್ಮ ಮಠಕ್ಕೆ ಬಂದು ಮಂಗಲ ಸ್ನಾನ ಶಿವಾರ್ಚನೆಯನ್ನು ಮುಗಿಸಿ ಸತ್ಯಸಂಕಲ್ಪ ಉಳ್ಳವರಾಗಿ ಘನ ಮಠೇಶರ ಮಹಿಮೆಯನ್ನು ಮನಸ್ಸಿನಲ್ಲಿ ಕೊಂಡಾಡುತ್ತ ಶುಭಮುಹೂರ್ತದಲ್ಲಿ ಲೇಖನಸಾಮಗ್ರಿಗಳನ್ನು ತೆಗೆದುಕೊಂಡು ಅರವತ್ತ್ತಮೂರು ಮಂದಿ ಪುರಾತನರ ಪುರಾಣದ ಪೀಠಿಕೆಯನ್ನು ಬರೆಯಲು ಪ್ರಾರಂಭಿಸಿದರು.

ಆ ಕ್ಷಣವೇ ಮೊದಲಿನಿಂದಲೂ ಮಹಾ ರೋಗದಿಂದ ಮೊಂಡಾಗಿ ಮಣಿಯಲಾರದ ಬೆರಳುಗಳು ಯಾವ ಬಾಧೆ ಇಲ್ಲದೇ ಸುಸೂತ್ರವಾಗಿ ಕಾರ್ಯರಚನೆಗೆ ಬೇನೆಯ ಪ್ರತಿಭಂಧವಿಲ್ಲದೆ ಪ್ರಬಂಧ ವನ್ನು ಬರೆಯಲಿಕ್ಕೆ ಪ್ರಾರಂಭಮಾಡಿ ತಿರುನೀಲಕಂಠರಾದಿಯಾಗಿ ಒಂದು ತಿಂಗಳಲ್ಲಿ ಅರವತ್ತುಮೂರು ಮಂದಿ ಪುರಾತನರಲ್ಲಿ ನೆರೆಮಿಂಡ ದೇವರ ಚರಿತ್ರೆಯವರೆಗೂ ಪುರಾಣ ಬರಯುವ ಕಾರ್ಯವು ಯಾವ ವಿಘ್ನಾದಿಗಳಿಲ್ಲದೆ ಸಾಗಿರಲು ಶಾಸ್ತ್ರಿಗಳ ಮೈಯೊಳಗಿನ ರೋಗವೆಲ್ಲ ನಿವಾರಣೆಯಾಗಿ ನವಚೈತನ್ಯ ಉತ್ಪನ್ನವಾಗಿರಲು ಶಾಸ್ತ್ರಿಗಳು ಯಾವದೋ ಒಂದು ತಮ್ಮ ಗೃಹಕೃತ್ಯದ ಉದ್ದಿಶ್ಯವಾಗಿ ಪರ ಊರಿಗೆ ಹೋಗುವ ಪ್ರಸಂಗಬರಲು ಊರಿಂದ ಬಂದನಂತರ ಬರೆದರಾಯಿತೆಂದು ಅಲಕ್ಷ್ಯದಿಂದ ಪುರಾಣ ಬರೆಯುವದನ್ನು ನಿಲ್ಲಿಸಿ ಊರಿಗೆ ಪ್ರಯಾಣ ಮಾಡಿದರು.

ಮಹಾತ್ಮಾ ಘನಮಠೇಶರ ವಾಕ್ಯನಿರಾಕರಣೆಯಿಂದಲೋ ತಾವು ಪುರಾತನರ ಪುರಾಣ ಬರೆಯಲು ಮಾಡಿದ ಸಂಕಲ್ಪವು ವಿಕಲ್ಪ ವಾದುದರಿಂದಲೋ ಶಾಸ್ತ್ರಿಗಳಿಗೆ ಹೋದ ಊರಿಂದ ತಿರುಗಿ ಬರುವದ ರೊಳಗಾಗಿ ಲೇಖನಿಯನ್ನು ಹಿಡಿದು ಬರೆಯಲು ಬಾರದಂತೆ ಬೆರಳು ಗಳು ಮೊದಲಿನಂತೆ ಬಾಧೆಯಾಗಿ ಹಗಲಿರಳೂ ಹೃದಯದಲ್ಲಿ ಆಯಾಸ ವಾಗಿ ಬೇನೆಯು ಹೆಚ್ಚಾಗಿ ನರಳಲಿಕ್ಕೆ ಹತ್ತಿದರು. ಪುರಾಣ ಬರೆಯುವ ಪವಿತ್ರ ಕಾರ್ಯವು ಪ್ರತಿಬಂಧವಾಯಿತು.

ಹೀಗಾದದ್ದನ್ನು ತಿಳಿದು ವೀರಭದ್ರ ಶಾಸ್ತ್ರಿಗಳು ನನ್ನ ಅಹಂಕಾರವೇ ನನಗೆ ಮುಳುವಾಯಿತು. ಮಹಾತ್ಮರ ಮಾತನ್ನು ನಿರಾಕರಿಸಿದ್ದಕ್ಕೆ ಸರಿಯಾದ ಪ್ರಾಯಶ್ಚಿತ್ತವಾಯಿತು. ಇನ್ನೇನು ಗತಿ ಎಂದು ಅಲ್ಲಿಯವರೆಗೂ ಬರೆದ ಅರ್ಧ ಪುರಾಣವನ್ನು ತೆಗೆದುಕೊಂಡು ಭಂಡಿಯನ್ನು ಕಟ್ಟಿಕೊಂಡು ದೇಶ ಸಂಚಾರಿಗಳಾದ ಘನಮಠೇಶರು ಯಾವ ಊರಲ್ಲಿರುವರೋ ಎಂದು ಊರೂರಿಗೆ ಕೇಳುತ್ತ ಹೋದ ಜೋದಲ್ಲಿ ಅವರ ಶೋಧ ಮಾಡುತ್ತ ಅಲ್ಲಲ್ಲಿ ತಿರುಗಿ ಅಂತ್ಯಕ್ಕೆ ಬಾಡವೆಂಬ ಗ್ರಾಮದಲ್ಲಿ ಶಿವಯೋಗಿಗಳನ್ನು ಕಂಡು ಪ್ರಾಯಶ್ಚಿತ್ತ ಹೊಂದಿ ತಮ್ಮ ಕೃತಾಪರಾಧವನ್ನು ಒಪ್ಪಿಕೊಂಡು ಇನ್ನು ಮುಂದೆ ಈ ಕೃತಿಯು ಪೂರ್ಣವಾಗುವವರೆಗೂ ಕನಸಿನಲ್ಲಿಯೂ ಸಹ ಅನ್ಯಚಿಂತನೆಯನ್ನೆಣಿಸುವದಿಲ್ಲ ಎಂದು ಘನಮಠೇಶರನ್ನು ಪ್ರಾರ್ಥಿಸಲು ಶಾಸ್ತ್ರಿಗಳ ದೈನ್ಯಾವಸ್ಥೆಯನ್ನು ಕಂಡು ಶಿವಯೋಗಿಗಳು ಕನಿಕರದಿಂದ ನಾವು ಇನ್ನೂ ಕೆಲವು ದಿವಸ ಇದೇ ಮಠದಲ್ಲಿಯೇ ವಾಸವಾಗಿರುತ್ತೇವೆ.

ನೀನು ಪುನಃ ಊರಿಗೆ ಹೋಗಿ ಅರ್ಧಕ್ಕಾದ ಪುರಾತನರ ಪುರಾಣವನ್ನು ಪೂರ್ಣಗೊಳಿಸಿ ಪುನಃ ಇದೇ ಚನ್ನವೀರ ಶಿವಯೋಗಿಗಳ ಮಠಕ್ಕೆ ತಂದು ಮುಟ್ಟಿಸು ಅಂದರೆ ನಿನ್ನ ರೋಗವು ಜನ್ಮಾಂತರದ ವರೆಗೂ ಪುನಃ ನಿನಗೆ ಬರಲಾರದು ಎಂದು ಆಶೀರ್ವದಿಸಿ ಶಾಸ್ತ್ರಿಗಳನ್ನು ಕಳುಹಲು ಮಹಾತ್ಮರ ಅನುಜ್ಞೆಯನ್ನು ಹೊಂದಿ ವೀರಭದ್ರ ಶಾಸ್ತ್ರಿಗಳು ಮುಂದೆ ಒಂದು ತಿಂಗಳಲ್ಲಿಯೇ ಪುರಾತನರ ಪುರಾಣವನ್ನು ಹಗಲಿರುಳೆನ್ನದೆ ಪರಿಶ್ರಮ ಪಟ್ಟು ಸಮಾಪ್ತಗೊಳಿಸಿ ಬಾಡ ಗ್ರಾಮದ ಚನ್ನವೀರ ಸ್ವಾಮಿಗಳಿಗೆ ತಂದು ಅರ್ಪಿಸಿದ ವಿಷಯವು ಮುಸ್ಕಿ ಬಸವಪ್ಪ ಶಾಸ್ತ್ರಿಗಳಿಂದ ರಚಿತವಾದ ಘನಮಠೇಶರ ಪುರಾಣದಲ್ಲಿ ಪ್ರಸಿದ್ಧವಾಗಿದೆ. ಮತ್ತು ಜಾಲಳ್ಳಿ ಗ್ರಾಮದ ಜನರಲ್ಲಿ ಈ ವಿಷಯವು ಇನ್ನೂ ಪ್ರಸಿದ್ಧಿಯಲ್ಲಿದೆ.

ಇತ್ತ ಶ್ರೀ ಘನಮಠೇಶರು ಹೇರೂರ ಗ್ರಾಮದ ಭಕ್ತರ ಬಿನ್ನಹದ ಮೇರೆಗೆ ಅಲ್ಲಿಗೆ ದಯಮಾಡಿಸಲು ಹೇರೂರ ಭಕ್ತರು ಘನಮಠೇಶರನ್ನು

ನಾನಾವಿಧವಾದ ವಾದ್ಯದ ಸಂಭ್ರಮದೊಡನೆ ಇದಿರ್ಗೊಂಡು ಇವರನ್ನು ಉತ್ಸವದೊಡನೆ ಕರೆದುಕೊಂಡು ಹೋಗಬೇಕೆಂದು ಊರಹೊರಗೆ ನಿಂತಿರಲು ಶಿವಯೋಗಿಗಳು ಅವರ ಸರ್ವಸನ್ನಾಹವನ್ನು ಕಂಡು ನೀವು ಮಾಡಿದ ಪ್ರಯತ್ನವು ಪೂರ್ವದಿಂದಲೂ ಪುರುಷತ್ವವಿಲ್ಲದ ಷಂಡನಿಗೆ ಉತ್ತಮ ಕನ್ಯೆಯನ್ನು ತೆಗೆದು ಲಗ್ನ ಮಾಡಿದಂತಾಯಿತು. ಎಲ್ಲವನ್ನೂ ಸಾಕುಮಾಡಿ ಯಾವುದರ ಮೇಲೂ ಆಶೆ ಇಲ್ಲದೆ ಸದಾ ಶಿವಶರಣರ ಸೇವೆಯೇ ಶಿವನ ಸೇವೆಯೆಂದು ತಿರುಗುವ ನಮಗೆ ಮಂಗಲ ವಾದ್ಯಗಳಿಂದ ಮೆರವಣಿಗೆ ತೆಗೆಯುವಿರಾ ಎಂದು ಅವರ ಉತ್ಸವವನ್ನು ನಿರಾಕರಿಸಲು ಸರ್ವಭಕ್ತರು ಬಹಳ ವಿನಯದಿಂದ ಪೂಜ್ಯರೇ ಈ ಸಂಭ್ರಮವು ತಮಗೆ ಬೇಡವಾದರೂ ನಮ್ಮ ಸಲುವಾಗಿಯಾದರೂ ತಾವು ಸಮ್ಮತಿಸಬೇಕೆಂಬ ಅವರ ಅತಿ ಆಗ್ರಹದಂತೆ ಉತ್ಸವದೊಡನೆ ಸಂಭ್ರಮದಿಂದ ಸಾಗಿದರು.

ಆವಾಗ್ಗೆ ನಡೆದ ವಿಚಿತ್ರ ವಿಷಯವೇನಂದರೆ ನಡೆದಿರುವ ವಾದ್ಯರವಕ್ಕೆ ಒಂದು ಎಮ್ಮೆಯು ಬೆದರಿ ಯಾವದರ ಪರವೆ ಇಲ್ಲದೇ ಓಡಾಡುತ್ತ ಊರ ಮುಂದಿರುವ ಆ ಊರ ಗೌಡನ ಮನೆಯನ್ನು ಹೊಕ್ಕು ಪಾಗಾದಲ್ಲಿ ಕಟ್ಟಿರುವ ದೊಡ್ಡ ಕುದುರೆಯನ್ನು ತನ್ನ ಹದನಾದ ಕೋಡುಗಳಿಂದ ಹಾಯಲು ಆ ಕುದುರೆಯ ಪಕ್ಕಡಿಯಲ್ಲಿ ಕೋಡುಗಳು ನಟ್ಟು ಘಾಯವಾಗಿ ಆ ಘಾಯದಿಂದ ಮಜ್ಜಮಾಂಸಾದಿಗಳು ಹೊರಬಿದ್ದು ಕುದುರೆಯು ಕ್ಷಣದಲ್ಲಿಯೇ ಅಸುವಳಿದು ಈ ಸುದ್ದಿಯು ಊರಲ್ಲೆಲ್ಲ ಹಬ್ಬಿ ಉತ್ಸವದಿಂದ ಕರತಂದು ಮಠದಲ್ಲಿಳಿಸಿದ ಘನಮಠೇಶರಿಗೂ ಮುಟ್ಟಿದಾಕ್ಷಣವೇ ಘನಮಠೇಶರು ಅವಸರದಿಂದ ಗೌಡನ ಮನೆಗೆ ಬಂದು ಪ್ರಾಣವಳಿದು ಬಿದ್ದ ಕುದುರೆಗೆ ಸರ್ವಾಧಾರವಾದ ವಿಭೂತಿಯಂ ತರಿಸಿ ಅದನ್ನು ತಮ್ಮ ಅಮೃತ ಹಸ್ತದಿಂದ ಅದಕ್ಕೆ ಹಚ್ಚಿ ಕುದುರೆಯ ಮೇಲೆ ಹೊದಿಕೆಯನ್ನು ಹೊದಿಸಿ ಯಾರೂ ಚಿಂತಿಸುವ ಕಾರಣವಿಲ್ಲ ಕೆಲ ಹೊತ್ತು ಇದರ ಸಮೀಪಕ್ಕೆ ಯಾರೂ ಹೋಗಬೇಡಿರೆಂದು ಕಟ್ಟು ಮಾಡಿ ತಾವು ಮಠಕ್ಕೆ ಬರುವದರೊಳಗಾಗಿ ಮರಣ ಹೊಂದಿ ಮಲಗಿದ ಕುದುರೆಯು ಜೀವದಿಂದೆದ್ದು ತನ್ನ ಸ್ವಭಾವದಂತೆ ಹೂಂಕರಿಸಲಿಕ್ಕೆ ಹತ್ತಿತು.

ಕುದುರೆಯ ಯಜಮಾನನಾದ ಗೌಡನು ತನ್ನ ಕುದುರೆಯು ಬದುಕಿದ್ದನ್ನು ಕಂಡು ಮಹಾತ್ಮರ ಮಹಿಮೆಯನ್ನು ಮನದಲ್ಲಿ ನಡೆಯುತ್ತ ಮಠಕ್ಕೆ ಬಂದು ಪೂರ ಜನರೆಲ್ಲ ಅಗಾಧವಾದ ಈ ವಿಷಯವನ್ನು ಕಂಡು ಹಗಲಿರಳು ಘನಮಠೇಶರನ್ನು ಪೂಜೆ ಮಾಡುತ್ತ ಅವರಿಚ್ಛೆಯಂತೆ ಶಿವ ಭಜನೆ ಶಿವಪೂಜೆಗಳನ್ನು ಮಾಡುತ್ತ ಮಹಾತ್ಮರ ಮನಸ್ಸನ್ನು ತೃಪ್ತಿ ಬಡಿಸುತ್ತಿರಲು ಶಿವಯೋಗಿಗಳು ಇವರ ಆದಿರಾಥಿತ್ಯವಂ ಸ್ವೀಕರಿಸಿ ಅವ ರಿಗಾಶೀರ್ವಾದವಂ ಮಾಡಿ ಅಲ್ಲಿಂದ ಉತ್ತರಕ್ಕೆ ಕೃಷ್ಣಾನದಿಯಂ ದಾಟಿ ಅಲ್ಲಿಯೇ ಸಮೀಪದಲ್ಲಿರುವ ಬಾಡವೆಂಬ ಗ್ರಾಮಕ್ಕೆ ಮುಟ್ಟಿ ಆ ಗ್ರಾಮ ದಲ್ಲಿರುವ ಮೂಲೀಮಠಕ್ಕೆ ಹೋಗಿ ಆ ಮಠದ ಚನ್ನವೀರಸ್ವಾಮಿಗಳ ಪಾದದರ್ಶನ ತೆಗೆದುಕೊಂಡ ನಂತರ ಆ ಮಠದ ಸ್ವಾಮಿಗಳು ವಯೋ ವೃದ್ಧರಾದ ಕಾರಣ ಘನಮಠೇಶರನ್ನು ದಿಟ್ಟಿಸಿ ನೋಡಿ ನೋಡಿ ಇವರನ್ನು ಗುರುತಿಸಿ ನಾಗಭೂಷಣನಲ್ಲವೇ ನೀನು ಮನೆಮಾರು ತೊರೆದು ನಮ್ಮಂತೆ ಸನ್ಯಾಸಿಯಾಗಿ ದೇಶ್ಯಾಂತರ ಹೋಗಿರುವನೆಂದು ಎಂದೋ ಈ ಸುದ್ದಿಯನ್ನು ಕೇಳಿದ್ದೆವು.

ಅನಾಯಾಸವಾಗಿ ಇಂದು ದರ್ಶನ ಕೊಟ್ಟೆಯಾ ಬಾ ಎಂದು ತಮ್ಮ ಸಮೀಪಕ್ಕೆ ಕರೆದು ತಲೆಯ ಮೇಲೆ ಕೈಯಾಡಿಸಿ ಪ್ರೇಮದಿಂದ ಪರಾಮರ್ಶಿಸಿದರು. ಈ ಪ್ರಕಾರ ಬಾಡಮಠದ ಸ್ವಾಮಿಗಳು ಘನಮಠೇ ಶರನ್ನು ಆತ್ಮೀಯರಂತೆ ಅಪ್ಪಿಕೊಳ್ಳಲು ಕಾರಣವೇನಂದರೆ ಘನಮಠೇ ಶರ ಜನ್ಮಸ್ಥಳವಾದ ದಾರೂರ ಮಠವೂ ಗೋನವಾರ ಮಠವೂ ಬಾಡ ಗ್ರಾಮದ ಮಠವೂ ಈ ಮೂರೂ ಮಠಗಳು ಒಂದೇ ಗೋತ್ರ ಸೂತ್ರಕ್ಕೆ ಸಂಬಂಧಿಸಿದ್ದು ಒಂದೇ ಸಂತತಿಯ ಪುತ್ರವರ್ಗದ ಮಠಗಳಾದ ಕಾರಣ ಈ ಮೊದಲು ಬಾಡದ ಸ್ವಾಮಿಗಳು ಘನಮಠೇಶರನ್ನು ಸಣ್ಣವರಿರುವಾಗ ಎತ್ತಿ ಆಡಿಸಿದುವದರಿಂದಲೂ ದಾರೂರಿಂದ ನಾಗಭೂಷಣರು ಮನೆ ಬಿಟ್ಟು ದೇಶಾಂತರ ಹೋಗಿರುವರೆಂಬುದನ್ನು ತಿಳಿದುದರಿಂದ ಘನಮಠೇ ಶರನ್ನು ಗುರುತಿಸಬೇಕಾಯ್ತು ಈ ಪ್ರಕಾರ ಸ್ವಾಮಿಗಳು ಘನಮಠೇ ಶರ ನಿಜವಾದ ಉಪರತಿ ಸ್ಥಿತಿಯನ್ನು ಕಂಡು ಆಶ್ಚರ್ಯವುಳ್ಳವರಾಗಿ

ಚಿಕ್ಕಂದಿನಿಂದಲೂ ಬ್ರಹ್ಮಚರ್ಯಾಶ್ರಮವನ್ನು ಹೊಂದಿ ಈಗ್ಯೂ ಅದೇ ಆಶ್ರಮದಲ್ಲಿರುವ ನಮಗೆ ಆಸೆಯನ್ನಳಿಯಲು ಅಸಾಧ್ಯವಾಗಿರಲು ಯಾವ ಆಶ್ರಮದ ಹಂಗು ಇಲ್ಲದೇ ಪೂರ್ವಪುಣ್ಯ ವಿಶೇಷದಿಂದ ಪ್ರಾಪ್ತ ವಾದ ನಿನ್ನ ಪ್ರಭಾವವು ನಮ್ಮ ಆಶ್ರಮ ಧರ್ಮಕ್ಕಿಂತಲೂ ದೊಡ್ಡದು.

ನಾಗಭೂಷಣಾ ಸ್ನಾನಕ್ಕೇಳು ಶಿವಾರ್ಚನೆಗೆ ಹೊತ್ತಾಗಿದೆಂದು ಈರ್ವರೂ ಸ್ನಾನ ಶಿವಾರ್ಚನೆಗಳನ್ನು ತೀರಿಸಿಕೊಂಡು ಆನಂದದಿಂದ ಕುಳಿತಿರಲು ಜಾಲಳ್ಳಿಯ ವೀರಭದ್ರಶಾಸ್ತ್ರಿಗಳು ಅರವತ್ತುಮೂರು ಮಂದಿ ಪುರಾತನರ ಪುರಾಣವನ್ನು ಪೂರ್ಣಗೊಳಿಸಿಕೊಂಡು ಘನಮಠೇಶರು ಇಲ್ಲಿಯೇ ಇರುವರೆಂಬುದನ್ನು ತಿಳಿದು ಅವರ ಅನುಜ್ಞೆಯನ್ನು ಅವರ ಸನ್ನಿಧಿಗೆ ಬಂದು ಪುರಾತನರ ಪುರಾಣವನ್ನು ಮುಂದಿಟ್ಟು ಸಾಷ್ಟಾಂಗ ನಮಸ್ಕಾರಮಾಡಲು ಘನಮಠೇಶರು ವೀರಭದ್ರಶಾಸ್ತ್ರಿಗಳ ಭಕ್ತಿಭಾವವನ್ನು ಪರಿಪೂರ್ಣವಾದ ಪುರಾತನರ ಪುರಾಣವನ್ನೂ ಮಹಾರೋಗದಿಂದ ಮುಕ್ತರಾದ ಶಾಸ್ತ್ರಿಗಳ ದೇಹಕಾಂತಿಯನ್ನೂ ಕಂಡು ಆನಂದಾತಿಶಯ ಉಳ್ಳವರಾಗಿ ಪುರಾತನರ ಪುರಾಣದೊಳಗಿನ ಕೆಲವು ಪದ್ಯಗಳನ್ನು ವೀರಭದ್ರಶಾಸ್ತ್ರಿಗಳಿಂದ ಅನ್ನಿಸಿ ಅವುಗಳನ್ನು ಕೇಳಿ ಕರ್ಣಾನಂದವುಳ್ಳವರಾಗಿ ಶಾಸ್ತ್ರಿಗಳಿಗೆ ಊಟೋಪಚಾರಗಳನ್ನು ಮಾಡಿಸಿ ಆಶೀರ್ವದಿಸಿ ಅವರನ್ನು ಕಳುಹಿದರು.

ಈ ನೂತನ ಪುರಾಣವನ್ನು ನಿಮ್ಮ ಮಠದಲ್ಲಿಯೇ ಪಂಡಿತರಿಂದ ಪ್ರಾರಂಭಮಾಡಿಸಿ ಭಕ್ತಾದಿಗಳಿಗೆ ಶ್ರವಣಮಾಡಿಸಬೇಕೆಂದು ಗುರುಗಳಿಗೆ ಆಗ್ರಹ ಮಾಡಲು ನಿನ್ನ ಆಗ್ರಹಪ್ರಕಾರ ಪುರಾಣ ಪ್ರಾರಂಭಮಾಡಿಸುತ್ತೇವೆ, ಪುರಾಣ ಮುಗಿಯುವವರೆಗೂ ನೀನು ಇಲ್ಲಿಯೇ ಇರಬೇಕೆಂದು ಇವರಿಂದ ವಚನತೆಗೆದುಕೊಂಡು ಪಂಡಿತರನ್ನು ಕರೆಯಿಸಿ ಶುಭಮುಹೂರ್ತದಲ್ಲಿ ಪುರಾಣ ಪ್ರಾರಂಭಗೊಳಿಸಿ ಪುರಾಣಕ್ಕೆ ಬರುಹೋಗುವ ಜನರಿಗೆ ಭೂರಿದಾಸೋಹ ಕಾರ್ಯಗಳಿಂದ ತೃಪ್ತಿಬಡಿಸುತ್ತ ಯಾವದಕ್ಕೂ ಕೊರತೆ ಬಾರದಂತೆ ಅಂತ್ಯದವರೆಗೂ ಪುರಾಣವನ್ನು ಸಾಗಿಸಿ ಅಂತ್ಯಕ್ಕೆ ಘನ

ಮಠೇಶರ ಅಪೇಕ್ಷೆಯಂತೆ ಚನವೀರಸ್ವಾಮಿಗಳು ಅರವತ್ತು ಮೂರು ಮಂಟಪಗಳನ್ನು ರಚಿಸಿ ಮಂಟಪಕ್ಕೊಬ್ಬೊಬ್ಬರಂತೆ ಕ್ರಿಯಾಮೂರ್ತಿಗಳನ್ನು ಕರೆಯಿಸಿ ಅವರ ಪಾದಪೂಜಾದಿ ಕಾರ್ಯಗಳನ್ನು ಸಂಭ್ರಮದಿಂದ ಸಮಾಪ್ತಗೊಳಿಸಿ ಭೂರಿ ಗಣಾರಾಧನೆಯೊಡನೆ ಪುರಾಣ ಮೆರವಣಿಗೆಯನ್ನು ಮಾಡಿಸಿ ಪುರಾಣ ಹೇಳಲು ಬಂದ ಪಂಡಿತರಿಗೆ ಯೋಗ್ಯ ಸಂಭಾವನೆ ಕೊಟ್ಟು ಪುರಾಣದಲ್ಲಿ ಭಾಗವಹಿಸಿ ಭಕ್ತಿಯಿಂದ ಸೇವೆಸಲ್ಲಿಸಿದ ಭಕ್ತವೃಂದಕ್ಕೆ ಮಂಗಲಾಶೀರ್ವಾದವಂ ಕೊಟ್ಟು ಬಾಡಗ್ರಾಮದ ತಮ್ಮ ಗುರುಗಳಾದ ಚನ್ನವೀರ ಸ್ವಾಮಿಗಳ ಮಠದಲ್ಲಿ ಘನಮಠೇಶರು–

(ಪರೋಪಕಾರಾರ್ಥಮಿದಂ ಕಲೇವರಂ)

ಎಂಬ ಸುಭಾಷಿತದಂತೆ ವೀರಭದ್ರಶಾಸ್ತ್ರಿಗಳಿಂದ ಬರೆಯಿಸಿದ ಪುರಾತನರ ಪುರಾಣವು ಇಂದಿಗೂ ಎಂದಿಗೂ ಇರುವಂತೆಮಾಡಿದ ಉಪಕಾರವು ಚಿರಸ್ಮರಣೆಯವಲ್ಲವೆ ಅಲ್ಲದೆ ಯಾವ ಚಿಕಿತ್ಸಾಗಳಿಂದಲೂ ವಾಸಿಯಾಗದ ಮಹಾ ರೋಗವು ಶಿವನ ಸ್ವರೂಪವಾದ ಶಿವಶರಣರ ಪುರಾಣವನ್ನು ಪೂರಾ ಬರೆಯುವದರೊಳಗಾಗಿ ನಾಶವಾಗುವಂತೆಮಾಡಿದ ಮಹಾತ್ಮರ ಅಮೃತವಾಣಿಯು ಅಸಾಧಾರಣವಾದದ್ದು ಈ ಪ್ರಕಾರ ಘನಮಠೇಶರು ಅಘಟಿತವಾದ ಘಟನಾಕಾರ್ಯಗಳನ್ನು ತಮ್ಮ ಕ್ರಿಯಾಬಲದಿಂಡ ಮಾಡುತ್ತ ಭಕ್ತರ ಇಷ್ಟಾರ್ಥಗಳನ್ನು ಪೂರೈಸುತ್ತ ಬಾಡಗ್ರಾಮದಲ್ಲಿ ಅರವತ್ತುಮೂರುಮಂದಿ ಪುರಾತನರ ಪುರಾಣಕಾರ್ಯ ಸಮಾಪ್ತಗೊಳಿಸಿದರು.

೬ ನೆಯ ಪ್ರಕರಣಂ ಸಮಾಪ್ತಂ



# ೭ ನೆಯ ಪ್ರಕರಣ



ಪದ;- ಗೂಗಲ್ಲು ಮೊದಲಾದ ಗ್ರಾಮಗಳ ಸಂಚರಿಸಿ।
ಸೊಗಸಾದ ರೊಟ್ನಡಗಿ ಬಿಲ್ವವನದೊಳು ತಮ್ಮ।
ಅಘಹರನ ಪೂಜೆಯಂ ಮನಸಿನಿಂ ಮಾಡುತ್ತ ಜಗದೀಶ
ನಿಷ್ಟೆಯಂತೆ॥
ಮಿಗಿಲೆನಿಪನಾ ಸದಾಶಿವಗೌಡ ಭಕ್ತನಿಗೆ।
ನಿಗಮೋಕ್ತ ಶೈವಧರ್ಮದ ಸಾರವನು ತಿಳುಹಿ।
ಝಗ ಝಗಿಸುವ ಬೆಂಡೆಬೊಂಬಳಿ ಗ್ರಾಮದಲ್ಲಿ ಶರಣಬಸವ
ಚರಿತೆಯನರುಹಿದಂ ॥೦॥

ಘನಮಠೇಶರು ಬಾಡವೆಂಬ ಗ್ರಾಮದಲ್ಲಿ ಬಹುದಿನದಿಂದಲೂ ಮನಸ್ಸಿನಲ್ಲಿ ಮನೆಮಾಡಿಕೊಂಡಿದ್ದ ತ್ರಿಷಷ್ಠಿ ಪುರಾತನರ ಪುರಾಣವನ್ನು ಬಾಡಗ್ರಾಮದ ಭಕ್ತರಿಗೆಲ್ಲ ಬೋಧೆಮಾಡಿಸಿ ಪುರಾತನರಾದ ಶಿವಶರಣರ ಮಹಿಮೆಗಳನ್ನು ತಾನು ತಿಳಿದು ಶಿವನಿಗಾಗಿ ಶಿವಶರಣರು ಸಲ್ಲಿಸಿದ ಸೇವೆಯು ಸಹಸ್ರಾಂಶದಲ್ಲಿ ಒಂದಂಶವೂ ಕೂಡ 'ತಮ್ಮಿಂದ ಸಾಧ್ಯವಿಲ್ಲೆಂದು ತಮ್ಮನ್ನು ತಾವೇ ಹಳಿದುಕೊಂಡು ಗುರುಗಳಾದ ಚನವೀರದೇವರಿಗೆ ಕಾಯದಂಡನೆಯಮಾಡಿ ಗುರುದೇವಾ ಶರೀರವಿರುವವರೆಗೂ ಶಿವಶರಣರ ಮಹಿಮೆಗಳನ್ನು ಮಹೀತಲದ ಲಿಂಗಾಂಗಿಗಳಾದ ಶಿವಭಕ್ತರಿಗೆ ಬೋಧೆಮಾಡಬೇಕೆಂಬ ಸತ್ಸಂಕಲ್ಪವುಳ್ಳವನಿಗೆ ಆಶೀರ್ವದಿಸಿ ಅನುಜ್ಞೆಯನ್ನು ಅನುಗ್ರಹಿಸಿರಿ. ಎಂದು ಪ್ರಾರ್ಥಿಸಿದರು.

ಗುರುಗಳಾದ ಚನವೀರದೇವರು ಆಗಲಿ ಘನಮಠಾ ಸಾಗರದ ತೆರೆಯಂತೆ ಮಹತ್ಕಾರ್ಯಕ್ಕಾಗಿ ಮುಂದೋಡುವ ನಿನ್ನನ್ನಾರಾದರೂ

ತದಯುಬಹುದೇ ವಿಶ್ವದೊಳ್ಳಭನ ಕಾರ್ಯಕ್ಕೆ ಕಂಕಣಬದ್ಧನಾಗಿ ಹೊರಟ ನಿನಗೆ ವಿಶ್ವದಲ್ಲೆಲ್ಲ ಮಂಗಲವುಂಟಾಗಿ ಮರ್ತ್ಯದ ಮಾನವರು ನಿನ್ನ ಬೋಧೆಯಂ ಕೇಳಿ ಸನ್ಮಾರ್ಗಿಗಳಾಗಿ ಭೋಗ ಮೋಕ್ಷಗಳೆರಡನ್ನೂ ಪಡೆದು ಸುಖಿಗಳಾಗಿ ವಿಶ್ವದಲ್ಲೆಲ್ಲ ವೀರ ವಿರತನೆಂದು ನಿನ್ನ ಕೀರ್ತಿಯು ಅಜರಾಮರವಾಗಲಿ ಎಂದು ಆಶೀರ್ವದಿಸಿ ಅಪ್ಪಣೆಯಂ ಕೊಟ್ಟರು.

ಘನಮಠೇಶರು ತಮ್ಮ ಆತ್ಮತೇಜಸ್ಸಿನಿಂದ ಮಂತ್ರದಿಂದ ಪವಿತ್ರ ಶರೀರಿಯಾದ ಷಡಾನನಂತೆಯೂ ಶಿವನಿಂದಕರಿಗೆ ಶಾಸನಮಾಡಲು ವೀರಭದ್ರನಂತೆಯೂ ಭಕ್ತಾದಿಗಳಿಗೆ ಬಂದ ವಿಘ್ನಾದಿಗಳನ್ನು ದೂರಮಾಡಲು ವಿಘ್ನೇಶನಂತೆಯೂ ಪರಮತದ ಪಾಖಂಡಿಗಳನ್ನು ದಂಡಿಸಲು ಶ್ರೇಷ್ಠನಾದ ದಧೀಚಿಋಷಿಯಂತೆಯೂ ಶಿವಧರ್ಮ ಬೋಧೆಯಲ್ಲಿ ಯುಗ ಯುಗಾಂತರ ಪರಮಾತ್ಮನ ಸದ್ಯೋಜಾತ ಮುಖದಿಂದುತ್ಪನ್ನರಾದ ರೇಣುಕ ಭಗವತ್ಪಾದರಂತೆಯೂ ಇದೇ ಕಲಿಯುಗದಲ್ಲಿ ಕಲ್ಯಾಣದ ಕರುಣಿಕನಾಗಿ ವೀರಶೈವ ಧ್ವಜವನ್ನು ಜಗತ್ತಿಗೆ ಎತ್ತಿ ತೋರಿಸಿ ಕೂಡಲಸಂಗಮೇಶನಲ್ಲಿ ಐಕ್ಯನಾದ ಬಸವನ ವಚನಶಾಸ್ತ್ರವನ್ನೇ ತನ್ನ ಬೆನ್ನಿಗೆ ಕಟ್ಟಿಕೊಂಡು ಹೆಜ್ಜೆಜ್ಜೆಗೂ ಬಸವಾ ಬಸವಾ ಎಂದು ಬಸವನಾಮವನ್ನು ಉಚ್ಚರಿಸುತ್ತ ಸಾವಧಾನವಾಗಿ ಸಾಯಂಕಾಲವಾಗುವದರೊಳಗಾಗಿ ಕೃಷ್ಣಾನದೀ ದಂಡೆಯಲ್ಲಿರುವ ಗೂಗಲ್ಲ ಪ್ರಭುದೇವರ ದರ್ಶನಮಾಡಿಕೊಂಡು ಮುಂದೆ ಪ್ರಯಾಣ ಮಾಡೋಣವೆಂದು ಮನಸ್ಸಿನಲ್ಲಿ ಮಾಡಿಕೊಂಡು ಗೂಗಲ್ಲಗ್ರಾಮದಲ್ಲಿ ಬಂದ ಅಲ್ಲಿಯ ಭಕ್ತರನ್ನು ಪ್ರಭುವಿನ ಪವಿತ್ರ ದೇವಾಲಯ ಎಲ್ಲಿರುವದೆಂದು ಕೇಳಿದರು.

ಅಲ್ಲಿಯ ಜನರು ಭಾಡ ಗ್ರಾಮದಲ್ಲಿ ಪುರಾತನರ ಪುರಾಣ ಮಾಡಿದ ಮಹಾತ್ಮರಿವರೇ ಎಂದು ತಿಳಿದು ಆ ಕ್ಷಣವೇ ಅವರೊಡನೆ ಬಂದು ಕೃಷ್ಣಾನದಿಯಿಂದ ಸುತ್ತುವರೆಯಲ್ಪಟ್ಟ ಪ್ರಭುದೇವರ ಗುಡಿಯನ್ನು ತೋರಿಸಲು ಆ ದಿವಸ ಯಾವ ಪೂಜಾಪ್ರಸಾದಗಳಿಲ್ಲದೇ ಪ್ರಭು

ವಿನ ಧ್ಯಾನದಲ್ಲಿಯೇ ಆ ರಾತ್ರಿ ಕಳೆದು ಪ್ರಾತಃಕಾಲದ ಪ್ರಶಾಂತವಾದ ಸಮಯದಲ್ಲಿ ಎದ್ದು ಶೌಚಾಚಮನಾದಿಗಳನ್ನು ಮುಗಿಸಿ ಪವಿತ್ರವಾದ ಕೃಷ್ಣಾ ನದಿಯಲ್ಲಿ ಸ್ನಾನವನ್ನು ಮಾಡಿ ಪ್ರಭುದೇವರ ಸಮ್ಮುಖದಲ್ಲಿಯೇ ತಮ್ಮ ಶಿವಾರ್ಚನೆಯನ್ನು ನೆರವೇರಿಸಿಕೊಂಡು ನಿತ್ಯನೇಮದಂತೆ ಊರೊಳಗೆ ಹೋಗಿ ಐದು ಮನೆಯಿಂದ ಬಂದ ಭಿಕ್ಷಾನ್ನದಿಂದಲೇ ತನ್ನ ಪ್ರಸಾದ ಮುಗಿಸಿ ನಂತರ ಬಂದ ಭಕ್ತಾದಿಗಳಿಗೆ ವೀರಶೈವ ಧರ್ಮದ ಆಚರಣೆಗಳನ್ನು ಸವಿಸ್ತಾರವಾಗಿ ಬೋಧೆ ಮಾಡುತ್ತ ಪ್ರಭುದೇವರ ಗುಡಿಯಲ್ಲಿಯೇ ಕೆಲವು ದಿವಸ ವಾಸಮಾಡಿ ಒಂದಾನೊಂದು ದಿವಸ ತನ್ನ ಮುಂದಿನ ಕಾರ್ಯಾರ್ಥವನ್ನು ಮನಸ್ಸಿಗೆ ತಂದುಕೊಂಡು ಆ ರಾತ್ರಿಯೇ ಯಾರಿಗೂ ತಿಳಿಯದಂತೆ ನದಿಯನ್ನು ದಾಟಿ ಆಚೇ ದಂಡಿಯಲ್ಲಿ ನಾನಾ ಪ್ರಕಾರಗಳಾದ ತರುಲತೆಗಳಿಂದ ನಿಬಿಡವಾದ ಗೌಪ್ಯಸ್ಥಾನವನ್ನು ಕಂಡು ಅಲ್ಲಿಯೇ ತನ್ನ ಅನುಷ್ಠಾನಕ್ಕೆ ಯೋಗ್ಯವೆಂದು ಊಹಿಸಿ ಯಾರಿಗೂ ತಿಳಿಯದಂತೆ ಪ್ರತಿದಿನದಲ್ಲೂ ಪರ್ಣಾಹಾರವನ್ನೇ ಸೇವಿಸುತ್ತ ಶಿವಧ್ಯಾನದಲ್ಲಿದ್ದರು.

ಆ ಸ್ಥಾನಕ್ಕೆ ಅಲ್ಲಿಯೇ ಸಮೀಪದಲ್ಲಿರುವ ರೊಟ್ನಡಗಿ ಎಂಬ ಸಣ್ಣ ಗ್ರಾಮದ ಸದಾಶಿವಪ್ಪನೆಂಬ ಗೌಡನು ಸಹಜವಾಗಿ ನದೀ ದಂಡೆ ಹಿಡಿದು ಅಡ್ಡಾಡುತ್ತ ಘನಮಠೇಶರಿರುವ ಸ್ಥಾನಕ್ಕೆ ಬಂದು ದಿವ್ಯ ತೇಜಸ್ಸಿನಿಂದ ದೇದಿಪ್ಯಮಾನರಾಗಿ ಶೋಭಿಸುವ ಶಿವಯೋಗಿಗಳನ್ನು ಕಂಡು ಇವರು ಯಾರೋ ಮಹಾತ್ಮರೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಶಿವಯೋಗಿಗಳ ಸಮ್ಮುಖದಲ್ಲಿ ಸಾಷ್ಟಾಂಗವೆರಗಿ ಸಂಭಾಷಣೆಗೈದು ಆವರಿಂದ ಆಶೀರ್ವಾದ ಹೊಂದಿ ಮನೆಗೆ ಹೋಗಿ ಪ್ರತಿನಿತ್ಯದಲ್ಲಿಯೂ ಇದೇ ಪ್ರಕಾರ ಆ ಗೌಡನು ಬಂದು ಸ್ವಾಮಿಗಳಿಂದ ಸತ್‌ಶ್ರವಣ ಮಾಡಿಕೊಂಡು ಬರುವದನ್ನು ಇತರ ಭಕ್ತಾದಿಗಳು ಅರಿತು ಅವರೂ ಇಲ್ಲಿಗೆ ಬರಲಿಕ್ಕೆ ಹತ್ತಲು ದಿನ ಕ್ರಮೇಣ ಜನರು ಬರುವದು ಹೆಚ್ಚಾಗಲು ಆ ಸಮಯಕ್ಕೆ ಸರಿಯಾಗಿ ಮಕರ ಸಂಕ್ರಮಣ ಪ್ರಾಪ್ತವಾಗಲು ಜನರು ತಂಡೋಪತಂಡವಾಗಿ ಸಂಕ್ರಮಣದ ಪುಣ್ಯ ಕಾಲದಲ್ಲಿ ನದೀ ಸ್ನಾನ ಮಾಡಬೇಕೆಂದು

ಘನಮಠೇಶರಿರುವ ಸ್ಥಾನಕ್ಕೆಬಂದು ಶಿವಯೋಗಿಗಳಿಗೆ ಮಹಾತ್ಮರೇ ಈ ದಿವಸ ಮಕರ ಸಂಕ್ರಮಣವು ನಮ್ಮ ಪುಣ್ಯಕ್ಕೆ ಸರಿಯಾಗಿ ತಾವು ಬಂದಿರುವಿರಿ. ಈ ದಿವಸ ತಾವು ನಮ್ಮ ಮಸ್ತಕದಮೇಲೆ ಪಾದವನ್ನಿಟ್ಟು ನೀರು ಹಾಕಿದರೆ ನಮ್ಮ ಪಾಪವೆಲ್ಲ ಪರಿಹಾರವಾಗಿ ಪರಿಶುದ್ಧರಾಗುತ್ತೇವೆ.

ಹೀಗೆಂದು ಪ್ರಾರ್ಥಿಸುವ ಭಕ್ತಾದಿಗಳಿಗೆಲ್ಲ ಘನಮಠೇಶರು ಅವರ ಅಪೇಕ್ಷೆಯನ್ನು ನಿರಾಕರಿಸಬಾರದೆಂದು ಅವರ ತಲೆಯ ಮೇಲೆ ತಮ್ಮ ಪಾದಗಳನ್ನಿಟ್ಟು ನೀರು ಹಾಕಿದನಂತರ ಆ ಭಕ್ತರು ಸಾಂಪ್ರದಾಯದಂತೆ ದಕ್ಷಿಣೆಯನ್ನು ತಮ್ಮ ತಮ್ಮ ಯೋಗ್ಯತಾನುಸಾರ ಶಿವಯೋಗಿಗಳ ಸನ್ನಿಧಿಯಲ್ಲಿಟ್ಟುದನ್ನು ಕಂಡು ಘನಮಠೇಶರು ನಮಗೇಕೆ ದುಡ್ಡಿನ ದುರಾಶೆ ಎಂದು ತಮ್ಮ ಮುಂದೆ ಬಂಡೆಗಲ್ಲಮೇಲೆ ಭಕ್ತರಿಟ್ಟ ದಕ್ಷಿಣೆಯ ರೊಕ್ಕವನ್ನು ಹೊರಳಿ ಸಹ ನೋಡದೆ ಇನ್ನು ಇಲ್ಲಿದ್ದರೆ ಈ ಭಕ್ತರ ಉಪದ್ರವವು ಹೆಚ್ಚಾಗಬಹುದೆಂದೂಹಿಸಿ ಮುಂಪಕ್ಕೆ ಪ್ರಯಾಣ ಮಾಡಲು ಮಾರ್ಗದಲ್ಲಿ ರೊಟ್ನಡಗಿಯ ಗೌಡನು ಇವರನ್ನು ಕಂಡು ನಮಸ್ಕರಿಸಿ ದೇವಾ ನನ್ನ ಮಂದಿರದಲ್ಲಿ ನಡೆಯುವ ಗಣಾರಾಧನೆಯನ್ನು ಮುಗಿಸಿ ತಾವು ಪ್ರಯಾಣ ಮಾಡಬಹುದೆಂದು ವಿನಂತಿ ಮಾಡಿಕೊಳ್ಳಲು ಆತನ ಅಭೀಷ್ಟದ ಮೇರೆಗೆ ಗೌಡನ ಮನೆಗೆ ದಯಮಾಡಿಸಿ ಗಣಾರಾಧನೆಯನ್ನು ಪೂರ್ಣಗೊಳಿಸಿ ಪರಮಾನಂದದಿಂದ ಇರುತ್ತಿದ್ದರು.

ಕೃಷ್ಣಾನದಿಯಲ್ಲಿ ತಾವು ಬಿಟ್ಟು ಬಂದ ದಕ್ಷಿಣೆಯನ್ನು ಭಕ್ತಾದಿಗಳೂ ಮುಟ್ಟದೆ ಹಾಗೇ ರೊಟ್ನಡಗಿಗೆ ಬಂದು ಬಡತನದಿಂದ ಲಿಂಗವನ್ನು ವಸ್ತ್ರದಲ್ಲಿಯೇ ಕಟ್ಟುತ್ತಿದ್ದ ಓರ್ವ ಬಡ ಜಂಗಮನಿಗೆ ಶಿವಯೋಗಿಗಳು ನದಿಯಲ್ಲಿ ಬಿಟ್ಟು ಬಂದ ದಕ್ಷಿಣೆಯನ್ನು ನೀನು ತೆಗೆದುಕೊಂಡು ಬಂದು ಲಿಂಗದಕಾಯಿಯನ್ನು ತರಿಸಿಕೋ ಎಂದು ಜನರ ಹೇಳಿಕೆಯ ಪ್ರಕಾರ ಆ ಬಡಜಂಗಮನು ಶಿವಯೋಗಿಗಳ ನಿರಾಶಾಮಯ ಗುಣವನ್ನು ಕೊಂಡಾಡುತ್ತ ಹೊಳೆಗೆ ಹೋಗಿ ಅಲ್ಲಿ ಬಂಡೆಯ ಮೇಲಿರುವ ರೊಕ್ಕವನ್ನು ತಕ್ಕೊಂಡು ತನ್ನ ಲಿಂಗಯ್ಯನಿಗೆ ಬೆಳ್ಳಿಯ ಲಿಂಗದಕಾಯಿ

ಯನ್ನು ಕೊಂಡು ಯಾರಾದರೂ ಕೇಳಿದರೆ ಇದು ಘನಮಠ ಸ್ವಾಮಿ
ಗಳು ಕಟ್ಟಿಸಿಕೊಟ್ಟ ಗುಡಿಯೆಂದು ಹೇಳಿಕೊಳ್ಳುತ್ತಿದ್ದನಂತೆ ಅಸ್ತು
ರೊಟ್ನಡಗಿಯ ಸಮೀಪದಲ್ಲಿರುವ ಬೆಂಡೆಬೊಂಬಳಿ ಎಂಬ ಗ್ರಾಮದ
ಭಕ್ತರು ಧನಕನಕ ವಸ್ತು ವಾಹನಾದಿ ಸರ್ವಸಂಪತ್ತಿನಿಂದ ಭಾಗ್ಯಶಾಲಿ
ಗಳಾಗಿ ಭಕ್ತಿಯಿಂದ ಭವರಹಿತನಾದ ಶ್ರೀ ಶರಣಬಸವೇಶ್ವರನ ಪುರಾಣ
ಶ್ರವಣ ಕಾರ್ಯವನ್ನು ಪ್ರಾರಂಬ ಮಾಡಿ ಒಂದು ತಿಂಗಳಾಗಿತ್ತು. ಈಗ
ಪುರಾಣ ಸಮಾಪ್ತಿ ಕಾಲವು ಸಮೀಪಕ್ಕೆ ಬಂದ ಕಾರಣ ಪುರಾಣ
ಮಂಗಲಕಾರ್ಯಕ್ಕೆ ಸಮೀಪದ ಗ್ರಾಮದಲ್ಲಿರುವ ಘನಮಠೇಶರನ್ನು
ನಾವು ಕರತಂದರೆ ಪುರಾಣ ಮಂಗಲಕ್ಕೆ ಮತ್ತಷ್ಟು ಶೋಭೆಯಾಗುತ್ತದೆ.

ಸರ್ವರೂ ರೊಟ್ನಡಗಿಗೆ ಬಂದು ಗೌಡನ ಮನೆಯಲ್ಲಿರುವ ಶಿವ
ಯೋಗಿಗಳ ಸನ್ನಿಧಿಗೆ ಬಂದು ನಮಸ್ಕರಿಸಿ ತಮ್ಮ ಅಭಿಪ್ರಾಯವನ್ನು
ವ್ಯಕ್ತಮಾಡಲು ಅದಕ್ಕೆ ಶಿವಯೋಗಿಗಳು ಅಪ್ಪಾ ನಾವು ಊರೂರಿಗೆ
ಮಾಡುವ ಕಾರ್ಯಗಳೇ ಇವಾಗಿವೆ. ಶಿವಶರಣರ ಸೇವೆಯೇ ನನ್ನ
ಪ್ರಪಂಚವಾಗಿದೆ ವೀರಶೈವರಿಗೆ ಅಧಿಕ ಶ್ರೇಷ್ಠಗಳಾದ ಗುರು ಲಿಂಗ
ಜಂಗಮ ಇವುಗಳು ಭಕ್ತರು ಮಾಡುವ ಪೂಜೆಗೂ ಸೇವೆಗೂ ತೃಪ್ತಿಗೂ
ಯೋಗ್ಯವಿರುತ್ತಿರಲಾಗಿ ಭಕ್ತರು ಅಜ್ಞಾನಿಗಳಾಗಿ ಅನ್ಯ ದೇವರನ್ನು
ತಂದು ಅವಕ್ಕಾಗಿ ದೇವರ ಮನೆಯಲ್ಲಿ ಜಗುಲಿಯನ್ನು ಕಟ್ಟಿ ತಾವು
ತಂದ ಕಂಡ ಕಂಡ ಮೂರ್ತಿಗಳನ್ನು ಜಗುಲಿಯ ಮೇಲಿಟ್ಟು ಮನಸ್ಸಿಲ್ಲದೆ
ಪೂಜೆ ಮಾಡುವದು ಧರ್ಮಕ್ಕೂ ನೀತಿಗೂ ವಿರುದ್ಧವಾಗುವದಲ್ಲದೆ
ಅಂತ್ಯಕ್ಕೆ ಇಹಕ್ಕೂ ಪರಕ್ಕೂ ಕಾರಣರಾಗದೆ ಪರಶಿವನ ಪ್ರೇಮಕ್ಕೆ
ಪಾತ್ರರಾಗದೆ. ಧರ್ಮದ್ರೋಹಿಗಳಾದ ಈ ಭಕ್ತರಿಗೆ ಏನು ಮಾಡಬೇಕ
ನ್ನುವದೇ ತಿಳಿಯದಾಗಿದೆ.

ಪತಿವ್ರತೆಯಾದ ಸ್ತ್ರೀಯು ತನ್ನ ಗಂಡನ ಹೊರತಾಗಿ ಅನ್ಯರ
ಸೇವಾ ಶುಶ್ರೂಷೆಗಳನ್ನು ಹೇಗೆ ಬಯಸುವದಿಲ್ಲವೋ ಹಾಗೆಯೇ ನಿಜ
ನಾದ ವೀರಶೈವರೆಂದಾದರೂ ಅನ್ಯ ಪ್ರತಿಮೆಗಳ ಪೂಜೆಯನ್ನು ಮಾಡ

ಬಹುವೇ ಶಿವಭಕ್ತಸಾಧವನು ತನ್ನ ಇಷ್ಟಲಿಂಗದ ನಿಷ್ಠೆಯಿಂದ ನಿರ್ಮಲವಾದ ತನ್ನ ಮನಸ್ಸನ್ನು ಕಂಡ ಕಂಡ ದೇವರನ್ನು ಕಾಮಿಸಿ ಅಪವಿತ್ರವನ್ನಾಗಿ ಮಾಡಲಾರನು. ವೀರಶೈವರಾದ ನಮ್ಮ ನಡೆಯೊಂದೇ ನುಡಿಯೊಂದೇ ಆರಾಧಿಸುವ ದೇವರೊಂದೇ ಅಧ್ಯಾತ್ಮಿಕವಾಗಿ ಪಠಿಸುವ ಮಂತ್ರ ಒಂದೇಯಾಗಿ ಏಕೇಶ್ವರೀ ಭಕ್ತಿಯನ್ನು ಬಹಿರಂಗದಲ್ಲಿ ನೆಲೆಗೊಳಿಸುವದೇ ನಮ್ಮ ಕರ್ತವ್ಯ. ಈ ಪ್ರಕಾರ ರೊಟ್ಟಿಡಿಗೆಯು ಸದಾಶಿವಪ್ಪಗೌಡನಿಗೆ ಸದ್ಬೋಧೆಯಂ ಮಾಡಲು ಆ ಗೌಡನಿಗೆ ಮಹಾತ್ಮರ ಬೋಧೆಯು ಮನಸ್ಸಿನ ಮೇಲೆ ಪರಿಣಾಮವಾಗಿ ಆಗಲೇ ತನ್ನ ದೇವರ ಮನೆಯೊಳಗೆ ಜಗುಲಿಯ ಮೇಲಿರುವ ಭಿನ್ನ ಭಿನ್ನ ದೇವರುಗಳನ್ನೆಲ್ಲ ತಂದು ಘನಮಠೇಶರೆದುರಿನಲ್ಲಿ ನಿಂತು ದೇವಾ ಅಜ್ಞಾನದಿಂದ ನಾವು ತಂದಿರಿಸಿದ ಈ ದೇವರನ್ನು ಈಗ ಏನು ಮಾಡಬೇಕೆಂದು ಕೇಳಲು ಇವುಗಳನ್ನೆಲ್ಲ ಕೃಷ್ಣಾರ್ಪಣ ಮಾಡಿ ನಮ್ಮ ಪತಿಸ್ವರೂಪಿಯಾದ ಇಷ್ಟಲಿಂಗದ ಪೂಜೆಯಿಂದಲೇ ಪವಿತ್ರರಾಗಿರಿ ಎಂದು ಆಜ್ಞೆ ಮಾಡಿ ಬೆಂಡೆಬೊಂಬಳಿ ಗ್ರಾಮದಿಂದ ಬಂದ ಭಕ್ತರೊಡನೆ ಅವರೂರಿಗೆ ಹೋಗಿ ಅವರು ಇಳಿಸಿದ ಮಠದಲ್ಲಿ ತಮ್ಮ ನಿತ್ಯಕರ್ಮಗಳನ್ನಾಚರಿಸಿ ಸ್ವಸ್ಥವಾಗಿರುತ್ತಿದ್ದರು.

ಭಕ್ತ ಸಮೂಹವು ಪುರಾಣ ಸಮಾರಾಧನೆಯ ಸಾಹಿತ್ಯಗಳನ್ನು ಸಜ್ಜುಗೊಳಿಸಿ ನಾನಾ ಪ್ರಕಾರಗಳಾದ ಪಕ್ವಾನ್ನಗಳನ್ನು ತಯಾರ ಮಾಡಿಸಿ ಸೂರ್ಯೋದಯಕ್ಕೆ ಸರಿಯಾಗಿ ಗಣತೃಪ್ತಿಯನ್ನು ಪ್ರಾರಂಭ ಮಾಡಬೇಕೆಂಬ ಬಯಕೆಯಿಂದ ಅಹರ್ನಿಶ ಯತ್ನ ಮಾಡುತ್ತಿರಲು ಬಹು ದಿವಸದಿಂದಲೂ ಬೇನೆ ಬಿದ್ದಿದ್ದ ಆ ಊರ ಚನಮಲ್ಲಪ್ಪನೆಂಬ ಗೌಡನ ತಾಯಿಯು ಈಗ ಸಾಯುವಳೋ ಇನ್ನೊಂದು ಘಳಿಗೆಯಲ್ಲಿ ಸಾಯುವಳೋ ಹೇಗೆ ಮಾಡಬೇಕು ಮುದುಕೆಯ ಮರಣವಾದರೆ ಎಲ್ಲರೂ ಶ್ರಮಪಟ್ಟು ಬೆಳಗಾಗುವವರೆಗೂ ಸಿದ್ಧಮಾಡಿದ ಅಡಿಗೆಯಲ್ಲಾ ಕೆಟ್ಟು ಪುರಾಣ ಪ್ರಸ್ತವು ಅಷ್ಟಕ್ಕೆ ನಿಲ್ಲುತ್ತದೆ ಈ ಪ್ರಕಾರ ಸರ್ವರೂ ತಮ್ಮ ತಮ್ಮೊಳಗೆ ಮಾತಾಡುತ್ತಿರುವ ಮಾತು ಘನಮಠೇಶರ ಕಿವಿಯೊಳಗೆ ಬಿದ್ದು ಆಗ ಶಿವಯೋಗಿಗಳು ಸರ್ವರನ್ನೂ ತಮ್ಮ ಸನ್ನಿಧಿಗೆ ಕರೆಯಿಸಿ

ನೀವು ಮಾತಾಡುತ್ತಿರುವದು ನಮಗೆ ತಿಳಿದಿದೆ ನೀವು ಯಾವ ಸಂಶಯು ತಕ್ಕೊಳ್ಳದೇ ಸೂರ್ಯೋದಯಕ್ಕೆ ಸರಿಯಾಗಿ ಪಂಗ್ತಿಯು ಪ್ರಾರಂಭವಾಗುವಂತೆ ಪ್ರಯತ್ನ ಮಾಡಿರಿ ಬೇನೆಯಿಂದ ಬಳಲುವ ನಿಮ್ಮಗೌಡನ ಮಾತೆಯ ಮರಣವು ಇವತ್ತಿನದಿವಸವೇಕೆ ಇನ್ನೂ ಹತ್ತು ವರ್ಷದ ಅವಧಿ ಇದೆ.

ನೀವು ಯಾವ ಸಂಶಯು ತಕ್ಕೊಳ್ಳದೆ ಶರಣಬಸವನ ಪುರಾಣ ಶೇವೆಯನ್ನು ಶ್ರದ್ಧೆಯಿಂದ ಮಾಡಿರಿ ಎಂದು ಎಲ್ಲರಿಗೂ ಆಜ್ಞಾಪಿಸಲು ಅವರೆಲ್ಲರೂ ಮಹಾತ್ಮರ ವಾಣಿಯು ಎಂದಾದರೂ ಸುಳ್ಳಾಗುವದುಂಟೇ ಎಂದು ಮತ್ತಷ್ಟು ಇಮ್ಮಡಿ ಆನಂದವುಳ್ಳವರಾಗಿ ಘನಮಠೇಶರ ಆಜ್ಞೆಯುಂತೆ ಪ್ರಾತಃಕಾಲದ ಪವಿತ್ರ ಸಮಯಕ್ಕೆ ಸರಿಯಾಗಿ ಗಣತೃಪ್ತಿಯನ್ನು ಪ್ರಾರಂಭಮಾಡಿ ಕೂಡಿದ ಗಣಸಮೂಹಕ್ಕೆ ತಾಂಬೂಲ ದಕ್ಷಿಣೆಗಳಿಂದ ತೃಪ್ತಿಪಡಿಸಿ ತಾವೂ ಶರಣಬಸವನ ಪ್ರಸಾದ ಕೈಕೊಂಡು ಪುರಾಣ ಮೆರವಣಿಗೆಯನ್ನು ಬಹುಸಂಭ್ರಮದಿಂದ ಸಾಂಗಗೊಳಿಸಿ ಘನಮಠೇಶರ ಮ ಹಿ ಮೆ ಯ ನ್ನು ಮನಸ್ವೀಕೊಂಡಾಡಿ ತಮ್ಮ ಪ್ರಾರ್ಥನೆಯು ಮೇರೆಗೆ ತಮ್ಮ ಗ್ರಾಮಕ್ಕೆ ಬಂದು ಪುರಾಣಕಾರ್ಯವನ್ನು ಸಾಂಗವಾಗಿ ಸಮಾಪ್ತಗೊಳಿಸಿದ್ದಕ್ಕೆ ಕೃಜ್ಞತಾಭಾವದಿಂದ ಸರ್ವರೂ ಶಿವಯೋಗಿಗಳ ಸನ್ನಿಧಿಗೆ ಬಂದು ಸಾಷ್ಟಾಂಗವೆರಗಲು ಘನಮಠೇಶರು ಸರ್ವರಿಗೂ ಆಶೀರ್ವಾದ ರೂಪದಿಂದ ಭಕ್ತರಿರಾ ನೀವು ತ್ರಿಕರಣಪೂರ್ವಕವಾಗಿ ಮಾಡಿದ ಶರಣನ ಸೇವೆಯನ್ನು ಕಂಡು ಮನಸ್ಸಿಗೆ ಮಹದಾನಂದವಾಯಿತು. ಸದಾ ಆ ದಾಸೋಹ ಮೂರ್ತಿಯಾದ ಶರಣಬಸವನು ನಿಮ್ಮಗಳಿಗೆ ಆಯುರಾರೋಗ್ಯ ಭಾಗ್ಯಾದಿಗಳನ್ನು ಅನುಗ್ರಹಿಸಲಿ

ಬಹಳ ಹೇಳುವದೇನು ಶಿವಾಂಶಸಂಭೂತರಾದ ನಾವು ಶಿವನ ಸ್ವರೂಪಿಗಳಾದ ಗುರು ಲಿಂಗ ಜಂಗಮ ಇವುಗಳ ಹೊರ್ತಾಗಿ ಅನ್ಯಮತದ ದೇವತೆಗಳನ್ನು ಪೂಜಿಸಬಾರದೆಂದು ಫಣದಿಂದಿರುವದೇ ನಿಜ

ವಾದ ಪಾತಿವೃತ್ಯಧರ್ಮ ಶರಣ ಸತಿ ಲಿಂಗ ಪತಿ ಎಂಬ ಧರ್ಮಶಾಸ್ತ್ರದ ತತ್ವವನ್ನರಿತು ಸತಿ ಪತಿ ನ್ಯಾಯದಂತೆ ಸಮರಸವಾಗಿ ನಡೆದು ಅಂತ್ಯಕ್ಕೆ ಶಿವನೊಳೈಕ್ಯವಾಗುವದೇ ಬಸವಾದಿ ಶಿವಶರಣರ ವಚನಶಾಸ್ತ್ರದ ರಹಸ್ಯ ಇದಕ್ಕೆ ವ್ಯತಿರಿಕ್ತವಾಗಿ ನಡೆದಲ್ಲಿ ವೀರಶೈವರಾದ ನಿಮಗೆ ಪರಮತೀಯ ರಿಂದ ಅಪಹಾಸ್ಯ ಎಂದು ಮಹಾತ್ಮರ ಮುಖದಿಂದ ಬಂದಾಕ್ಷಣವೇ ಬೆಂಡೆಬೊಂಬಳಿಯ ಸರ್ವ ಭಕ್ತರು ಮಹಾತ್ಮರೆದುರಿನಲ್ಲಿಯೇ ಇನ್ನು ಮುಂದೆ ಗುರು ಲಿಂಗ ಜಂಗಮದ ಹೊರತಾಗಿ ಅನ್ಯಮತದ ಪ್ರತಿಮೆ ಗಳ ಪೂಜೆಯನ್ನು ಕನಸಿನಲ್ಲಿಯೂ ಸಹ ಮಾಡಲಾರೆವೆಂದು ತ್ರಿಕರಣ ಶುದ್ಧರಾಗಿ ಶಿವಯೋಗಿಗಳಿಗೆ ಸಾಷ್ಟಾಂಗಮಾಡಲು ಶಿವಯೋಗಿಗಳು ಭಕ್ತರಲ್ಲಿ ಬಹುದಿವಸದಿಂದಲೂ ಬೇರೂರಿದ ಅಜ್ಞಾನವು ಅಳಿದದ್ದಕ್ಕಾಗಿ ಆನಂದದಿಂದ ಆಗಲಿ ಭಕ್ತರೇ ಸದಾಶಿವನು ನಿಮಗೆ ಇದೇ ಪ್ರಕಾರವಾದ ಸದ್ಬುದ್ಧಿಯನ್ನೀಯಲಿ ಎಂದು ಅವರಿಗೆ ಆಶೀರ್ವದಿಶಿ ನಿಮ್ಮ ಇಚ್ಛೆಯ ಪ್ರಕಾರ ನಿಮ್ಮ ಕಾರ್ಯವೆಲ್ಲ ಕೈಗೂಡಿತು. ನಾವು ಪರಮಾತ್ಮನ ಪ್ರೇರ ಣೆಯಂತೆ ಪ್ರಯಾಣಮಾಡಲು ನಮಗೆ ಅಪ್ಪಣೆಯನ್ನು ಕೊಡಿರಿ ಎಂದು ಅವರಿಂದ ಬೀಳ್ಕೊಂಡು ದಕ್ಷಿಣದಿಕ್ಕಿಗೆ ಪ್ರಯಾಣಮಾಡಿದರು.

ಹಳ್ಳಿಪಳ್ಳಿಗಳನ್ನು ದರ್ಶನ ಮಾಡುತ್ತ ಕೋಡಾಲ್ ಎಂಬ ಗ್ರಾಮಕ್ಕೆಬಂದು ಆ ಗ್ರಾಮದ ಉತ್ತಮವಾದ ಮಠದಲ್ಲಿ ವಾಸಮಾಡಿ ತನ್ನ ನಿತ್ಯದ ಕ್ರಿಯಾದಿಗಳನ್ನು ಮುಗಿಸಿ ಆ ಗ್ರಾಮದ ಉತ್ತರ ದಿಕ್ಕಿ ನಲ್ಲಿದ್ದ ಪವಿತ್ರವಾದ ಭೂಮಿಯಲ್ಲಿ ತನ್ನ ಹಸ್ತದಿಂದಲೇ ಕೆಲವು ಬಿಲ್ವ ಪತ್ರಿಯ ಸಸಿಗಳನ್ನು ಹಚ್ಚಿ ಆರು ತಿಂಗಳವರೆಗೂ ತಾವು ಅಲ್ಲಿದ್ದು ತಾವು ಹಚ್ಚಿದ ಸಸಿಗಳಿಗೆಲ್ಲ ನೀರುಹಾಕಿ ಸಸಿಗಳು ದೊಡ್ಡವಾಗಿ ಬೆಳೆಯಲಿಕ್ಕೆ ಪ್ರಾರಂಭವಾದದ್ದನ್ನು ಕಂಡು ಆನದಿಂದ ಅಲ್ಲಿಯ ಭಕ್ತರಿಗೆ ಇವುಗ ಳನ್ನು ಬಹು ಭಕ್ತಿಯಿಂದ ಜೋಪಾನಮಾಡಿದರೆ ಮುಂದೆ ಉತ್ತಮವಾದ ಬಿಲ್ವ ವನವಾಗುತ್ತದೆ. ಈ ಪತ್ರಿಯವನ ಇರುವವರೆಗೂ ನಿಮ್ಮ ಕೀರ್ತಿಯು ಜಗತ್ತಿನಲ್ಲಿ ಪ್ರಸಾರವಾಗುತ್ತದೆ. ಎಂದು ಅವರಿಗೆ ಅರುಹಿ ಚಿತ್ತಜಾರಿಯ ಪ್ರೇರಣೆಯಂತೆ ಚಿತ್ತಬಂದಕಡೆ ಪ್ರಯಾಣಮಾಡುತ್ತ ವಾಲ್ಮೀಕಿರಾಜನ

ಆಡಳಿತಕ್ಕೆ ಒಳಪಟ್ಟ ಸುರಪುರವೆಂಬ ರಾಜಧಾನಿಯನ್ನು ಪ್ರವೇಶಿಸಿ ಎಲ್ಲಿ ನೋಡಿದರೂ ಮೂರು ನಾಮಗಳಿಂದ ಅಂಕಿತರಾದ ಪರಮತೀಯರನ್ನು ಕಂಡು ಶಿವಭಕ್ತರ ಸುಳವು ಸಹ ಇಲ್ಲದ ಈ ಗ್ರಾಮದಲ್ಲಿ ಶಿವಾರ್ಚನೆಯನ್ನು ಹೇಗೆಮಾಡುವದು ಎಂದು ಸಂಶಯವುಳ್ಳವರಾಗಿ ಅಲ್ಲಿ ನಿಲ್ಲದೆ ಹಾಗೇ ಮುಂದೆ ಪ್ರಯಾಣಮಾಡಿ ಸುರಪುರಕ್ಕೆ ಸಮೀಪದಲ್ಲಿ ಶಿವಭಕ್ತರಿಂದ ಸಮೃದ್ಧವಾದ ಬಿಜಾಸ್ಪರವೆಂಬ ಗ್ರಾಮಕ್ಕೆ ಬಂದರು.

ಆಚಾರದಲ್ಲಿ ಅಧಿಕವಾದ ಗಣಾಧೀಶ್ವರರ ಮಠದಲ್ಲಿ ವಾಸಮಾಡಿ ಮಠದಲ್ಲಿಯೇ ಸ್ನಾನಾದಿ ಶಿವಾರ್ಚನೆಯನ್ನು ಮುಗಿಸಿಕೊಂಡು ಗ್ರಾಮದಲ್ಲಿದ್ದ ಗೌಡ ದೇಸಾಯಿ ಮುಂತಾದ ಭಕ್ತರ ಮನೆಗೆ ಕಂತೆ ಭಿಕ್ಷಕ್ಕೆ ಹೋಗಿ ಅವರ ಮನೆಯಲ್ಲಿದ್ದ ಅನ್ಯಮತದ ದೇವರುಗಳನ್ನೂ ದೇವರ ಗದ್ದುಗೆಯನ್ನೂ ನೋಡಿ ತನ್ನ ಮನಸ್ಸಿನಲ್ಲಿ ಶಿಡಿಮಿಡಿಗೊಂಡು ಮಠಕ್ಕೆ ಬಂದು ತಾನು ತಂದ ಭಿಕ್ಷಾನ್ನವನ್ನು ಲಿಂಗಾರ್ಪಿತಮಾಡಿಕೊಂಡು ನಂತರ ಸಕಲಭಕ್ತರನ್ನು ಮಠಕ್ಕೆ ಕರೆಯಿಸಿಕೊಂಡು ಅವರಿಗೆ ಶಾಸ್ತ್ರಸಮ್ಮತವಾದ ಶಿವಶಿದ್ಧಾಂತವನ್ನು ಬೋಧಿಸಿ ಬಹು ದಿವಸದಿಂದ ಬೇರೂರಿದ ಅನ್ಯಮತದ ದೇವಪೂಜೆಯನ್ನು ಅವರಿಂದ ಅಗಲಿಸಿ ಸಕಲ ಭಕ್ತರ ಮನೆಯೊಳಗೆ ಇತರ ದೇವರನ್ನಿಟ್ಟ ಗದ್ದುಗೆಯನ್ನು ಸಹ ಕಿತ್ತೊಗಿಸಿ ಸಕಲರಿಗೂ ಬಸವಬೋಧಾಮೃತದಿಂದ ಭಕ್ತಿಯು ನೆಲೆಗೊಳ್ಳುವಂತೆ ಮಾಡಿ ಆ ಊರಲ್ಲಿ ಕುಡಿಯುವ ಸವಿನೀರಿನ ಅಭಾವವಿರುವದನ್ನು ಕಂಡು ಆ ಊರ ಹಿಂದೆ ದಿನ್ನೆಯಮೇಲೆ ಹಿಂದಕ್ಕೆ ಬಹು ಶ್ರಮಪಟ್ಟು ತೆಗೆದರೂ ನೀರು ಬೀಳದೆ ಇದ್ದ ಹಾಗೆ ಹಾಳು ಭಾವಿಯೊಂದನ್ನು ಘನಮಠಾರ್ಯರು ತಮ್ಮ ಅಮೃತ ಹಸ್ತದಿಂದ ದಿನಾಲು ಅಲ್ಲಿಗೆ ಹೋಗಿ ಅಗಿಯುವದನ್ನು ಕಂಡು ಭಕ್ತರೆಲ್ಲರೂ ಆಶ್ಚರ್ಯದಿಂದ ಅನಂತಕಡೆ ಅಮಾನುಷ ಕೃತಿಗಳನ್ನೆಸಗಿದ ಮಹಾತ್ಮರ ಮಹಿಮೆಯು ಯಾರಿಗೂ ತಿಳಿಯಲಸಾಧ್ಯವೆಂದು ಶಿವಯೋಗಿಗಳು ಅಪ್ಪಣೆಯಂತೆ ಸರ್ವರೂ ಕೂಡಿ ಆ ಭಾವಿಯನ್ನಗಿಯಲು ಒಂದು ಆಳಿನಳತೆ ಅಗಿಯುವದರೊಳಗಾಗಿ ಅಮೃತಕ್ಕೆ ಸಮಾನವಾದ ನೀರು ಹೊರಟು ಎಲ್ಲರೂ ನೋಡ ನೋಡುತ್ತಿರುವಲ್ಲಿ

ಭಾವಿಯು ನೀರಿನಿಂದ ತುಂಬಿದ್ದನ್ನು ನೋಡಿ ಮಹಾತ್ಮರ ಅಗಾಧ ಕೃತಿಗೆ ಆನಂದಾಶ್ಚರ್ಯವುಳ್ಳವರಾದರು.

ಆ ಭಾವಿಗೆ ಇಂದಿಗೂ ನಾಗಭೂಷಣರ ಭಾವಿಯೆಂದು ಕರೆಯುವದು ರೂಢಿಯಾಗಿದೆ. ಈ ಪ್ರಕಾರ ಘನಮಠೇಶ ಶಿವಯೋಗಿಗಳು ತಾವು ಹೋದ ಹೋದಲ್ಲಿ ಹೊಸ ಹೊಸ ಕೃತಿಗಳನ್ನು ತೋರುತ್ತ ಭಕ್ತರರ್ಪಿಸುವ ಸೇವೆಯನ್ನು ಸ್ವೀಕರಿಸುತ್ತ ಹೈದರಾಬಾದ ರಾಜ್ಯಕ್ಕೆ ಒಳಪಟ್ಟ ಸೀಮೆಯನ್ನು ದಾಟಿ ವಿಜಾಪೂರ ಜಿಲ್ಲೆಯಲ್ಲಿ ಪರಮ ಪವಿತ್ರಗಳಾದ ಕೃಷ್ಣಾ ಮಲಾಪಹಾರಿಣೀ ನದೀದ್ವಯಗಳಿಂದ ಕೂಡಿ ಪವಿತ್ರ ಸಂಗಮ ಕ್ಷೇತ್ರವೆನಿಸಿ ಕೂಡಲಸಂಗಮೇಶ್ವರನಿಂದ ಪ್ರಸಿದ್ಧವಾದ ಪುಣ್ಯಕ್ಷೇತ್ರವನ್ನು ಕಾಣುವಭಿಲಾಷೆಯಿಂದ ಪಶ್ಚಿಮಾಭಿ ಮುಖಿಯಾಗಿ ಪ್ರಯಾಣ ಮಾಡುತ್ತ ಮಾರ್ಗದಲ್ಲಿ ಅನಂತ ಗ್ರಾಮಗಳಿಗೆ ಭೆಟ್ಟಿಕೊಟ್ಟು ಭಕ್ತಾದಿಗಳ ಬಂಧನಗಳನ್ನು ತಮ್ಮ ಬೋಧಾಮೃತದಿಂದ ಬಯಲುಮಾಡುತ್ತ ಕೂಡಲಸಂಗಮನಾಥನ ಕ್ಷೇತ್ರಕ್ಕೆ ಮುಟ್ಟುವವರಾಗಿ ಮನಸ್ಸಿನಲ್ಲಿ ಮಹಾ ಆನಂದ ಹೊಂದಿದರು.

೭ ನೆಯ ಪ್ರಕರಣಂ ಸಮಾಪ್ತಂ



# ೮ ನೆಯ ಪ್ರಕರಣ



ಪದ:— ನೋಡುತಲಿ ಶ್ರೀ ಸಂಗಮೇಶನ।
ಪಾಡುತಲಿ ಶಿವನಾಮ ಮನದೊಳು।
ನಾಡಿನಲಿ ಹೆಸರಾದ ಬಾಗೇವಾಡಿಯೊಳು ಬಂದೂ॥
ನಾಡೆ ಶಿವಚಿತ್ಕಳೆಯು ಭುವನ-।
ಕ್ಕಾಡಲೇಂ । ತಾನಿಳಿದತೆರದಿಹ॥
ಗಾಢ ಬಸವನನೋಡಿ ಮುದ್ದೇಬಾಳಕ್ಕೈದಿದನೂ ॥೧॥

ಮರ್ತ್ಯಲೋಕದ ಮಾನವರಲ್ಲಿ ಭಕ್ತಿಯ ಭಾವವು ಬೆಳೆದು ಭೂತಲದಲ್ಲಿ ಶಿವಭಕ್ತಿಯು ಶಾಶ್ವತವಾಗಿ ಉಳಿಯಲೆಂಬ ಸದುದ್ದೇಶ ದಿಂದಲೇ ಶಿವನು ಶಿವಲಿಂಗಗಳ ರೂಪವಾಗಿ ಮರ್ತ್ಯದ ಮಹಾ ಮಹಾ ಕ್ಷೇತ್ರಗಳಲ್ಲಿ ನೆಲಸಿರುವಂತೆ ಕರ್ನಾಟಕದ ಮಧ್ಯಸ್ಥಾನವಾದ ಮತ್ತು ಉಭಯ ನದಿಗಳ ಸಂಗಮದಿಂದ ಪವಿತ್ರವಾದ ಈ ಪುಣ್ಯಕ್ಷೇತ್ರದಲ್ಲಿ ಕನ್ನಡ ವಾಂಗ್ಮಯಕ್ಕೆ ಕಾರಣೀಭೂತರಾದ ಬಸವಾದಿ ಶಿವಶರಣರ ಭಕ್ತಿಯ ಬೆಳಕನ್ನು ಭೂತಳದಲ್ಲಿ ಬೆಳಗಲಿಕ್ಕೆ ಪರಶಿವನೇ ಶಿವಲಿಂಗ ರೂಪವಾಗಿ ಕೂಡಲಸಂಗಮನಾಥನೆಂಬ ನಾಮದಿಂದ ಈ ಸ್ಥಾನದಲ್ಲಿ ನೆಲೆಸಿದ್ದು ಕರ್ನಾಟಕದ ವೀರಶೈವರ ಪುಣ್ಯವಿಶೇಷವೆಂದೇ ಹೇಳಬಹುದು ಯಾಕೆಂದರೆ ಭಕ್ತಾಗ್ರೇಸರನಾದ ಬಸವೇಶ್ವರನು ಆದಿಯಿಂದಲೂ ಅಂತ್ಯ ದವರೆಗೂ ತನ್ನ ಪ್ರಪಂಚವನ್ನೆಲ್ಲ ಈ ಕೂಡಲಸಂಗಮನಾಥನ ಸಾಕ್ಷಿ ಯಾಗಿಯೇ ಸಮಾಪ್ತಿಗೊಳಿಸಿದ್ದಾನೆ.

ಹಿಂದಿನ ಶಿವಶರಣರು ಶಿವಸಾಕ್ಷಿಯಾಗಿ ಶಿವನನ್ನು ಸಾಕ್ಷಾತ್ಕಾರ ಮಾಡಿಕೊಂಡು ತಮ್ಮ ನಿತ್ಯ ಪ್ರಪಂಚವನ್ನು ಮಾಡಿ ಮರ್ತ್ಯದಿಂಡ ಮರೆ

ಯಾಗಿದ್ದರೂ ಅವರು ಸಮಾಜಕ್ಕೆಮಾಡಿದ ಸಂಸ್ಕೃತಿಯು ಮಾತ್ರ
ಎಂದೆಂದಿಗೂ ಅಚ್ಚಳಿಯದ ವಜ್ರಕವಚವಾಗಿದೆ. ಮಹಾತ್ಮರ ಮನೋ
ಬಯಕೆಗಳು ಪ್ರಪಂಚದ ಪರೋಪಕಾರಕ್ಕಾಗಿಯೇ ಪರಿಸಮಾಪ್ತಿ
ಗೊಂಡಿವೆ ವಿಶಾಲ ಹೃದಯರಾದ ನಮ್ಮ ಘನಮಠೇಶರೂ ಸಂಕ್ಷಿಪ್ತ
ವಾದ ತಮ್ಮ ಸಂಸಾರದಲ್ಲಿಯೇ ತಮ್ಮ ಮನಸ್ಸನ್ನು ಸಂಕುಚಿತಗೊಳಿ
ಸದೆ ತನ್ನ ಸಮಾಜವನ್ನು ಸರ್ವಾಂಗಸುಂದರಗೊಳಿಸಲು ಹಿಂದಿನ
ಪುರಾತನರ ಶಿವಶರಣರ ತತ್ವಗಳನ್ನೇ ತನ್ನ ಸಮಾಜಕ್ಕೆ ಬೋಧ
ಮಾಡುತ್ತ ಕರ್ನಾಟಕದ ಬಹುಭಾಗದಲ್ಲಿ ಸಂಚಾರಮಾಡುತ್ತ ತನ್ನ
ಮನಸ್ಸಿನ ಅಧಿದೇವನಾದ ಬಸವನು ಭಕ್ತಿಯ ಆವೇಶದಲ್ಲಿ ಬೆರೆದು
ಹೋದ ಕೂಡಲಸಂಗಮನಾಥನನ್ನು ದರ್ಶನಮಾಡಿಕೊಂಡು ಮುಂದೆ
ಕರ್ನಾಟಕವನ್ನೆಲ್ಲ ಸಂಚಾರಮಾಡಬೇಕೆಂಬ ಸದುದ್ದೇಶವುಳ್ಳವರಾಗಿ
ಸಂಗಮನಾಥನಲ್ಲಿಗೆ ಬಂದು ಸಂಗಮನಾಥನ ಸಮ್ಮುಖದಲ್ಲಿ ನಿಂತು
ಅಹಹಾ ಸುರನದಿಗಳಿಂದ ಸುತ್ತುವರಿದು ಬಸವರಸನಿಗೆ ಗುರುವಾ
ಆತನು ಗೈದ ಕಾಯಕಗಳಿಗೆಲ್ಲ ಆಧಾರಭೂತನಾಗಿ ಆತನ ಕೀರ್ತಿಯ
ಅಜರಾಮರವನ್ನಾಗಿ ಮಾಡಿದ ಮಹಾತ್ಮಾ ಸಂಗಮೇಶಾ ಸಂಗಮ
ನಾಥಾ ಎಂದು ನಾನಾಪ್ರಕಾರವಾಗಿ ನುತಿಸಿ ಭವ್ಯವಾದ ದೇವಾ
ಯದ ಸೊಬಗನ್ನೆಲ್ಲ ಸಾಂದ್ರವಾಗಿ ಕಣ್ದಣಿಯುವಂತೆ ನೋಡಿ ನಂತ
ನದೀದ್ವಯಗಳೆರಡೂ ಒಂದಾಗಿ ಹರಿಯುವ ಪಾವನಸ್ಥಾನವಾದ ಕೂಡ
ಸಂಗಮನಾಥನಲ್ಲಿ ಮಿಂದು ಮಡಿಯಾಗಿ ಮಾಹೇಶ್ವರರ ಮಠದಲ್ಲಿ ತನ
ನಿತ್ಯಕರ್ಮಗಳನ್ನು ತೀರಿಸಿಕೊಂಡು ದೇವಾಲಯದ ಪೂರ್ವದ್ವಾರ
ಮುಂದೆ ನದೀದಂಡೆಯಲ್ಲಿ ಒಂದು ಸ್ಥಾನವನ್ನು ನೋಡಿ ಅಲ್ಲಿ ಎರಡು
ಸಣ್ಣ ಬೇವಿನ ಸಸಿಗಳನ್ನು ಕಂಡು ಅಲ್ಲಿರ್ದ ಅರ್ಚಕಾದಿಗಳನ್ನು
ಕರೆದು ಈ ಸಸಿಗಳನ್ನು ನೀವು ಜೋಪಾನಮಾಡಿರಿ ಇವು ಮುಂದೆ
ವಿಶಾಲವಾಗಿ ಬೆಳೆದು ಸಂಗಮನಾಥನ ಜಾತ್ರೆಗೆ ಬಂದು ಬೇಸಿಗೆ
ಬಿಸಿಲಿನಿಂದ ಬಳಲುವ ಯಾತ್ರಿಕರಿಗೆ ತಮ್ಮ ತನಿನೆಳಲಿನಿಂದ ತೃಪ್ತಿ
ಯನ್ನೀಯುತ್ತೀವೆ ಈ ಪ್ರಕಾರ ಎಲ್ಲರಿಗೂ ಹೇಳಿ ತಮ್ಮ ಅಮೃತ
ಹಸ್ತದಿಂದ ಸಸಿಗಳ ಸುತ್ತಲಿರುವ ಕಸವನ್ನು ಕಿತ್ತು ಬಿಂದು ತೋರಿಸಿ

ಸ್ಥಾನವೇ ಇಂದಿಗೂ ಘನಮಠೇಶರ ಸ್ಥಾನವೆಂದು ಜನರು ಹೇಳುವದಲ್ಲದೆ ಕೆಲವು ದಿವಸಗಳ ಹಿಂದೆ ಸಂಗಪ್ಪನವರೆಂಬ ಆಲಮೇಲದ ಫೌಜದಾರರು ಅಪಾರವಾದ ಹಣವನ್ನು ಖರ್ಚುಮಾಡಿ ಮೇರುವೆಯನ್ನು ಕಟ್ಟಿಸಿ ನಮ್ಮ ಪೂಜ್ಯ ಘನಮಠೇಶ ಶಿವಯೋಗಿಗಳು ಕುಳಿತುಬಂದ ಸ್ಥಾನದಲ್ಲಿ ಅಂದು ಅವರು ತೋರಿಸಿದ ಸಸಿಗಳು ಇಂದು ಮರಗಳಾಗಿರುತ್ತವೆ ಅವುಗಳ ಬುಡದಲ್ಲಿಯೇ ಗದ್ದುಗೆಯನ್ನು ಕಟ್ಟಿಸಿ ಬಸವಮೂರ್ತಿಯನ್ನು ಸ್ಥಾಪನೆ ಮಾಡಿ ತಮ್ಮ ನಾಮವನ್ನು ಸಾರ್ಥಕಮಾಡಿಕೊಂಡಿದ್ದಾರೆ.

ಪುಣ್ಯಪುರುಷರು ತಮ್ಮ ಪವಿತ್ರಕೃತಿಗಳಿಂದಲೇ ಸಮಾಜದ ಸಂಸ್ಕೃತಿಗಳನ್ನು ಕಾಯ್ದುಕೊಂಡು ಬಂದಿದ್ದಾರೆ. ಅಸ್ತು ಘನಮಠೇಶರು ಸಂಗಮ ಕ್ಷೇತ್ರದಲ್ಲಿ ಭವಿಷ್ಯತ್ಸೂಚನೆಯನ್ನು ಹೇಳಿ ಮುಂದೆ ಬಾಗೇವಾಡಿಯಲ್ಲಿ ಬಸವರಸನು ಹುಟ್ಟುವದಕ್ಕೆ ಮಾದಲಾಂಬಿಕೆಯ ವ್ರತಸ್ಥನಾದ ನಂದೀಶ್ವರನನ್ನು ನೋಡಬೇಕೆಂದು ಬಾಗೇವಾಡಿಗೆ ಬಂದು ಅಲ್ಲಿಯ ಬಸವಮೂರ್ತಿಯಂ ಕಂಡು ಹಿಂದಕ್ಕೆ ಅನಾಚಾರದಿಂದ ಅವನತಿಗೀಡಾದ ವೀರಶೈವ ಮತವನ್ನು ತನ್ನ ಸುಜ್ಞಾನ ಸುಬೋಧೆಗಳಿಂದ ಉದ್ಧಾರಮಾಡುವ ಮಗನನ್ನು ಮಾದಲಾಂಬಿಕೆಗೆ ಕರುಣಿಸಿದ ನಂದೀಶಾ ನಿನ್ನ ಮಹಿಮೆಯು ಅಗಾಧವಾದದ್ದು ಈ ಪ್ರಕಾರ ಸ್ತೋತ್ರ ಮಾಡಿ ಬಾಗೇವಾಡಿಯಲ್ಲಿ ಭಕ್ತರಿಂದ ಆದರಾತಿಥ್ಯವಂ ಹೊಂದಿ ಅಲ್ಲಿಂದ ಮುಂದೆ ಸದ್ಭಕ್ತರಿಂದ ಸಮೃದ್ಧವಾದ ಮುದ್ದೇಬಿಹಾಳವೆಂಬ ಗ್ರಾಮಕ್ಕೆ ಬಂದು ಆ ಊರ ಸಮೀಪದಲ್ಲಿ ನಾವದಗಿಯವರೆಂಬ ಅಡ್ಡಹೆಸರಿನ ಸದ್ಭಕ್ತರ ಹೊಲದಲ್ಲಿರುವ ಬಿಲ್ವವೃಕ್ಷವನ್ನು ಕಂಡು ಆ ಪವಿತ್ರವಾದ ಸ್ಥಾನದಲ್ಲಿ ತಮ್ಮ ಅನುಷ್ಠಾನಮಾಡಬೇಕೆಂಬ ಮನಸ್ಸುಳ್ಳವರಾಗಿ ಸಣ್ಣದೊಂದು ಗುಡಿಸಲನ್ನು ನಿರ್ಮಿಸಿ ಅಲ್ಲಿಯೇ ತಮ್ಮ ನಿತ್ಯಕರ್ಮಗಳನ್ನು ಮಾಡುತ್ತ ನಿತ್ಯಾನಂದದೊಳಿರುತ್ತಿದ್ದರು.

ಮುದ್ದೇಬಿಹಾಳದ ಭಕ್ತರು ಇವರ ಇರುವಿಕೆಯನ್ನು ತಿಳಿದು ಪ್ರತಿನಿತ್ಯ ತಮ್ಮಲ್ಲಿಗೆ ಬರಲಿಕ್ಕೆ ಪ್ರಾರಂಭವಾಗಲು ಬಂದ ಭಕ್ತರಿಗೆ

ಭಕ್ತಿಯ ಸ್ವರೂಪವನ್ನು ಬೋಧೆಮಾಡುತ್ತ ತಾವು ಎಲ್ಲಿದ್ದರೂ ಜಗತ್ತಿನ ಜನರು ತಾವು ಇದ್ದಲ್ಲಿಗೆ ಬರುವದನ್ನು ಕಂಡು ಘನಮಠೇಶರು ಇನ್ನು ಈ ಸ್ಥಾನವನ್ನು ಬಿಡಬೇಕೆಂದು ಮನಸ್ಸಿನಲ್ಲಿ ಆಲೋಚಿಸುತ್ತಿರಲು ಪ್ರತಿ ನಿತ್ಯ ತಮ್ಮ ಸೇವಾ ಶುಶ್ರೂಷೆಗಳನ್ನು ಮಾಡುತ್ತಿರುವ ಆ ಹೊಲದೊಡೆಯರಾದ ನಾವದಗಿಯವರಿಗೆ ನೀವು ಮಾಡುವ ನಿತ್ಯ ಸೇವೆಯಿಂದ ನಮ್ಮ ಪೂಜಾಫಲವು ನಿಮಗೆ ಲಭ್ಯವಾಯಿತು ನಿಮ್ಮ ನಿರ್ಮಲವಾದ ಭಕ್ತಿಯನ್ನು ಕಂಡು ನಮಗೆ ಅತಿಶಯ ಆನಂದವಾಗಿದೆ. ಪರಮಾತ್ಮನು ನಿಮ್ಮ ಮನೆತನಕ್ಕೆ ಸದಾ ಸದ್ಬುದ್ಧಿಯನ್ನು ಕೊಟ್ಟು ವಂಶಪರಂಪರಾಗತ ವಿದ್ಯೆಯು ನಿಮ್ಮ ಮನೆತನದಲ್ಲಿ ವೃದ್ಧಿಯಾಗಿ ಸದಾ ಗುರುಲಿಂಗಜಂಗಮದಲ್ಲಿ ಭಕ್ತಿಯುತರಾಗಿ ಬಹುಕಾಲ ಬಾಳಿರಿ ಎಂದು ಅವರಿಗೆ ಆಶೀರ್ವದಿಸಿದರು.

ಅದೇ ಗ್ರಾಮದ ಮೋಟಗಿ ಸಂಗಪ್ಪನೆಂಬ ಭಕ್ತನು ನಿತ್ಯ ತಮ್ಮಲ್ಲಿಗೆ ಬಂದು ಬಸವ ಬೋಧಾಮೃತವನ್ನು ಭಕ್ತಿಯಿಂದ ಕೇಳುತ್ತಿರಲು ಆತನ ಸರಳ ಭಕ್ತಿಯನ್ನು ಅರಿತು ಆತನಿಗೆ ಸಂಗಪ್ಪಾ ನಿನ್ನ ಮನೆತನಕ್ಕೆ ಪರಶಿವನು ಸರ್ವಸಂಪತ್ತನ್ನು ಅನುಗ್ರಹಿಸುತ್ತಾನೆ ಎಂದು ಆಶೀರ್ವಾದ ಮಾಡಿ ಮುದ್ದೇಬಿಹಾಳದ ಭಕ್ತರು ಎಷ್ಟು ಪ್ರಾರ್ಥಿಸಿದರೂ ಅವರ ಇಚ್ಛೆಯಂತೆ ಅಲ್ಲಿ ನಿಲ್ಲದೆ ಮುದ್ದೇಬಿಹಾಳದ ಸಮೀಪದಲ್ಲಿರುವ ಕವಡೀಮಟ್ಟಿ ನಾಲತವಾಡ ನಾಗರಬೆಟ್ಟಗಳೆಂಬ ಗ್ರಾಮಗಳನ್ನು ಕಂಡು ಅಲ್ಲಿಯ ಶಿವಭಕ್ತರಿಗೆಲ್ಲ ಮನಸ್ಸಂತೋಷಗೊಳಿಸಿ ನಾಗರಬೆಟ್ಟದಿಂದ ಅನಂತ ತೋಟಗಳಿಂದಲೂ ಸಕಲ ವಿದ್ಯಾ ವಿನಯಾದಿ ಗುಣಗಳಿಂದಲೂ ವೀರಶೈವಾಚಾರದ ನಡೆನುಡಿಗಳಲ್ಲಿ ನಿಪುಣರಾದ ಭಕ್ತರಿಂದಲೂ ಭರಿತವಾದ ಕುಂಟೋಜಿಯೆಂಬ ಗ್ರಾಮಕ್ಕೆ ಬಂದು ಮಳೆಯ ಬಸವೇಶ್ವರನೆಂಬ ದೇವಾಲಯದಲ್ಲಿ ನಿಶ್ಚಿಂತರಾಗಿ ಶಿವಧ್ಯಾನದಲ್ಲಿ ಕುಳಿತಿದ್ದರು.

ಸುತ್ತಲ ಹಳ್ಳಿಗಳಲ್ಲಿ ಭಕ್ತರ ಇಷ್ಟಾರ್ಥಗಳನ್ನು ಪೂರೈಸುತ್ತ ಸಂಚಾರ ಮಾಡುವ ಘನಮಠೇಶರು ನಮ್ಮ ಗ್ರಾಮಕ್ಕೆ ಬಂದು ಮಳೆಯ

ಬಸವೇಶ್ವರ ಗುಡಿಯಲ್ಲಿರುವರೆಂಬ ಸುದ್ದಿಯು ಗ್ರಾಮದೊಳಗೆಲ್ಲ ಕರ್ಣೋ ಪಕರ್ಣವಾಗಿ ಹಬ್ಬಲು ಗ್ರಾಮದ ಸರ್ವಭಕ್ತರೂ ಒಂದೆಡೆ ಸೇರಿ ನಮ್ಮ ಪುಣ್ಯ ವಿಶೇಶದಿಂದಲೇ ಮಹಾತ್ಮರು ನಮ್ಮ ಗ್ರಾಮಕ್ಕೆ ತಾವಾಗಿಯೇ ಬಂದಿದ್ದಾರೆ ಸರ್ವರೂ ಅವರ ದರ್ಶನಕ್ಕೆ ಹೋಗಿ ಧನ್ಯರಾಗೋಣ ಮತ್ತು ಅವರನ್ನು ಸಕಲ ಸಂಭ್ರಮದಿಂದ ಕರೆಕೊಂಡು ಬಂದು ಅವರ ಆಚಾರಕ್ಕನುಕೂಲವಾಗುವಂತೆ ಯೋಗ್ಯ ಸ್ಥಾನದಲ್ಲಿ ಅವರನ್ನು ಇಳಿಸ ಬೇಕೆಂಬ ಬಯಕೆಯುಳ್ಳವರಾಗಿ ಶೆಟ್ಟಿ ಶಾನಭೋಗ ಮಠ ಮಠಪತಿ ಗೌಡ ತಳವಾರ ಗ್ರಾಮದ ಗುರು ಹಿರಿಯರು ತಾಳ ಮೇಳದೊಡನೆ ಸಕಲ ಸಂಭ್ರಮದಿಂದ ಮಳಿಯ ಬಸವೇಶ್ವರ ದೇವಾಲಯಕ್ಕೆ ಬಂದು ಸರ್ವರೂ ಸಾಷ್ಟಾಂಗ ನಮಸ್ಕಾರ ಮಾಡಿ ಸರ್ವೇಶ್ವರನಂತೆ ತಪಃಶಕ್ತಿಯ ಪ್ರಭಾವ ದಿಂದ ಪರಿಶೋಭಿಸುವ ಶಿವಸ್ವರೂಪಿ ಶಿವಯೋಗಿಗಳನ್ನು ಕಂಡು ಆನಂದ ಭರಿತರಾದರು.

ತಮ್ಮೆಡೆಗೆ ಸಕಲ ವಿಧ ಸಂಭ್ರಮದಿಂದ ಬಂದ ಸಕಲ ಜನ ಸಮೂಹವನ್ನು ಕಂಡು ಹಸನ್ಮುಖಿಗಳಾಗಿ ಆದರದಿಂದ ಸರ್ವರಿಗೂ ಕೊಡ್ರಲಿಕ್ಕೆ ಹೇಳಿ ಅವರೆಲ್ಲರ ಮಧ್ಯದಲ್ಲಿ ಬಂದ ಆ ಊರ ಮಠದ ಚರ ವರ್ಯರನ್ನು ಕಂಡು ಅವರನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ನೀವೆಲ್ಲರೂ ಇಷ್ಟು ಸಂಭ್ರಮದೊಡನೆ ಇಲ್ಲಿಗೆ ಬರಲು ಕಾರಣವೇನೆಂದು ಪ್ರಶ್ನೆ ಮಾಡಿ ದರು ಸರ್ವರ ಸಮ್ಮತಿಯಿಂದ ಆ ಊರ ಹಿರೇಮಠದ ಗದಿಗೆಯ್ಯನೆಂಬ ವರು ಸಭೆಯಲ್ಲಿ ಎದ್ದು ನಿಂತು ಸರ್ವರನ್ನೂ ಶಾಂತಗೊಳಿಸಿ ಮಹಾ ತ್ಮರೇ ತಮ್ಮ ದಿವ್ಯ ಶಕ್ತಿಯಿಂದ ಜಗತ್ತನ್ನೇ ಪಾವನಗೊಳಿಸಲು ಹೊರಟ ತಮ್ಮ ದರ್ಶನದಿಂದ ಧನ್ಯರಾದೆವು

ತಮ್ಮ ಶುಭಾಗಮನವನ್ನು ತಿಳಿದು ಈಗ ತಮ್ಮ ಸನ್ನಿಧಿಗೆ ಬಂದವರಲ್ಲಿ ಇವರು ಆಚಾರನಿಷ್ಠ ಗುರು ವರ್ಗದ ಮಠಾಧೀಶರಾದ ರುದ್ರಸ್ವಾಮಿಗಳೆಂಬ ಚರವರ್ಯರು ಮತ್ತು ಭಕ್ತ ಶ್ರೇಷ್ಠರಾದ ಚನ್ನಬಸ ವಗೌಡರು ಮುದ್ದನಗೌಡರು ಉತ್ತಪ್ಪ ತಂಬ್ರಳ್ಳಿ ಬಸವಪ್ಪ ಇಂಗಳ

ಗೇರಿ ವೀರಸಂಗಪ್ಪನವರು ಇದಲ್ಲದೆ ನೇಗಿನಹಾಳ ವೀರಪ್ಪನವರು ಸಜ್ಜನರ ಚನ್ನಬಸಪ್ಪ ಅಪ್ಪಣ್ಣನೆಂಬುವರು ತಾಳೀಕೋಟೆಯ ಶಾನ ಭೋಗರ ಬಾಬಣ್ಣನೆಂಬ ಸದ್ಗೃಹಸ್ಥರೆಲ್ಲರೂ ತಮ್ಮ ಪವಿತ್ರ ಪಾದದರ್ಶ ನಾಪೇಕ್ಷಿಗಳಾಗಿ ಬಂದಿರುವರು. ಮತ್ತು ತಮ್ಮ ನಿತ್ಯ ನೇಮಾದಿಗಳಿಗೆ ಕೊರತೆಯಾಗದಂತೆ ತಮ್ಮ ಆಜ್ಞಾನುಸಾರ ಮಾಹೇಶ್ವರರ ಮಠಕ್ಕೆ ಕರೆದೊಯ್ಯಲು ಅವರ ಬಲವಾದ ಇಚ್ಛೆ. ತಾವಿಳಿದಿರುವ ಈ ಮಳೆಯ ಬಸವೇಶನ ದೇವಾಲಯುವಾದರೂ ಮಹತ್ವದ್ದಾಗಿದೆ. ಈ ದೇವಾಲ ಯಕ್ಕೆ ಪುರಾತನ ಕಾಲದಿಂದಲೂ ಪ್ರಸಿದ್ಧವಾದ ಒಂದು ಐತಿಹ್ಯವಿದೆ—

ಹಿಂದಕ್ಕೆ ಬಾಗೇವಾಡಿಯಿಂದ ಬಸವರಸನು ಕಲ್ಯಾಣಕ್ಕೆ ಕೂಡಲ ಸಂಗಮನಾಥನನ್ನು ದರ್ಶನ ಮಾಡಿಕೊಂಡು ಇದೇ ಮಾರ್ಗವಾಗಿ ಹೋಗುವಾಗ ನಮ್ಮ ಗ್ರಾಮಕ್ಕೆ ವಸ್ತಿ ಮಾಡಿ ತನ್ನ ಪ್ರತಿನಿತ್ಯದ ಚರ ದಾಸೋಹವನ್ನು ಇದೇ ಸ್ಥಾನದಲ್ಲಿ ಸಮಾಪ್ತಿಗೊಳಿಸಿ ಮುಂದಕ್ಕೆ ಪ್ರಯಾಣ ಸಿದ್ಧರಾಗಲು ಊರ ಭಕ್ತರೆಲ್ಲ ಬಹು ಸಂಭ್ರಮದಿಂದ ಬಸವೇ ಶ್ವರರನ್ನು ಕಳುಹಲು ಬಂದ ಸಮಯದಲ್ಲಿ ದೊಡ್ಡ ಮಳೆಯಾಗಿ ಪ್ರಯಾ ಣಕ್ಕೆ ಪ್ರತಿಬಂಧವಾದರೂ ತನ್ನನ್ನು ಕಳುಹಲಿಕ್ಕೆ ಬಂದ ಸಮಸ್ತ ಭಕ್ತಾ ದಿಗಳಿಗೆ ಸಂಗಮೇಶನು ನಿಮಗೆ ಸದಾ ಆಯುರಾರೋಗ್ಯ ಭಾಗ್ಯಾದಿ ಗಳನ್ನು ಕರುಣಿಸಲಿ ಎಂದು ಆಶೀರ್ವದಿಸಿ ಮುಂದಕ್ಕೆ ಪ್ರಯಾಣ ಮಾಡಲು ಬಸವೇಶ್ವರನನ್ನು ಕಳುಹಿ ಬಂದ ನಂತರ ಆ ಬಸವ ಮಹಾನು ಭಾವನು ನಮ್ಮ ಗ್ರಾಮಕ್ಕೆ ಬಂದ ಸ್ಮಾರಕಕ್ಕಾಗಿ ಆತನು ಬಂದ ಸಮ ಯಕ್ಕೆ ಮಳೆ ಕೊಟ್ಟು ಅನುಗ್ರಹಿಸಿದ ಕಾರಣ ಮಳೆಯ ಬಸವೇಶ್ವರನೆಂಬ ನಾಮಕರಣದಿಂದ ಈ ದೇವಸ್ಥಾನವನ್ನೂ ಇದೇ ಮಾರ್ಗವಾಗಿಯೇ ಬಸ ವಣ್ಣನು ಕಲ್ಯಾಣಕ್ಕೆ ಪ್ರಯಾಣ ಮಾಡಿದನೆಂದು ಸ್ಮಾರಕ ಉಳಿಯುವ ದಕ್ಕಾಗಿ ಮತ್ತೊಂದು ಹಾದಿಯ ಬಸವೇಶ್ವರನೆಂಬ ದೇವಸ್ಥಾನವನ್ನೂ ಅಂದಿನ ಕಾಲಕ್ಕೆ ಸ್ಥಾಪಿಸಿದ ಈ ಉಭಯ ದೇವಾಲಯಗಳು ಇಂದಿಗೂ ಪ್ರಸಿದ್ಧವಾಗಿವೆ.

ಈ ಪ್ರಕಾರ ಗದಿಗಯ್ಯನವರಿಂದ ಮಳೆಯ ಬಸವೇಶ್ವರ ದೇವ ಸ್ಥಾನದ ಪೂರ್ವ ವೃತ್ತಾಂತವನ್ನು ಕೇಳಿದ ಕೂಡಲೇ ಘನಮಠೇಶರು ಸರ್ವಭಕ್ತರಿಗೆ ನಾವು ಯಾವ ಸ್ಥಾನಕ್ಕೂ ಬರುವದಿಲ್ಲ ಇದೇ ಸ್ಥಾನವೇ ನಮಗೆ ಬಹು ಯೋಗ್ಯವಾಗಿದೆ. ಮತ್ತು ನಿಮ್ಮ ಗ್ರಾಮವೆಂದರೆ ಸಾಮಾನ್ಯವಲ್ಲ ಹಿಂದಕ್ಕೆ ಅನ್ಯ ಮತದ ಆಕ್ರಮಣದಿಂದ ಅಳಿದು ಹೋಗುತ್ತಲಿದ್ದ ವೀರಶೈವ ಮತವನ್ನೇ ಎತ್ತಿ ಹಿಡಿದ ಮಹಾನುಭಾವನಾದ ಬಸವರಸನ ಪಾದ ಧೂಳಿಯಿಂದ ಪವಿತ್ರವಾದುದಾಗಿದೆ. ಅಂದಿಗೆ ಆತನ ಅಮೃತ ವಾಣಿಯ ಆಶೀರ್ವಾದದ ಫಲವು ನಿಮ್ಮ ಗ್ರಾಮಕ್ಕೆ ಎಂದೆಂದಿಗೂ ಅಚ್ಚಳಿಯದ ವಜ್ರ ಕವಚವಾಗಿದೆ ಎಂದು ಸರ್ವರಿಗೂ ಅಪ್ಪಣೆ ಕೊಡುವಾಗ ಗದಿಗೆಯ್ಯನವರೆ ಮಗನ ಮುಂದಿನ ಭವಿಷ್ಯವನ್ನು ಹೇಳಲು ಸರ್ವರೂ ಆಶ್ಚರ್ಯವುಳ್ಳವರಾಗಿ ಶಿವಯೋಗಿಗಳ ಮಹಿಮೆಯನ್ನು ಮನಸ್ಸಿನಲ್ಲಿ ಕೊಂಡಾಡುತ್ತ ತಮ್ಮ ತಮ್ಮ ಆಲಯಂಗಳಿಗೆ ಗಮಿಸಿದರು.

ನಂತರ ಘನಮಠೇಶರು ಆ ಮಳೆಯ ಬಸವೇಶ್ವರ ದೇವಸ್ಥಾನದಲ್ಲಿ ತಮ್ಮ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಪ್ರತಿನಿತ್ಯ ಬರುತ್ತಿರುವ ಭಕ್ತಾದಿಗಳಿಗೆ ಸದ್ಬೋಧೆಯಂ ಮಾಡುತ್ತಿರಲು ಕೆಲವು ದಿವಸಗಳ ನಂತರ ಶಿವಯೋಗಿಗಳು ಸರ್ವ ಭಕ್ತರನ್ನು ಕೂಡ್ರಿಸಿಕೊಂಡು ನಿಮ್ಮ ಗ್ರಾಮದಲ್ಲಿ ನಿಮ್ಮ ಹಿಂದಿನ ಹಿರಿಯರು ಬಸವ ದೇವಸ್ಥಾನವನ್ನು ನಿರ್ಮಿಸಿ ಬಸವನಿಗೆ ಭಕ್ತಿಯನ್ನರ್ಪಿಸಿದರು. ಈಗ ನಾವು ನಿಮ್ಮಿಂದ ಆ ಬಸವನೇ ಅತ್ಯಂತ ಭಕ್ತಿ ಭಾವದಿಂದ ಸೇವೆ ಮಾಡಿದ ಅರವತ್ತು ಮೂರು ಮಂದಿ ಪುರಾತನರ ಸೇವೆಯನ್ನು ಮಾಡಿಸಬೇಕೆಂಬ ಬಯಕೆಯುಳ್ಳವರಾಗಿದ್ದೇವೆ. ಈ ಪವಿತ್ರ ಕಾರ್ಯವನ್ನು ನೀವೆಲ್ಲರೂ ನಿರ್ಮಲ ಮನಸ್ಸಿನಿಂದ ಮಾಡಿ ಶಾಶ್ವತವಾದ ಮೋಕ್ಷ ಸುಖವನ್ನು ಪಡೆಯಿರಿ. ಎಂದು ಘನಮಠೇಶರು ಅರುಹಲು ಸರ್ವಭಕ್ತರು ಮಹಾತ್ಮರ ಮಾತಿಗೆ ಪ್ರತಿಯನ್ನಾಡದೆ ಹಸಾದ ಎಂದು ಸಾಷ್ಟಾಂಗ ಹಾಕಲು ಶಿವಯೋಗಿಗಳು ಅರವತ್ತುಮೂರು ಮಂದಿ ಪುರಾತರಲ್ಲಿ ಪ್ರಥಮದವರಾದ ತಿರು ನೀಲಕಂಠರ ಚರಿತ್ರೆಯನ್ನು ವಿಶದವಾಗಿ ವರ್ಣಿಸಿ ಇಂಥಾ ಅನಂತ ಮಹಿ

ಮೊಗಳನ್ನೊಳಗೊಂಡ ಪುರಾತನರ ಪುರಾಣವನ್ನು ಶ್ರವಣ ಮಾಡಿಕೊಂಡು
ಪವಿತ್ರರಾಗಿರಿ.

ಇದೇ ಮಳೆಯ ಬಸವೇಶ್ವರ ದೇವಾಲಯದಲ್ಲಿ ಪುರಾತನರ
ಅರವತ್ತುಮೂರು ಮಂಟಪಗಳನ್ನು ರಚಿಸಿ ಆ ಮಂಟಪಗಳಲ್ಲಿ ಪುರಾತ
ನರ ಸ್ವರೂಪವಾದ ಕ್ರಿಯಾಮೂರ್ತಿಗಳನ್ನು ಕೂಡ್ರಿಸಿ ಅವರ ಪಾದ
ಪೂಜಾ ಮಾಡಿದರೆ ಜಗತ್ತಿನ ನಾನಾ ದಿಶೆಗಳಲ್ಲಿ ನಿಮ್ಮ ಕೀರ್ತಿಯು
ಪ್ರಸಾರವಾಗಿ ಅಂತ್ಯಕ್ಕೆ ಅಮರ ಸುಖವನ್ನು ಪಡೆಯುವಿರಿ ಎಂದು
ಭಕ್ತಾದಿಗಳ ಮನಾನಂದವಾಗುವಂತೆ ಬೋಧ ಮಾಡಿ ಆ ಗ್ರಾಮದ ಸರ್ವ
ಭಕ್ತರಿಂದ ಅರವತ್ತುಮೂರು ಮಂಟಪಗಳನ್ನು ರಚಿಸಿ ಆ ಮಳೆಯ ಬಸ
ವೇಶ್ವರ ದೇವಸ್ಥಾನದಲ್ಲಿಯೇ ಪುರಾತನರ ಪುರಾಣ ಶ್ರವಣ ಕಾರ್ಯ
ವನ್ನು ಆದಿಯಿಂದಲೂ ಅಂತ್ಯದವರೆಗೆ ಯಾವದಕ್ಕೂ ನ್ಯೂನತೆಬಾರದಂತೆ
ನಭೂತೋನ ಭವಿಷ್ಯತಿ ಎನ್ನುವ ಪೂರ್ವೋಕ್ತಿಯಂತೆ ಪುರಾಣ ಸಮಾ
ಪ್ತಿಯ ಕಾಲಕ್ಕೆ ಭೂರಿ ಗಣಾರಾಧನೆಯ ಸಮಯದಲ್ಲಿ ಭಯಂಕರ ಮೋಡ
ವು ಬಂದು ಮಳೆಗಾರಂಭವಾಗಿ ಮಾಹೇಶ್ವರರ ಭೋಜನಕ್ಕೆ ಭಗ್ನವುಂಟಾ
ಗಲು ನೆರೆದ ಭಕ್ತರೆಲ್ಲ ಘಾಬರಿಯಾಗಿ ತಾವು ಮಾಡಿದ ಪ್ರಯತ್ನವೇ
ಮಳೆಯಿಂದ ಹಾಳಾಗಲಿಕ್ಕೆ ಹತ್ತಿದ್ದನ್ನು ಕಂಡು ಶಿವಯೋಗಿಗಳ ಸನ್ನಿ
ಧಿಗೆ ಬಂದು ಬಿನ್ನೈಸಲು ಆಗ ಘನಮಠೇಶರು ಸರ್ವರನ್ನೂ ಸಮಾಧಾನ
ಗೊಳಿಸಿ ತಮ್ಮ ಕರವಸ್ತ್ರವನ್ನು ತಮ್ಮ ಕೈಯಿಂದ ಗಣಾರಾಧನೆಯ
ಸುತ್ತಲೂ ಬೀಸುತ್ತ ಪ್ರದಕ್ಷಿಣೆ ಮಾಡಲು ಸುತ್ತಲೂ ಭಯಂಕರವಾದ
ಮಳೆ ಆಗುತ್ತಿದ್ದರೂ ಆ ಮಳೆಯ ಬಸವೇಶ್ವರ ದೇವಸ್ಥಾನದ ಮಟ್ಟಿಗೆ ಮಾತ್ರ
ಮಳೆಯು ಬಾರದೆ ನಡೆದ ಗಣಾರಾಧನೆಯು ನಿರಾತಂಕವಾಗಿ
ನೆರವೇರಿತು.

ಇದನ್ನು ಕಂಡು ಕೂಡಿದ ಭಕ್ತಮಾಹೇಶ್ವರರ ಸಮೂಹವೇ
ಆನಂದಾಶ್ಚರ್ಯವುಳ್ಳವರಾಗಿ ಮನುಷ್ಯ ಮಾತ್ರರಾದವರಿಗೆಲ್ಲ ಇಂತ
ಅಮಾನುಷ ಕೃತಿಗಳನ್ನೆಸಗುವದು ಸಾಧ್ಯವೆ ಶಿವಯೋಗಿಗಳಾದ ಘನ
ಮಠೇಶರನ್ನು ಕೇವಲ ಶಿವನ ಅವತಾರವೆಂದೇ ಭಾವಿಸಿ ಭಕ್ತಿಯಿಂದ

ಇರುತ್ತಿರಲು ನಂತರ ನಾಗಭೂಷಣ ಶಿವಯೋಗಿಗಳು ಅದೇ ಊರ ಸಜ್ಜನರ ಚನ್ನಪ್ಪನೆಂಬ ಸದ್ಭಕ್ತನ ಪ್ರಾರ್ಥನೆಯ ಮೇರೆಗೆ ಮಾವಿನ ಮರಗಳಿಂದ ಮನೋಹರವಾದ ಹೊಲದಲ್ಲಿ ಒಂದು ಪರ್ಣಕುಟೀರವನ್ನು ಕಟ್ಟಿಕೊಂಡು ತಮ್ಮ ಅನುಷ್ಠಾನದಲ್ಲಿ ಆಸಕ್ತರಾಗಿ ಕುಟೀರಕ್ಕೆ ಸಮೀಪದಲ್ಲಿಯೇ ತಮ್ಮ ಕೈಯಿಂದಲೇ ಭಾವಿಯನ್ನು ತೆಗೆದು ಅಮೃತಕ್ಕೆ ಸಮವಾದ ಆ ಭಾವಿಯ ನೀರನ್ನೇ ತಮ್ಮ ನಿತ್ಯಕರ್ಮಾದಿಗಳಿಗೆ ಉಪಯೋಗಿಸಿಕೊಳ್ಳುವದಲ್ಲದೆ ಆ ಭಾವಿಯ ಸಮೀಪದಲ್ಲಿಯೇ ಕೆಲವು ಕಣಗಿಲ ಸಸಿಗಳನ್ನು ಹಚ್ಚಿ ಪ್ರೇಮದಿಂದ ಬೆಳೆಯಿಸಿ ಮನೋಹರವಾಗಿ ಮಾಡಿದ್ದರಿಂದ ನೋಡುವವರ ಕಣ್ಮನಂಗಳಿಗೆ ಋಷಿಗಳ ಆಶ್ರಮದಂತೆ ಕಂಗೊಳಿಸುತ್ತಿತ್ತು. ಅಲ್ಲಿಗೆ ಬಂದು ಹೋಗುವ ಭಕ್ತಾದಿಗಳೂ ಸಹ ತಂಪಾದ ನೀರನ್ನು ಕುಡಿದು ತಣಿಯುತ್ತಿದ್ದರು.

ಘನಮಠೇಶರು ಕೆಲವು ದಿವಸ ಅಲ್ಲಿ ವಾಸಮಾಡಿ ನಂತರ ಪರಮಾತ್ಮನ ಪ್ರೇರಣೆಯಿಂದ ಪ್ರಯಾಣ ಮಾಡಬೇಕೆಂಬ ಮನಸ್ಸುಳ್ಳವರಾಗಿ ನಿಷ್ಠಾಪರನಾದ ಚನ್ನಪ್ಪನನ್ನು ಕರೆದು ಆತನಿಗೆ ತಮ್ಮ ಪಾದುಕೆಗಳನ್ನೂ ಮಂತ್ರಪೂರಿತವಾದ ಭಸ್ಮದ ಘಟ್ಟಿಯನ್ನೂ ಕೊಟ್ಟು ಇವುಗಳನ್ನು ಸದಾ ನಿನ್ನ ಮನೆಯಲ್ಲಿ ಭಕ್ತಿಯಿಂದ ಪೂಜಿಸುತ್ತ ಹೋದರೆ ನಿನ್ನ ವಂಶ ಪರಂಪರಾಗತ ನಿಮ್ಮ ಮನೆತನಕ್ಕೆ ಧನಕನಕ ವಸ್ತ್ರವಾಹನಾದಿಗಳ ಕೊರತೆಯಾಗಲಾರದೆಂದು ಕರುಣಾ ದೃಷ್ಟಿಯಿಂದ ಆತನಿಗೆ ಆಶೀರ್ವದಿಸಿ ಅಭವ ಧ್ಯಾನದಲ್ಲಿಯೇ ಪ್ರಯಾಣ ಮಾಡಿದರು. ಘನಮಠೇಶರ ಪ್ರೇಮಕ್ಕೆ ಪಾತ್ರನಾದ ಸಜ್ಜನರ ಚನ್ನಪ್ಪನು ಅವರಿದ್ದ ಪರ್ಣಶಾಲೆಯ ಸ್ಥಾನದಲ್ಲಿ ಶಿಲಾಮಯವಾದ ಚೌಕಿಯನ್ನು ಕಟ್ಟಿಸಿ ಅವರ ಸ್ಮಾರಕವನ್ನು ಉಳಿಸಿದ್ದಾನೆ. ಈಗ್ಯೂ ಅದಕ್ಕೆ ಘನಮಠೇಶರ ಚೌಕಿಯೆಂದು ಜನರು ಅನ್ನುತ್ತಾರೆ. ಅವರು ಹಚ್ಚಿ ಬೆಳೆಯಿಸಿದ ಕಣಗಿಲ ಗಿಡಗಳೇ ಇಂದಿಗೂ ಪುಷ್ಪಭರಿತಗಳಾಗಿ ಪರಿಶೋಭಿಸುತ್ತಲಿವೆ. ಶಿವಯೋಗಿಗಳ ಪ್ರಸಾದ ವಾಣಿಯಂತೆ ಸಜ್ಜನರ ಚನ್ನಪ್ಪನ ಮನೆತನವು ಇಂತೆಗೂ ಯಾವದಕ್ಕೂ ಕೊರತೆಯಿಲ್ಲದ ಸರ್ವ ಭಾಗ್ಯಾದಿಗಳಿಂದ ಶಿವನು ಸಾಗಿಸಿದ್ದಾನೆ.

ಆ ಚನ್ನಪ್ಪನ ವಂಶಸ್ಥರು ತಮಗೆ ಸಕಲ ಸಂಪತ್ತನ್ನನುಗ್ರಹಿಸಿದ ಘನಮಠೇಶರಲ್ಲಿ ಇಂದಿಗೂ ಯಥಾ ಪ್ರಕಾರ ಭಕ್ತಿ ಭಾವವುಳ್ಳವರಾಗಿ ಬಹು ದೂರವಾದರೂ ಪೂಜ್ಯರ ಸಮಾಧಿಯುಳ್ಳ ಸಂತೆಕೆಲೂರಿಗೆ ಬಂದು ಪ್ರತಿ ವರ್ಷ ವೈಶಾಖ ಮಾಸದಲ್ಲಿ ಅವರು ಮಾಡುವ ಗಣಾರಾಧನೆಯನ್ನು ಇಲ್ಲಿ ವರ್ಣಿಸಿದರೆ ಅಪ್ರಸ್ತುತವೆನಿಸಬಹುದು ಕೆಲೂರಿಗೆ ಬಂದು ಜಂಗಮ ತೃಪ್ತಿ ಮಾಡಿ ಹೋಗುವವರೆಗೂ ಆ ಮನೆತನದವರು ಹೊಸಗೋದಿಯನ್ನು ಮುಟ್ಟಬಾರದೆಂಬ ಕಟ್ಟಳೆಯನ್ನು ಮೊದಲಿಸಿಂದಲೂ ನಡೆಯಿಸಿಕೊಂಡು ಬಂದಿದ್ದಾರೆ. ಅವರ ಸರಳವಾದ ಭಕ್ತಿಗೆ ಆ ಘನಮಠೇಶನು ಹಾಗೆಯೇ ಸರ್ವಾನುಕೂಲ ಕೊಟ್ಟು ಸಾಗಿಸಿದ್ದಾನೆ ಅಸ್ತು ಹೀಗೆ ಬರೆಯುತ್ತ ಹೋದಲ್ಲಿ ಅನ್ಯ ವಿಷಯವು ಅತಿಯಾಗಿ ಬೆಳೆದು ಪ್ರಸ್ತುತ ವಿಷಯ ಕುಂಠಿತವಾಗುವದರಿಂದ ಇಲ್ಲಿಗೆ ಈ ವಿಷಯವನ್ನು ಬಿಟ್ಟು ನಮ್ಮ ಮನಸ್ಸಿನ ಮುಖ್ಯ ಉದ್ದೇಶದಂತೆ ಮಹಾತ್ಮರ ಮಹಿಮಾಮೃತವನ್ನೇ ವಾಚಕವೃಂದಕ್ಕೆ ಪಾನಮಾಡಿಸುವಾ.

ನಮ್ಮ ನಾಗಭೂಷಣ ಶಿವಯೋಗಿಗಳು ಕುಂಟೋಜಿಯಿಂದ ಪೂರ್ವ ದಿಕ್ಕಿಗೆ ಪ್ರಯಾಣ ಮಾಡಲು ಮನಸ್ಸುಳ್ಳವರಾಗಿ ಭಕ್ತಾದಿಗಳಿಗೆಲ್ಲ ತಮ್ಮ ಪ್ರಯಾಣದ ವಿಷಯವನ್ನು ತಿಳಿಸಿದ ಕೂಡಲೇ ಗ್ರಾಮದ ಸರ್ವ ಭಕ್ತರು ಶಿವಯೋಗಿಗಳನ್ನು ತಮ್ಮ ಗ್ರಾಮ ಬಿಟ್ಟು ಕಳುಹಿಸಬಾರದೆಂಬ ಮನಸ್ಸುಳ್ಳವರಾಗಿದ್ದರೂ ಮಹಾತ್ಮರ ಮಾತಿಗೆ ಪ್ರತಿಯನ್ನಾಡದೆ ಅವರನ್ನು ಕಳುಹಲು ಊರ ಹೊರಗೆ ಬಂದು ಶಿವಯೋಗಿಗಳ ಸನ್ನಿಧಿಯಲ್ಲಿ ಮಹಾತ್ಮರೇ ಮುಂಗಾರಿ ಬಿತ್ತುವ ತತಿಯು ಹೋಗುವ ಪ್ರಸಂಗ ಬಂದರೂ ಇದು ವರೆಗೂ ಮಳೆಯಾಗದೆ ಇರುವದನ್ನು ನೋಡಿದರೆ ನಮಗೆ ಈ ವರ್ಷ ಬರವೇ ಬರಬಹುದೆಂಬ ಭಯವಾಗುತ್ತದೆ. ಭಕ್ತರ ಭಾಗ್ಯ ನಿಧಿಯಾದ ತಾವೂ ಸಹ ನಮ್ಮನ್ನಗಲಿ ಹೋಗುವದರಿಂದ ನಮಗೇನೋ ಈ ವರ್ಷ ಅರಿಷ್ಟ ಸೂಚನೆ ಎಂದು ಅರ್ಥವಾಗುತ್ತದೆ ಎಂದು ಭಕ್ತರು ಬಿನ್ನಹ ಮಾಡಿಕೊಳ್ಳಲು ನಮ್ಮ ಘನಮಠೇಶರು ತಮ್ಮ ಅಮೃತ ವಾಣಿಯಿಂದ ಅವರಿಗೆ ಆಶೀರ್ವಾದ ಮಾಡಿದ್ದೇನಂದರೆ ಜಗನ್ನಿ

ಯಾಮುಕನಾದ ಪರಮಾತ್ಮನು ಜಗತ್ತಿನ ಇರುವೆ ಎಂಭತ್ತುನಾಲ್ಕು ಲಕ್ಷ ಜೀವರಾಸಿಗಳಿಗೆ ಅಹರ್ನಿಶ ಅನ್ನ ಕೊಟ್ಟು ರಕ್ಷಿಸುವದರಲ್ಲಿ ದಕ್ಷನಾಗಿದ್ದಾನೆ. ಅಂದಮೇಲೆ ಆತನ ಮೇಲೆ ವಿಶ್ವಾಸವಿಟ್ಟು ಕಾರ್ಯ ಮಾಡುವದೊಂದೆ ನಮ್ಮ ಕರ್ತವ್ಯ ಕಾರಣ ನೀವು ಯಾವದನ್ನೂ ಚಿಂತಿಸದೆ ಶಿವನ ಮೇಲೆ ಭಾರ ಹಾಕಿ ಶಿವನಾಮವನ್ನುಚ್ಚರಿಸುತ್ತ ಸದ್ಯಃ ಪ್ರಾಪ್ತವಾದ ಮುಂಗಾರಿ ತತಿಯಲ್ಲಿ ಮಳೆಯಾಗದಿದ್ದರೂ ಒಣ ಮಣ್ಣನಲ್ಲಿಯೇ ಬೀಜ ಬಿತ್ತಿರಿ (ವಿಶ್ವಾಸ ಫಲದಾಯಕ) ಎಂಬ ಆರ್ಯೋಕ್ತಿಯಂತೆ ಅಭವನು ನಿಮ್ಮ ಚಿಂತೆಯನ್ನು ದೂರ ಮಾಡಿ ನಿಮ್ಮ ಕಾರ್ಯಕ್ಕೆ ಮಂಗಲವನ್ನುಂಟು ಮಾಡುತ್ತಾನೆ.

ಎಂದು ಎಲ್ಲರಿಗೆ ಸಮಾಧಾನ ಹೇಳುತ್ತಿರಲು ಸಜ್ಜನರ ಚನ್ನಪ್ಪನು ತನ್ನ ಮೂವರು ಮಕ್ಕಳನ್ನು ಕೂಡಿಕೊಂಡು ಮಹಾತ್ಮರ ಸನ್ನಿಧಿಯಲ್ಲಿ ಮಳೆಯಾಗದ ಈ ಕಾಲದಲ್ಲಿ ಬೆಳೆ ಬರುವದು ಕಠಿಣವಾಗಿದೆ. ಕುಟುಂಬ ನಿರ್ವಹಣಕ್ಕಾಗಿ ನಮ್ಮ ಹೊಲದಲ್ಲಿ ಭಾವಿಯನ್ನು ತೆಗೆಯಿಸಿ ತೋಟವನ್ನು ಮಾಡಿಯಾದರೂ ಕಾಲ ಕ್ಷೇಪ ಮಾಡುವ ಮನಸ್ಸಾಗಿದೆ ದಯಮಾಡಿ ತಾವು ನನ್ನ ಹೊಲದವರೆಗೆ ಬಂದು ನೀರು ಯಾವಸ್ಥಾನದಲ್ಲಿ ಸಮೃದ್ಧವಾಗಿರುವದೆಂಬುದನ್ನು ತಮ್ಮ ಕರುಣಾ ದೃಷ್ಟಿಯಿಂದ ಕಂಡು ಹಿಡಿದು ನಮಗೆ ತಿಳುಹಿಸಬೇಕೆಂದು ಪ್ರಾರ್ಥಿಸಲು ದಯಾ ಸಮುದ್ರನಾದ ಘನಮಹೇಶನು ತನ್ನನ್ನು ಕಳುಹಲಿಕ್ಕೆ ಬಂದ ಸಕಲ ಭಕ್ತರನ್ನುದ್ದೇಶಿಸಿ ಪುನಃ ನಾವು ಕೆಲವು ದಿವಸಗಳಲ್ಲಿ ನಿಮ್ಮ ಗ್ರಾಮಕ್ಕೆ ಬರುತ್ತೇವೆ. ನಾವು ಹೇಳಿದ ಪ್ರಕಾರ ಪರಮಾತ್ಮನ ಪವಿತ್ರ ನಾಮಸ್ಮರಣೆ ಮಾಡುತ್ತ ಬಿತ್ತಿಗೆಯ ಕೆಲಸವನ್ನು ಪೂರೈಸಿರಿ ಎಂದು ಆಶೀರ್ವದಿಸಿ ಅವರನ್ನು ಕಳುಹಿ ಚನ್ನಪ್ಪನ ಆಗ್ರಹದಂತೆ ಆತನ ಹೊಲಕ್ಕೆ ಹೋಗಿ ಹೊಲದ ನಾಲ್ಕೂ ಕಡೆಗೆ ಅಡ್ಡಾಡಿ ತಮ್ಮ ಮನಸ್ಸಿಗೆ ಬಂದ ಆ ಹೊಲದ ಮಧ್ಯ ಸ್ಥಾನವು ಎಟ್ಟೆಯಾಗಿದ್ದರೂ ಇದೇ ಸ್ಥಾನದಲ್ಲಿ ನೀವು ಭಾವೀ ಅಗಿಸಿದರೆ ಭಾವಿಯ ತುಂಬ ನೀರು ಬಂದು ನಿಮ್ಮ ಕಾರ್ಯಾನುಕೂಲವಾಗುತ್ತದೆ ಎಂದು ಅವರಿಗೆ ಹೇಳಿ ಹಾಗೆಯೇ ಮೊದಲು ಪೂರ್ವ

ದಿಕ್ಕಿಗೆ ಪ್ರಯಾಣ ಮಾಡಬೇಕೆಂದಿದ್ದ ತಾವು ದಕ್ಷಿಣ ದಿಕ್ಕಿರುವ ಯರ
ಗಲ್ಲು ಕೋಳೂರಗಳ ಮೇಲೆ ಹಾಯ್ದು ಕೃಷ್ಣಾ ನದಿಯ ದಂಡೆಯಲ್ಲಿರುವ
ಮಹಾಸತಿ ನೀಲಮ್ಮನವರ ಐಕ್ಯ ಸ್ಥಾನವನ್ನು ಕಂಡು ಆನಂದದಿಂದ
ಮುಂದಕ್ಕೆ ಮದರಿ ಎಂಬ ಗ್ರಾಮಕ್ಕೆ ಬಂದರು.

ಇಲ್ಲಿಯ ದೇಸಾಯಿಯವರು ಘನಮಹೇಶರು ಮಹಿಮಾಪುರು
ಷರೆಂದು ಕೇಳಿದ ಕಾರಣ ಅವರಲ್ಲಿ ಭಕ್ತಿಯುತರಾಗಿ ಅವರ ಶಿವಾರ್ಚ
ನೆಗೆ ಅನುಕೂಲವಾಗಲೆಂದು ಒಂದು ದೊಡ್ಡ ತಂಬಿಗೆಯ ಮೇಲೆ ತಮ್ಮ
ವಿಳಾಸವನ್ನು ಹಾಕಿಸಿ ಶಿವಯೋಗಿಗಳ ಸನ್ನಿಧಿಗೆ ಬಂದು ಅದನ್ನು
ಅವರ ಪಾದಕ್ಕರ್ಪಿಸಿ ನಮಸ್ಕಾರ ಮಾಡಲು ಘನಮಹೇಶರು ದೇಸಾ
ಯಿಯವರ ವಿಳಾಸವಿರುವ ತಂಬಿಗೆಯನ್ನು ತಮ್ಮ ಕೈಯಲ್ಲಿ ತಕೊಂಡು
ಆದನ್ನು ತಿರುತಿರುವಿ ನೋಡಿ ದೇಸಾಯರೇ ಬರೇ ತಂಬಿಗೆಯನ್ನು
ಹೊರಲಾರದ ನಾವು ಈ ತಂಬಿಗೆಯ ಮೇಲಿರುವ ನಿಮ್ಮ ನಾಮವನ್ನೆಲ್ಲಿ
ಹೊರ್ಲಿ ನಾನು ಕೊಟ್ಟಿರುವೆನೆಂಬ ಮಮಕಾರವುಳ್ಳ ಮನಸ್ಸಿನಿಂದ
ಅರ್ಪಿಸಿದ ನಿಮ್ಮ ತಂಬಿಗೆಯು ನಿಮಗೇ ಇರಲೆಂದು ಅವರ ತಂಬಿಗೆಯನ್ನು
ಅವರಿಗೆ ಕೊಟ್ಟು ಶಿವಭಕ್ತರಾದವರು ದಾನ ಮಾಡಬೇಕಾದರೆ ಶಿವನ
ಪದಾರ್ಥವು ಶಿವನಿಗೆ ಸಲ್ಲಲಿ ಎಂಬ ಸದ್ಭಾವನೆಯಿಂದ ದಾನ ಮಾಡಬೇಕು
ಎಂದು ಅವರಿಗೆ ದಾನಪದ್ಧತಿಯನ್ನರುಹಿದರು.

ಅಲ್ಲಿಂದ ಕೃಷ್ಣಾ ನದಿ ದಂಡೆಯಲ್ಲಿರುವ ಬಂಗಾರ ಗುಂಡ ರಕ್ಕ
ಸಗಿ ಹೊಳೆಹುನಕುಂಟೆ ಯರಗಲ್ಲ ಮೊದಲಾದ ಊರುಗಳನ್ನು ಸಂದ
ರ್ಶಿಸಿ ಭವಿಷತ್ಕಾಲದ ಸೂಚನೆಗಳನ್ನು ಸೂಚಿಸುವ ವಚನಗಳನ್ನು
ಕೆಲವು ಶತಮಾನಗಳ ಹಿಂದೆಯೇ ನುಡಿದು ಜಗತ್ಪ್ರಸಿದ್ಧರಾಗಿ ಹೋದ
ರುದ್ರಮುನಿಸ್ವಾಮಿಗಳೆಂಬ ಶಿವಶರಣರ ಸ್ಥಾನವಾದ ಕೊಡೇಕಲ್ಲೆಂಬ
ಪವಿತ್ರ ಗ್ರಾಮಕ್ಕೆ ಬಂದು ಹಿಂದಕ್ಕೆ ಕಲ್ಯಾಣ ಬಸವೇಶ್ವರರು ಕೊಡೇ
ಕಲ್ಲೆಂಬ ಗ್ರಾಮದಲ್ಲಿ ಒಂದೆರಡು ದಿವಸ ವಾಸಮಾಡಿ ಆ ಗ್ರಾಮದ
ಮತ ಮತಾಂತರ ವೈಷಮ್ಯವನ್ನು ಮಹಮ್ಮದೀಯ ಬ್ರಾಹ್ಮಣ ವೀರಶೈ

ನಾದಿ ಸರ್ವರಿಗೂ ಸಮಾನತ್ವದಿಂದ ದೇವನೊಬ್ಬ ನಾವು ಹಲವು ಎಂಬ ತಮ್ಮ ಅಮೃತ ವಾಣಿಯಿಂದ ಅವರಲ್ಲಿಯ ವೈಷಮ್ಯವನ್ನು ವಿನಾಶಮಾಡಿ ಹೋದದ್ದರಿಂದ ಅವರ ಸ್ಮಾರಕಕ್ಕಾಗಿಯೇ ಸಕಲ ಮತೀಯರೂ ಕೂಡಿ ಬಸವೇಶ್ವರ ದೇವಸ್ಥಾನವನ್ನು ಸ್ಥಾಪನೆ ಮಾಡಿ ಇಂದಿಗೂ ಸರ್ವ ಸಮಾಜದರೂ ಸಮಾನ ಭಾವನೆಯಿಂದ ನಡಕೊಳ್ಳುವ ಆ ಪವಿತ್ರ ಸ್ಥಾನಕ್ಕೆ ನಮ್ಮ ಘನಮಠೇಶರು ಬಂದು ತನ್ನ ಆರಾಧ್ಯದೇವನಾದ ಬಸವನು ತನ್ನ ಸಮಾಜದಲ್ಲಿ ಮಾಡಿದ ಅಸದೃಶವಾದ ಅದ್ಭುತ ಪವಾಡಗಳನ್ನು ಕಂಡು ಆನಂದ ಪಡುತ್ತ ಅಲ್ಲಿಂದ ಸಮೀಪದಲ್ಲಿರುವ ಸುತ್ತಲೂ ಕೃಷ್ಣಾ ನದಿಯಿಂದ ಸುತ್ತು ಹಾಕಿ ಮಧ್ಯದ ನಡುಗಡ್ಡೆಯಲ್ಲಿ ಪೂರ್ವಜರಿಂದ ಭದ್ರವಾಗಿ ಕಟ್ಟಲ್ಪಟ್ಟ ಕೋಟೆಯುಳ್ಳ ಸ್ಥಾನವು ಜಲದುರ್ಗವೆಂದು ಜಗತ್ತಿನಲ್ಲಿ ಪ್ರಸಿದ್ಧವಾಗಿದೆ.

ಅಲ್ಲಿಗೂ ಸಹ ನಮ್ಮ ಶಿವಯೋಗಿಗಳು ಸಂಚಾರ ಮಾಡಿ ಪರಶಿವನ ಪ್ರೇರಣೆಯಂತೆ ಅಲ್ಲಿಂದ ಉತ್ತರ ದಿಕ್ಕಿಗೆ ಪ್ರಯಾಣ ಮಾಡುತ್ತ ರಾಜನ ಕೋಳೂರ ಮಾಳೂರ ಮುಂತಾದ ಗ್ರಾಮಗಳನ್ನು ಸಂಚರಿಸುತ್ತ ಬಂಡೆಪ್ಪನಹಳ್ಳಿ ಸಾಲವಾಡ್ಗಿ ವೈಲೇಶ್ವರ ಮೊದಲಾದ ಊರುಗಳನ್ನು ದಾಟ ಮುಂದೆ ದೊಡ್ಡ ಊರಾದ ಮಂಗಲಪುರ ಅರ್ಥಾತ್ ತಾಳೀಕೋಟೆ ಎಂಬ ಗ್ರಾಮಕ್ಕೆ ಬಂದು ಅಲ್ಲಿ ಮುರಗೀಸ್ವಾಮಿಗಳಿರುವ ಪ್ರಸಿದ್ಧವಾದ ವಿರಕ್ತಮಠವನ್ನು ಕಂಡು ತಮ್ಮ ಸಮ್ಮುಖದಲ್ಲಿಯೇ ಸಿಂಹಾಸನಾ ರೂಢರಾಗಿ ಕುಳಿತಿರುವ ಮುರಗೀಸ್ವಾಮಿಗಳನ್ನು ತಾನು ಕಂಡರೂ ಸಹ ನಮಸ್ಕಾರಾದಿಗಳನ್ನು ಮಾಡದೆ ಮೌನಿಯಾಗಿ ಸುಮ್ಮನೆ ನಿಂತಿರುವ ಇವರನ್ನು ಮಠದೊಡೆಯರಾದ ಮುರಗೀ ಸ್ವಾಮಿಗಳು ದೂರದಿಂದಲೇ ನೋಡಿ ಇವನಾವನು ಇವನ ಲಾಂಛನಾದಿಗಳನ್ನು ನೋಡಿದರೆ ಜಂಗಮನಂತೆ ಕಂಡರೂ ಜಂಗಮಾಧಿಕಾರಿಗಳಾದ ನಮ್ಮ ಸನ್ನಿಧಿಗೆ ಬಂದು ನಮಸ್ಕಾರಾದಿಗಳನ್ನು ಮಾಡದೆ ಹಾಗೆ ನಿಂತಿರುವನಲ್ಲ ಇವನೆಂಥ ಅವಿವೇಕಿ ಎಂದು ಸ್ವಾಭಿಮಾನದಿಂದ ಸೀನಾರಪ್ಪ. ಜಂಗಮ ಸನ್ನಿಧಿಗೆ ಬಂದರೂ ನಮಸ್ಕಾರ ಮಾಡದೆ ಹಾಗೇ ನಿಂತಿರುವಿಯಲ್ಲ ನಿನ್ನ ಹೆಸರೇನು ನಿನ್ನ ಊರಾವುದು ಎಂದು ಕೇಳಿದರು.

ಘನಮಠೇಶರು ಸ್ವಾಮೀ ನನಗೆ ನಾಡಿನ ಜನರು ಘನಮಠದ
ನಾಗಭೂಷಣನೆಂದು ಕರೆಯುತ್ತಿಹರು ಬುದ್ಧೀ ಏಕಮೂರ್ತಿತ್ರಯೋ
ಭಾಗಂ ಎಂಬ ಶಾಸ್ತ್ರದಂತೆ ಆ ಪರಶಿವವಸ್ತುವೆ ಗುರು ಲಿಂಗ ಜಂಗಮ
ವೆಂದು ಮೂರು ರೂಪಾಗಿ ಈ ಜಗತ್ತನ್ನೆಲ್ಲ ವ್ಯಾಪಿಸಿರುವಾಗ ಅಥ
ಪವಿತ್ರ ಜಂಗಮವಸ್ತುವಿಗೆ ನಾನೇಕೆ ನಮಸ್ಕಾರ ಮಾಡುವದಿಲ್ಲ ನಮ್ಮ
ಪ್ಪನೂ ಸಹ ಮಾಡಬೇಕಾಗುತ್ತದೆ. ಬಹಿರಂಗದಲ್ಲಿ ಹೆಸರಿಗೆ ಮಾತ್ರ
ವಿರತಿ ವಿರಕ್ತ ಸನ್ಯಾಸಿ ನಿರಂಜನ ನಿರಾಭಾರಿ ಎಂದು ಹೇಳುತ್ತಿದ್ದರೂ
ನಾವು ಸ್ವಾಮಿಗಳು ನಾವು ದೊಡ್ಡವರು ನಮಗೆ ನಮಸ್ಕಾರ ಮಾಡಲಿ
ಲ್ಲೆಂಬ ಅಭಿಮಾನದ ಅಹಂಕಾರದಿಂದ ಅಂತರಂಗದಲ್ಲಿ ಹಲಬುತ್ತಿರುವ
ನೀವೆಂಥ ಜಂಗಮರು. ಜಂಗಮ ವಸ್ತುವಿನ ನೆಲೆ ಕಲೆಯನ್ನರಿಯದೆ ಜಂಗ
ಮರೆಂದು ಜಂಭ ಕೊಚ್ಚಿಕೊಳ್ಳುವವರೆಲ್ಲರಿಗೂ ಜಂಗಮರೆಂದೆನ್ನಬಹುದೆ
ನಿಜವಾದ ಜಂಗಮ ವಸ್ತುವಿನ ನೆಲೆಯನ್ನಾದರೂ ತಿಳಿಯಿರಿ ಎಂದು–

> ಪಾದಪೂಜೆಯ ಮಾಡುವೆ। ಜಂಗಮದ ಶ್ರೀ ಪಾದಪೂಜೆಯ
> ಮಾಡುವೆ॥ ಪಾದಪೂಜೆಯ ಮಾಡುವೀ ಧರೆಯೊಳಗೆ।
> ವಿನೋದದಿಚರಿಪ ಅನಾದಿ ಜಂಗಮದ ಶ್ರೀ ॥೦॥

ಎಂಬ ಹನ್ನೊಂದು ನುಡಿ ಪದದಿಂದ ಜಂಗಮ ವಸ್ತುವಿ
ಮಹಿಮೆಯನ್ನೆಲ್ಲ ಮುರಗಿ ಸ್ವಾಮಿಗಳು ಕೇಳಿ ಇವರ ಸಮಯೋಚಿ
ವಾದ ಕವಿತಾ ಶಕ್ತಿಯನ್ನೂ ಮತ ತತ್ವಗಳ ಮೇಲಿರುವ ಮೋಹವನ್ನೂ
ಕಂಡು ಆ ಕ್ಷಣವೇ ಆಸನದಿಂದೆದ್ದು ಮಹಾತ್ಮಾ ನೋಡುವದಕ್ಕೆ ನಾ
ವಿರಕ್ತರಾಗಿದ್ದರೂ ವಿರತಿ ಶಬ್ದದ ಒಂದಂಶವೂ ಕೂಡ ನಮ್ಮಲ್ಲಿ
ಅಜ್ಞಾನದಿಂದ ಆಶೆಯ ಬಲೆಯಲ್ಲಿ ಬಿದ್ದು ಮೋಹ ನಿದ್ರೆಯಲ್ಲಿ ಮಲಗಿ
ನಮ್ಮನ್ನು ಸುಜ್ಞಾನ ಸುಧೆಯನ್ನುಣಿಸಿ ಬಡಿದೆಬ್ಬಿಸಿ ಬೋಧ ಮಾಡಿ
ನಿನ್ನೀ ಬೋಧೆಯಿಂದ ಭ್ರಾಂತಿಯು ಬಯಲಾಯ್ತು ನಿಜವಾದ ಜಂ
ಮವಸ್ತುವು ನೀನೇ ಜಗದ್ವಂದನೆಗೆ ನೀನೆ ಯೋಗ್ಯನಿರುತ್ತಿ ಎಂ
ತಾವೇ ಪ್ರತಿ ನಮಸ್ಕಾರ ಹಾಕಲು ಘನಮಠೇಶರು ತಾವೂ ಪ್ರತಿ

ಸ್ವಾಂಗವನ್ನು ಹಾಕಿ ಇದೋ ನಿಮ್ಮ ಸನ್ನಿಧಿಯಲ್ಲಿ ನಿಮ್ಮ ಸೇವಾಮರಿಯಾದ ಈತನು ಮಾತ್ರ ಮುಂದೆ ಸಿಂಹದ ಮರಿಯಂತೆ ವಿರತಿಯ ಮಹಿಮೆಯನ್ನೆಲ್ಲ ಅರಿತು ವಿಶ್ವದಲ್ಲಿ ವಿಖ್ಯಾತನಾದ ವಿರತನಾಗಿ ಖಾಸಗತಿ ಎಂಬ ನಾಮದಿಂದ ನಾಡಿನಲ್ಲೆಲ್ಲ ಪ್ರಸಿದ್ಧಿಯಾಗುತ್ತಾನೆ. ಎಂದು ಮುರಗಿ ಸ್ವಾಮಿಗಳ ಮರಿಗೆ ಆಶೀರ್ವದಿಸಿ ಅವರಲ್ಲಿಯೇ ತಮ್ಮ ಪೂಜಾ ಪ್ರಸಾದಗಳನ್ನು ಮುಗಿಸಿಕೊಂಡು ಮುಂದಕ್ಕೆ ಪ್ರಯಾಣ ಬೆಳಸಿದರು.

ಘನಮಠೇಶರ ಭವಿಷತ್ಸೂಚನೆಯಂತೆ ಮುರಗೀ ಸ್ವಾಮಿಗಳ ತರುವಾಯ ಅಧಿಕಾರಕ್ಕೆಬಂದ ಸ್ವಾಮಿಗಳೇ ಖಾಸ್ಗತರೆಂಬ ಹೆಸರಿನಿಂದ ಪ್ರಸಿದ್ಧರಾಗಿ ಅನಂತ ಪವಾಡಗಳನ್ನು ಭಕ್ತರಿಗೆ ತೋರಿ ಲೀಲಾಮೂರ್ತಿಗಳೆನಿಸಿಕೊಂಡು ನಿಜವಾದ ನಿರಂಜನ ಪಥದಲ್ಲಿಯೇ ಪರಮಾತ್ಮನ ಸನ್ನಿಧಿಗೆ ಸೇರಿದ್ದಾರೆ. ತಾಳೀಕೋಟೆಯ ವಿರಕ್ತಮಠದಲ್ಲಿ ಅವರ ಗದ್ದುಗೆಯನ್ನು ಅಲ್ಲಿಯ ಭಕ್ತಾದಿಗಳು ಬಹಳ ಹಣ ಖರ್ಚುಮಾಡಿ ಪ್ರೇಕ್ಷರಿಗಾನಂದವಾಗುವಂತೆ ಕಟ್ಟಿಸಿ ಇಂದಿಗೂ ಆ ಮಠದಮೇಲೆ ಭಕ್ತಿ ವಿಶ್ವಾಸಗಳನ್ನಿಟ್ಟು ನಡೆದುಕೊಳ್ಳುತ್ತಿದ್ದಾರೆ.

ಇದೇ ಮಠದ ಸಂಸ್ಕೃತ ಪಾಠಶಾಲೆಯಲ್ಲಿ ಸನ್ ೧೯೩೬-೩೭ ಇಸ್ವಿಯಲ್ಲಿ॥ ಪಂ॥ ವಿರೂಪಾಕ್ಷಶಾಸ್ತ್ರಿಗಳವರು ಕಾವ್ಯತೀರ್ಥ ಬಿಕ್ಷಾವೃತ್ತಿಮಠ ಗಾವರವಾಡ ಇವರ ಅಧ್ಯಾಪಕತ್ವದಲ್ಲಿ ಅಧ್ಯಯನಮಾಡಿ ಆ ಖಾಸ್ಗತೇಶನ ಕರುಣಾಕಟಾಕ್ಷದಿಂದಲೇ ಈ ಸಚ್ಚರಿತ್ರೆಯನ್ನು ಬರೆಯಲು ಸಮರ್ಥನಾಗಿದ್ದೇನೆ.

ಘನಮಠೇಶರು ತಾಳೀಕೋಟೆಯನ್ನು ಬಿಟ್ಟನಂತರ ಡೋಣಿ ಸಾಲಿನಲ್ಲಿ ಪ್ರವಾಸಮಾಡಿ ಮಿಣಜಗಿ ಬಳಗಾನೂರ ತಾರನಾಳ ಬಳಘಾಟಗಳೆಂಬ ಊರುಗಳಲ್ಲಿ ಸಂಚಾರಮಾಡುತ್ತ ತಾವು ಮೊದಲು ವಾಸಮಾಡಿ ಬಿಟ್ಟುಹೋದ ಕುಂಟೋಜಿಯ ಚೌಕಿಗೆ ಬರುವವರಾಗಿದ್ದಾರೆ. ಘನಮಠೇಶರು ಪುನಃ ತಮ್ಮ ಗ್ರಾಮಕ್ಕೆ ಬಂದಿರುವರೆಂಬ ಸುದ್ದಿಯನ್ನು ಸರ್ವರೂ ಕೇಳಿದಾಕ್ಷಣವೇ ಆನಂದದಿಂದ ಸಕಲರೂ ಶಿವಯೋಗಿಗಳ

ದರ್ಶನಕ್ಕೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿ ದರ್ಶನಾನಂದ ಹೊಂದು
ತ್ತಿರಲು ಸಜ್ಜನರ ಚನ್ನಪ್ಪನು ಮಹಾತ್ಮರ ಸನ್ನಿಧಿಗೆ ಬಂದು ನಮ
ಸ್ಕಾರ ಮಾಡಿ ಸುಮ್ಮನೆ ಒಂದೆಡೆಯಲ್ಲಿ ಕುಳಿತಿರುವದನ್ನು ಶಿವಯೋಗಿ
ಗಳು ಕಂಡು ಯಾಕೆ ಚನ್ನಪ್ಪಾ ಸುಮ್ಮನೆ ದೂರೆಯೇಕೆ ಕುಳಿತುಕೊಂಡೆ
ಯಾವದೋ ಚಿಂತೆಯಲ್ಲಿ ಕುಳಿತಿರುವಂತೆ ಕಾಣುತ್ತದೆ ಎಂದು ತಮ್ಮ
ಸಮೀಪಕ್ಕೆ ಕರೆಯಲು ಚನ್ನಪ್ಪನು ಶಿವಯೋಗಿಗಳೇ ತಾವು ನಮ್ಮನ್ನು
ಅಗಲಿ ಹೋದನಂತರ ನಾವು ಅಜ್ಞಾನದಿಂದ ತಾವು ತೋರಿಸಿದ
ಸ್ಥಾನದಲ್ಲಿ ಭಾವಿಯನ್ನು ತೆಗೆಯಿಸದೆ ಇಳುಕಲಿನಲ್ಲಿ ಕಡಿಮೆ ಖರ್ಚು
ಬರುವದೆಂಬ ಭ್ರಾಂತಿಯಿಂದ ಈಗ ನಾಲ್ಕೈದು ಆಳು ಪ್ರಮಾಣ ಭಾವಿ
ಅಗಿಸಿದರೂ ನೀರಿನ ಅಂಶವು ಕೂಡಾ ಕಾಣದಾಗಿದೆ. ತಮ್ಮ ಆಜ್ಞೋ
ಲ್ಲಂಘನ ಮಾಡಿದ್ದಕ್ಕೆ ನಮಗೆ ಸುಖ ದೊರೆಯುವ ಬಗೆ ಹೇಗೆ ತಮ್ಮ
ಮಾತನ್ನು ಮೀರಿ ಅನರ್ಥಕ್ಕೆ ಗುರಿಯಾದೆವು.

ಎಂದು ತನ್ನ ನಿಜಸ್ಥಿತಿಯನ್ನರುಹಲು ಘನಮಠೇಶರು ಆಗಲಿ
ಚನ್ನಪ್ಪಾ ಅದಕ್ಕೇಕೆ ಚಿಂತಿಸುವದು ನಡೆ ನೀವು ತೆಗೆಯಿಸಿದ ಭಾವಿ
ಯನ್ನು ನೋಡೋಣವೆಂದು ಕೂಡಿದ ಭಕ್ತರನ್ನೆಲ್ಲ ಮುಂದೆ ಮಾಡಿ
ಕೊಂಡು ಭಾವಿಯಿದ್ದ ಹೊಲಕ್ಕೆ ಹೋಗಿ ನೀರಿಲ್ಲದ ಆ ಭಾವಿಯನ್ನು
ಕಂಡು ಚನ್ನಪ್ಪಾ ಇಲ್ಲಿರುವ ಜನರಿಗೆಲ್ಲ ನೀನು ಮನೆಗೆ ಹೋಗಿ ಬುತ್ತಿ
ಮಾಡಿಸಿಕೊಂಡು ಬಾ ನೀನು ಬುತ್ತೀ ತರುವದರೊಳಗಾಗಿ ನಿನ್ನ ಬಾವಿಯ
ತುಂಬ ನೀರು ಬರುತ್ತದೆ ಎಂದು ಚನ್ನಪ್ಪನನ್ನು ಮನೆಗೆ ಕಳುಹಿ ನೀರಿ
ಲ್ಲದ ಆ ಭಾವಿಯಲ್ಲಿ ತಾವು ಇಳಿದು ನಾಲ್ಕೂ ಕಡೆ ನೋಡಿ ಒಂದು
ಮೂಲೆಯ ತರೆದಲ್ಲಿದ್ದ ಕಲ್ಲು ಗುಂಡನ್ನು ಕಡೆಗೆ ತೆಗೆಯಿರಿ ಎಂದು ಇವರು
ತೋರಿಸಿದ ಕಲ್ಲನ್ನು ಅಲ್ಲಿದ್ದ ಭಕ್ತಾದಿಗಳೆಲ್ಲ ಹಾರಿ ಮೊದಲಾದ ಸಾಧನ
ಗಳಿಂದ ಸಮೂಲವಾಗಿ ಕಡೆಗೆ ಕಿತ್ತೊಗೆಯುವದೊಂದೆ ತಡ ಮನುಷ್ಯನ
ಮುಂಗೈಗಡುತರವಾಗಿ ನೀರಿನ ಶಲೆಯು ಹೊರಟು ಎಲ್ಲರೂ ನೋಡಿ
ನೋಡುತ್ತಿರುವಲ್ಲಿ ನೀರು ಬರಲಿಕ್ಕೆ ಹತ್ತಿ ಪ್ರವಾಹದಂತೆ ಬೀಳಲಿಕ್ಕೆ
ಹತ್ತಲು ಸರ್ವರೂ ಆನಂದಾಶ್ಚರ್ಯವುಳ್ಳವರಾಗಿ ಭಾವಿಯ ಮೇಲಕ್ಕೆ

ಹತ್ತಿ ಘನಮಠೇಶರ ಅಮಾನಷ ಕೃತಿಯನ್ನು ಕಂಡು ಒಂದೇಸವನೆ ಧಾರೆಯಾಗಿ ಬೀಳುತ್ತಿರುವ ನೀರನ್ನು ನೋಡಿ ಹಸನ್ಮುಖಿಗಳಾಗಿ ಅಮೃತಕ್ಕೆ ಸಮವಾದ ನೀರನ್ನು ಕುಡಿದು ಶಿವಯೋಗಿಗಳ ಶಿವಶಕ್ತಿಯನ್ನು ಕೊಂಡಾಡುತ್ತ ಕುಳಿತಿರಲು ಚನ್ನಪ್ಪನು ತನ್ನ ಮಕ್ಕಳಾದ ಬಸವಪ್ಪ ಮಲ್ಲಶೆಟ್ಟಿ ನಾಗಪ್ಪ ಎಂಬ ಮೂವರು ಮಕ್ಕಳನ್ನು ಮುಂದುಮಾಡಿಕೊಂಡು ಮನೆಯಿಂದ ನಾನಾ ಪ್ರಕಾರವಾದ ಅಡಿಗೆಯನ್ನು ತಯಾರ ಮಾಡಿಸಿಕೊಂಡು ಬಂಡಿಯಲ್ಲಿ ಸರ್ವ ಸಾಹಿತ್ಯಗಳನ್ನು ತುಂಬಿಕೊಂಡು ಭಾವಿಯ ಸಮೀಪದಲ್ಲಿ ಬಂದು ತಂದ ಸಾಮಾನುಗಳನ್ನಿಳಿಸಿ ಭಾವಿಯಲ್ಲಿ ಹಣಕಿ ನೋಡುತ್ತಾನೆ.

ಮನೆಗೆ ಹೋಗಿ ಬರುವದರೊಳಗಾಗಿ ನೀರಿನಿಂದ ತುಂಬಿತುಳುಕುವ ಭಾವಿಯನ್ನು ಕಂಡು ಇದು ಶಿವಯೋಗಿಗಳ ಸಾಮರ್ಥ್ಯವಲ್ಲದೆ ಬೇರೆ ಏನೂ ಅಲ್ಲ ಶಿವಸ್ವರೂಪಿ ಶಿವಯೋಗಿಗಳಿಗೆ ಯಾವದು ತಾನೇ ಅಸಾಧ್ಯ ಎಂದು ಶಿವಯೋಗಿಗಳ ಅಗಾಧ ಕೃತಿಗೆ ಆಶ್ಚರ್ಯವಂ ಹೊಂದಿ ಘನಮಠೇಶರ ಆಜ್ಞೆಯಂತೆ ಸರ್ವರನ್ನೂ ಸಾಲಾಗಿ ಕುಳ್ಳಿರಿಸಿ ತಾನು ಬಂಡಿಯ ಮೇಲೆ ತಂದ ತರತರದ ಅಡಿಗೆಗಳನ್ನು ಸರ್ವರಿಗೆ ಸರಿಯಾಗಿ ಉಣಬಡಿಸಿ ಶಿವಯೋಗಿಗಳಿಂದ ಅಪ್ಪಣೆಯನ್ನು ಪಡೆದು ಅಡಿಗಡಿಗೆ ಅವರ ನಾಮವನ್ನು ನೆನೆಯುತ್ತ ಬಂದ ಭಕ್ತಾದಿಗಳನ್ನು ಕೂಡಿಕೊಂಡು ಸಜ್ಜನರ ಚನ್ನಪ್ಪನು ತನ್ನ ಆಲಯಕ್ಕೆ ಆಗಮಿಸಿದನು.

೮ ನೆಯ ಪ್ರಕರಣಂ ಸಮಾಪ್ತಂ



# ೯ ನೆಯ ಪ್ರಕರಣ



(ಭಾಮಿನಿ ಷಟ್ಪದಿ)

ಪದ:— ಯತಿಯು ಕುಂಟೋಜಿಯೊಳು ಭಕ್ತರ ।
ಸ್ತುತಿಗೆ ಮಂಗಳ ನೀಡುತಿರುತಿರೆ ।
ನುತಿಸುತಲಿ ಕುನ್ನಾಳ ಸಿದರಾಮಪ್ಪನೆಂಬವನು ॥
ಕ್ಷಿತಿಯೊಳತಿ ಪೆಸರಾದ ಘನಮಠ ।
ಎತಿಯನರಸುತ ಬಂದು ಚರಣದಿ ।
ಅತಿ ಹರುಷದಿಂ ಬಾಗಿ ಭವಬಂಧನವ ನೀಗಿದನು ॥೧॥

ಜ್ಞಾನಾಗ್ನಿಯಿಂದ ಒಮ್ಮೆ ದಗ್ಧವಾದ ಕರ್ಮವು ಮುಂದೆ ಎಂದಿಗೂ ಬಂಧಕವಾಗಲಾರದು. ಅಗ್ನಿಯು ಝಳ ತಾಕಿದ ಬೀಜವು ಪುನಃ ಹೇಗೆ ಮೊಳೆಯಲಾರದೋ ಹಾಗೆಯೇ ಜ್ಞಾನಸ್ಪರ್ಶವಾದ ಕರ್ಮವು ಮನುಷ್ಯನನ್ನು ತನ್ನ ನಿಕೃಷ್ಟವಾದ ಪಾಶದಿಂದ ಕಟ್ಟಲಾರದು. ಆದರೆ ಆತ್ಮಸಾಕ್ಷಾತ್ಕಾರವಾದ ಮಾತ್ರಕ್ಕೆ ಸಾಧನವು ಸಮಾಪ್ತಿಯಾಯಿತೆಂದು ತಿಳಿಯಲಾಗದು ಯಾಕಂದರೆ ಹಿರಿಯರ ನಡೆಯೇ ಕಿರಿಯರಿಗೆ ಮಾರ್ಗ ದರ್ಶಕವಾಗುವದರಿಂದ ಜ್ಞಾನಿಗಳು ತಮಗೆ ಆತ್ಮ ಸಾಕ್ಷಾತ್ಕಾರವಾಗಿದ್ದರೂ ಸಾಕ್ಷಾತ್ಕಾರಕ್ಕೆ ಸಾಧನೀಭೂತಗಳಾದ ನೀತಿ ಕ್ರಿಯಾದಿಗಳನ್ನು ನಿರಾಕರಿಸದೆ ನಡೆ ನುಡಿ ಒಂದಾಗಿ ಲೋಕವಂದ್ಯರಾಗಿದ್ದಾರೆ. ನಮ್ಮ ಘನಮಠೇಶರಾದರೂ ನೀತಿ ಕ್ರಿಯಾದಿಗಳನ್ನು ಅರಿತು ಆತ್ಮಸಾಕ್ಷಾತ್ಕಾರದಿಂದ ಶಿವಸ್ವರೂಪಿಗಳು ತಾವಾಗಿದ್ದರೂ ವೀರಶೈವಮತ ತತ್ವಗಳಾದ ಅಷ್ಟಾವರಣ ಷಟಸ್ಥಲಗಳನ್ನು ಅಕ್ಷರಶಃ ತಾವೂ ಪಾಲಿಸಿ ಭಕ್ತಾದಿಗಳಿಗೆ ಮತ ತತ್ವಗಳನ್ನರುಹುವದೇ ತಮ್ಮ ಮುಖ್ಯ ಕರ್ತವ್ಯವೆಂದು ತಿಳಿದು ತಾವಿರುವ ಕುಂಟೋಜಿಯ ಚೌಕಿಯೇ ತಮ್ಮ ಶಿವಾನುಭವ ಮಂಟಪ

ವಸ್ನಾಗಿ ಮಾಡಿಕೊಂಡು ಅಲ್ಲಿಯೇ ಪ್ರತಿನಿತ್ಯ ತಮ್ಮ ಶಿವಾರ್ಚನಾದಿ ಗಳನ್ನು ತೀರಿಸಿಕೊಂಡು ಅಲ್ಲಿ ಬಂದವರಿಗೆಲ್ಲ ಶಿವತತ್ವಗಳನ್ನರುಹುತ್ತ ಕಾಲ ಕಳೆಯುತ್ತಿದ್ದರು.

ಇವರ ವಾರ್ತೆಯನ್ನು ಕೇಳಿ ಸದಾಚಾರ ಸದ್ಗುಣಯುತನೂ ಶಿವತತ್ವವನ್ನರಿತವನೂ ಜಂಗಮ ಪ್ರೇಮಿಯೂ ಆದ ಕುನ್ನಾಳ ಶಿದ್ಧರಾ ಮಪ್ಪನೆಂಬ ಭಕ್ತನು ಶಿವಯೋಗಿಗಳ ದರ್ಶನಾಪೇಕ್ಷೆಯಾಗಿ ಬಂದು ಮಹಾ ತ್ಮರ ಸನ್ನಿಧಿಯಲ್ಲಿ ಸಾಷ್ಟಾಂಗವೆರಗಲು ಘನಮಠೇಶರು ದಯಾ ದೃಷ್ಟಿ ಯಿಂದ ಬಂದಾತನನ್ನು ಆದರಿಸಿ ಆರಪ್ಪಾ ನೀನು ಎಲ್ಲಿಂದ ಬರೋಣವಾ ಯಿತು ನಿನ್ನ ಶುಭನಾಮವೇನು ಈ ಪ್ರಕಾರ ವಿಚಾರಿಸಲು ಬಂದ ಭಕ್ತನು ಬುದ್ಧೀ ನನ್ನದಿಲ್ಲೇ ಸಮೀಪವಿರುವ ಬೆಕ್ಕಿನಾಳ ಗ್ರಾಮದಲ್ಲಿ ಕುನ್ನಾಳ ಸಿದ್ಧ ರಾಮಪ್ಪನೆಂದು ನನ್ನ ಹೆಸರು ಶಿವಸ್ವರೂಪಿಗಳಾದ ತಮ್ಮ ಮಹಿ ಮೆಯನ್ನು ದೂರದಿಂದಲೇ ಕೇಳಿ ದರ್ಶನವಾಗಿ ಧನ್ಯನಾಗಬೇಕೆಂಬ ಬಯಕೆಯಿಂದ ನಶ್ವರವಾದ ಈ ಭವಬಂಧನದಲ್ಲಿ ಶಿವತತ್ವವನ್ನರಿಯಲು ಅಸಾಧ್ಯವಾದುದಕ್ಕೆ ಸಂಸಾರ ಸಾಗರವನ್ನು ದಾಟಿಸಲು ನೌಕಾಪ್ರಾಯ ರಾದ ಗುರು ಸನ್ನಿಧಿಗೆ ಬಂದಿದ್ದೇನೆ. ಶಿವದೀಕ್ಷಾ ಸಂಸ್ಕಾರದಿಂದ ಈ ಅಜ್ಞಾನಿಯ ಮಾಂಸ ಪಿಂಡವನ್ನಳಿದು ಮಂತ್ರಪಿಂಡವನ್ನಾಗಿ ಮಾಡಿ ಶಿವತತ್ವವೆಂಬ ಸುಬೋಧೆಯನ್ನುಣಿಸಿ ರಕ್ಷಿಸಬೇಕೆಂದು ಮತ್ತೂ ಪ್ರಣಾ ಮವಂಗೈಯ್ಯಲು ಈತನ ವಿನಯದಿಂದ ಕೂಡಿದ ಭಕ್ತಿಯನ್ನು ನೀತಿಯು ಕ್ತವಾದ ನುಡಿಗಳನ್ನು ಕೇಳಿ ಘನಮಠೇಶರು ಮನಸ್ಸಿನಲ್ಲಿ ಹಿಗ್ಗುವವ ರಾಗಿ ಆಗಲಿ ಮಗನೇ ನಿನ್ನಂಥ ಪರಿಪಕ್ವ ಹೃದಯರಿಗಲ್ಲದೆ ಲಿಂಗಾಂಗ ಸಾಮರಸ್ಯ ಜ್ಞಾನವು ಇತರರಿಗೆ ಸಾಧ್ಯವಾಗುವದು ಎಂದು ನಮ್ಮ ಚೌಕಿಯಲ್ಲಿಯೇ ಪೂಜಾ ಸಾಹಿತ್ಯಗಳನ್ನು ಸಜ್ಜುಗೊಳಿಸಿ ಷಡಧ್ವಪೂ ರ್ವಕ ಶಿವದೀಕ್ಷೆಯಂ ಮಾಡಿ ಸಿದ್ಧರಾಮಪ್ಪನಿಗೆ ಮಗನೇ ಶ್ರೇಷ್ಠವಾದ ಶೃತಿ ಶಾಸ್ತ್ರಾಗಮಗಳಲ್ಲಿ ಅಡಕವಾದ ಅಲಭ್ಯವಾದ ಲಿಂಗಾಂಗ ಸಾಮ ರಸ್ಯ ಜ್ಞಾನದಿಂದ ಭೋಗಮೋಕ್ಷಂಗಳೆರಡೂ ದೊರೆಯುತ್ತವೆ.

ವೀರಶೈವನಾದವನು ಅಷ್ಟಾವರಣಗಳ ಅನುವಿಡಿದು ಪಂಚಾ ಚಾರಪರಾಯಣನಾಗಿ ತ್ಯಾಗಾಂಗ ಭೋಗಾಂಗ ಯೋಗಾಂಗಗಳಿಂದ ಇಷ್ಟ ಪ್ರಾಣ ಭಾವ ಮೂರು ತೆರನಾದ ಲಿಂಗದ ತತ್ವವನ್ನರಿತು ಲಿಂಗ ಮಯನಾದ ಶಿವತತ್ವವನ್ನರಿಯುವದೇ ಶಿವಭಕ್ತನ ಕರ್ತವ್ಯ (ಪಿಡಿದ ನೇಮವಂ ಪ್ರಾಣಾಂತ್ಯದವರೆಗೂ ಬಿಡಿದಿರ್ಪಾತನೇ ವೀರಶೈವನಕ್ಕುಂ) ಎಂಬ ಆರ್ಯೋಕ್ತಿಯಂತೆ ಸಾಧಕನು ಅನುಭವದಿಂದ ಅಭವಚಿಂತನೆ ಮಾಡುತ್ತ ಇಹಪರಗಳೆರಡಕ್ಕೂ ಕಾರಣನಾಗಿ ಮಹಾತ್ಮರು ಅನುಸರಿಸಿದ ಮಹಾ ಪಂಥದಲ್ಲಿಯೇ (ಪರೋಪಕಾರಾರ್ಥಮಿದಂ ಶರೀರಂ) ಎಂಬತೆ ಪರಹಿತಾರ್ಥವಾಗಿಯೇ ಪವಿತ್ರವಾದ ಈ ಶರೀರವನ್ನು ಸವೆಯಿಸಿ ಶಿವ ನೊಳೈಕ್ಯವಾಗುವದೇ ಸುವಿಚಾರಿಗಳ ಕರ್ತವ್ಯವಾಗಿರುವದರಿಂದ ವಿವೇಕ ವಿದ್ಯಾವಿನಯಾನ್ವಿತನಾದ ನಿನ್ನಿಂದ ಲೋಕದ ಸಚರಾಚರ ಪ್ರಾಣಿ ಗಳಿಗೆ ಅನ್ನವನ್ನು ಕೊಡಲು ಕೃಷಿಯೇ ಮೂಲವಾದ ಕಾರಣ ಅಂಥ ಮಹ ತ್ತರವಾದ ಕೃಷಿಜ್ಞಾನವನ್ನೊಳಗೊಂಡ ಕೃಷಿಜ್ಞಾನ ಪ್ರದೀಪಿಕೆಯೆಂಬ ಜಗದುಪಕಾರವಾದ ಗ್ರಂಥವನ್ನು ನೀನು ಬರೆದು ನಿನ್ನ ಶರೀರವನ್ನು ಸಾರ್ಥಕಮಾಡು

ಎಂದು ಆಜ್ಞಾಪಿಸಲು ಅದಕ್ಕೆ ಸಿದ್ಧರಾಮಪ್ಪನು ಸ್ವಾಮಿ ಅಂಥ ಉಚ್ಚತತ್ವವನ್ನೊಳಗೊಂಡ ಗಂಥ್ರವನ್ನು ಬರೆಯಲು ನನಗಂಥಾ ಶಕ್ತಿಯಿಲ್ಲಿಯದು ಅಲ್ಪನಾದ ನನ್ನಿಂದ ಮಹಾ ಕೃತಿಯನ್ನೆಸಗಲು ಸಾಧ್ಯವೇ ಎಂಬುದಕ್ಕೆ ಘನಮಹೇಶರು ಹಾಗಲ್ಲ ಶಿದ್ಧರಾಮಪ್ಪಾ ಮಾನ ವನು ಸತ್ಸಂಕಲ್ಪವುಳ್ಳವನಾಗಿ ಶಿವ ಪ್ರೀತಿಯ ಕಾರ್ಯಗಳನ್ನು ಸದ್ಭಾ ವನೆಯಿಂದ ಮಾಡುತ್ತ ಹೋದಲ್ಲಿ ಸದಾಶಿವನು ಆ ಕಾರ್ಯಗಳಿಗೆ ಶ್ರೇಯ ಸ್ಸನ್ನು ಕೊಟ್ಟೇಕೊಡುತ್ತಾನೆ ನೀನು ಯಾವದನ್ನೂ ಹಿಂದು ಮುಂದು ನೋಡದೆ ಈ ಮಹಾ ಕಾರ್ಯದಲ್ಲಿ ಮನಸ್ಸನ್ನು ಹಾಕು ಅದಕ್ಕೆ ಬೇಕಾದ ಅಭಿಪ್ರಾಯಗಳಿಗೆಲ್ಲ ನಾವು ಅನುಮತಿ ಕೊಡುತ್ತೇವೆ. ಎಂದು ಸಿದ್ಧ ರಾಮಪ್ಪನಿಂದ (ಕೃಷಿತೋನಾಸ್ತಿ ದುರ್ಭಿಕ್ಷಂ) ಎಂಬ ವಾಕ್ಯದಂತೆ ಒಕ್ಕ ಲಿಗರಾದ ಶಿವಭಕ್ತರಿಗೆ ಉಪಯುಕ್ತವಾದ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥವನ್ನು ತಮ್ಮ ಸಲಹೆ ಸೂಚನೆಗಳನ್ನು ಕೊಟ್ಟು ಬರೆಯಿಸಿದರು.

ಅದೇ ಗ್ರಂಥವನ್ನು ಈಗ ಹುನಗುಂದದಲ್ಲಿ ಶ್ರೀಮಂತರಾದ ನಾಗರಾಳ ದೊಡ್ಡಪ್ಪನವರು ತಮ್ಮ ಉದಾರ ದೇಣಿಗೆಯನ್ನು ಕೊಟ್ಟು ವಿಜಾಪೂರದ ಹಳಕಟ್ಟಿಯವರೆಂಬ ವಕೀಲರಿಂದ ಪರಿಶೋಧನೆ ಮಾಡಿಸಿ ಅಚ್ಚುಹಾಕಿಸಿ ಜಗನ್ಮಾನ್ಯರಾಗಿಧ್ದಾರೆ. ಪರೋಪಕಾರ ಬುದ್ಧಿಯುಳ್ಳ ಪಾವನಾತ್ಮರಿಗೆ ಘನಮಠೇಶನು ಅಖಂಡವಾದ ಐಶ್ವರ್ಯವನ್ನು ದಯ ಪಾಲಿಸಲೆಂದು ನನ್ನ ಮನೀಷೆ ಅಸ್ತು ಘನಮಠೇಶರು ಕುನ್ನಾಳ ಸಿದ್ಧ ರಾಮಪ್ಪನಿಗೆ ಶಿವತತ್ವವನ್ನು ಭೋಧಿಸಿ ಆತನು ತನ್ನ ಊರಿಗೆ ಹೋಗಲು ಅನುಜ್ಞೆಯನ್ನು ಕೊಟ್ಟು ಕುಂಟೋಜಿಯ ಸಮಸ್ತ ಭಕ್ತರನ್ನು ಕರೆಯಿಸಿ ಕೊಂಡು ಇನ್ನು ನಾವು ಈ ಊರನ್ನು ಬಿಟ್ಟು ಮುಂದೆ ಪ್ರಯಾಣ ಮಾಡಲು ಶಿವನ ಪ್ರೇರಣೆಯಾಗಿದೆ ನಾವು ಒಂದೇ ಸ್ಥಾನದಲ್ಲಿದ್ದರೆ ನಮ್ಮ ಮನಸ್ಸಿನ ಮಹಾಬಯಕೆ ಪೂರ್ಣವಾಗುವದಿಲ್ಲ. ಎಂದು ಎಲ್ಲರಿಗೆ ಹೇಳಲು ಘನಮಠೇಶರು ಊರು ಬಿಡುವರೆಂದು ಕುಂಟೋಜಿಯ ಭಕ್ತರೆಲ್ಲ ಮನಸ್ಸಿನಲ್ಲಿ ನೊಂಧವರಾಗಿ ಮಹಾತ್ಮಾ ಇದುವರೆಗೂ ಅಜ್ಞಾನಿಗಳಾದ ನಮಗೆ ಸುಜ್ಞಾನ ಸುಭೋದೆಯನ್ನುಣಿಸಿ ಶಿವತತ್ವದ ಸಾರವನ್ನೆಲ್ಲ ಅರುಹಿ ಇದುವರೆಗೂ ಭಕ್ತರ ಕಾಮಿತಾರ್ಥವನ್ನು ಕೊಡಲು ಕಾಮಧೇನು ವಿನಂತಿದ್ದ ತಾವು ಏಕಾಏಕಿ ನಮ್ಮನ್ನು ತೊರೆದು ತಾವು ಪ್ರಯಾಣ ಮಾಡಿದರೆ ತಮ್ಮನ್ನಗಲಿ ನಾವು ಕಾಲಕಳೆಯುವದಾದರೂ ಹೇಗೆ ತಮ್ಮ ಸ್ಮರಣೆಯು ನಮಗೆ ಶಾಶ್ವತವಾಗಿ ಉಳಿಯಲು ತಾವು ತಮ್ಮ ಪಾದ ಗಳಲ್ಲಿದ್ದ ಪಾದುಕೆಗಳನ್ನು ಅನುಗ್ರಹಿಸಿದರೆ ತಮ್ಮವಾಸದಿಂದ ಪವಿತ್ರವಾದ ಈ ಚೌಕಿಯಲ್ಲಿ ಅವುಗಳನ್ನು ಸ್ಥಾಪನೆಮಾಡಿ ಸದಾ ಅವುಗಳ ಪೂಜೆ ಮಾಡುತ್ತ ಮರೆಯಲಾರದ ತಮ್ಮ ಸ್ಮರಣೆಯಿಂದ ಕಾಲಕಳೆಯುತ್ತೇವೆ.

ಆ ಪ್ರಕಾರ ಭಕ್ತರ ಪ್ರಾರ್ಥನೆಯಂತೆ ತಮ್ಮ ಪಾದುಕೆಗಳನ್ನು ಅವರಿಗೆ ಕೊಟ್ಟು ಇದಲ್ಲದೆ ಸಜ್ಜನರ ಚನ್ನಪ್ಪನಿಗೆ ಮೊದಲು ತಾವು ತಿಳಿಸಿದಂತೆ ಯಥಾಪ್ರಕಾರ ನಡೆಯಲು ಆಜ್ಞಾಪಿಸಿ ಸರ್ವರಿಗೂ ಪರ ಮಾತ್ಮನು ಅಖಂಡ ಐಶ್ವರ್ಯವನ್ನುಂಟುಮಾಡಲಿ. ಎಂದು ಶುಭಾಶೀ ರ್ವಾದಪೂರ್ವಕ ಸಮಾಧಾನಗೊಳಿಸಿ ಶಿವನಾಜ್ಞೆಯಂತೆ ಶಿವನಾಮವನ್ನು

ಮನದಲ್ಲಿ ನುಡಿಯುತ್ತ ಕುಂಟೋಜಿಯಿಂದ ಪಶ್ಚಿಮ ದಿಕ್ಕಿಗೆ ಪ್ರಯಾಣ
ಮಾಡುವವರಾಗಿ ಬಸರಕೋಡ ಬಿದರಕುಂದಿ ಢವಳಗಿ ಹುವ್ವಿನ ಹಿಪ್ಪ
ರಿಗಿ ಮೊದಲಾದ ಗ್ರಾಮಗಳಿಗೆ ಭೆಟ್ಟಿ ಕೊಟ್ಟು ನಿಡಗುಂದಿ ಆಲಮಟ್ಟಿ
ಬಾಗಲಕೋಟ ಬದಾಮಿ ಬನಶಂಕರಿ ಮಹಾಕೂಟೇಶ್ವರ ಮುಂತಾದ
ಸ್ಥಾನಗಳನ್ನು ದರ್ಶನ ಮಾಡುತ್ತ ದಕ್ಷಿಣ ಕರ್ನಾಟಕದಲ್ಲಿ ನಿರಂಜನ
ನಿರಾಭಾರಿಗಳೆನಿಸಿ ತಮ್ಮ ತಪಃ ಸಾಮರ್ಥ್ಯದಿಂದ ಸ್ಥಾಪಿಸಲ್ಪಟ್ಟ ಜಗ
ತ್ಪ್ರಸಿದ್ಧಗಳಾದ ವಿರಕ್ತಮಠಗಳಿಂದ ಪರಿಶೋಭಿಸುವ ಗದಗ ಹುಬ್ಬಳ್ಳಿ
ಧಾರವಾಡ ಚಿತ್ರಕಲ್ಲದುರ್ಗ ಮೊದಲಾದ ಗ್ರಾಮಗಳಲ್ಲಿ ಶೂನ್ಯಶಿಂಹಾ
ಸನಗಳಿಂದ ಶೋಭಿಸುವ ಮಠಗಳನ್ನೂ ಮಠಗಳಲ್ಲಿ ತಮ್ಮ ದಿವ್ಯ ತೇಜ
ಸ್ಸಿನಿಂದ ಮೆರೆಯುವ ವೀರವಿರತಿಗಳನ್ನೂ ಕಂಡು ಅವರೊಡನೆ ದರ್ಶನ
ಸಂಭಾಷಣೆಗಳಿಂದ ಸಂತುಷ್ಟಿ ಹೊಂದುವಂಥವರಾಗಿ ಅವರ ಸ್ತುತಿನಿಂದೆ
ಗಳಿಗೆ ಹಿಗ್ಗದೆ ಕುಗ್ಗದೆ ತಾನು ವಿರತನಾಗಿದ್ದರೂ ವಿರತಿಯು ಲಕ್ಷಣ
ಗಳನ್ನು ಜಗತ್ತಿಗೆ ಬೋಧ ಮಾಡುವ ಅನಂತ ಪದ್ಯಗಳನ್ನು ರಚಿಸಿ
ಹಾಡುತ್ತ ನಡೆದರು.

ಘನಮಠೇಶರು ವಿರಕ್ತರ ನಿಂದೆ ಮಾಡುತ್ತಾರೆ. ಇವರು ವಿರತಿ
ವಿರೋಧಿಗಳೆಂದು ನಾಡಿನ ಜನರು ನುಡಿಯುತ್ತಿರಲು ಆ ಶಬ್ದವು ಇವರ
ಕಿವಿಗೆ ಬಿದ್ದಾಕ್ಷಣವೇ ಶಿವಶಿವಾ ನಾನೇಕೆ ವಿರಕ್ತರನ್ನು ನಿಂದಿಸಲಿ
(ಸತ್ತ್ಯಂಜನ ವಿರೋಧಂಚ ಅಸತ್ತ್ಯಂ ಜನರಂಜನಃ) ಎಂಬ ವಾಕ್ಯ
ದಂತೆ ಜಗತ್ತಿನ ಜನರ ಸ್ತುತಿನಿಂದೆಗಳಿಗೆ ಹೆದರಿ ನಾನು ಸತ್ತ್ಯವನ್ನು
ಸಾರಲು ಅಂಜುವವನಲ್ಲ ಜಗತ್ತನ್ನೇ ಪಾವನ ಮಾಡಲು ಅವತರಿಸಿದ
ಪರಮ ಪವಿತ್ರರಾದ ಜಂಗಮರೂಪಿ ವಿರತಿ ಶ್ರೇಷ್ಠರನ್ನು ನಿಂದಿಸಲು
ಅದಾವನು ಸಮರ್ಥನು ಎಂದು–

ಪರಮ ವಿರತರ ಜರಿಯಲುಂಟೇನೋ। ಹೇ ಮರುಳ ಮಾನವ ॥

ಎಂಬ ಪದವನ್ನು ಮಾಡಿ ಲೋಕದ ಜನರಿಂದ ಹಾಡಿಸಿ ತನ್ನ
ಮೇಲೆ ಬಂದ ವಿರತಿನಿಂದಕರೆಂಬ ದೋಷವನ್ನು ದೂರಮಾಡಿಕೊಂಡಿದ

ಲ್ಲದೆ ನಿಜವಾದ ವಿರತಿ ಭಾವವನ್ನು ತಮ್ಮ ಪದಗಳಿಂದ ಜಗತ್ತಿಗೆ ಬೋಧೆ
ಮಾಡುತ್ತ ಕರ್ನಾಟಕದ ಮುಖ್ಯ ಮುಖ್ಯ ಸ್ಥಾನಗಳಲ್ಲೊಂದನ್ನೂ
ಬಿಡದೆ ಮೈಸೂರ ರಾಜಧಾನಿಯವರೆಗೂ ಸಂಚರಿಸಿ ಕರ್ನಾಟಕದ ಸೊಬ
ಗನ್ನು ಕಂಡು ಕರ್ನಾಟಕದ ವೀರಶೈವರಲ್ಲಿ ನವಜಾಗೃತಿಯನ್ನುಂಟು
ಮಾಡಿ ಕರ್ನಾಟಕದ ಎಲ್ಲಾ ಭಾಗದಲ್ಲಿಯೂ ಶಾಪಾನುಗ್ರಹಶಕ್ತರೆಂದೂ
ಪರಮ ವೈರಾಗ್ಯಶಾಲಿಗಳೆಂದೂ ಪ್ರಸಿದ್ಧರಾಗಿ ಕರ್ನಾಟಕದಲ್ಲಿ ಉಳಿದ
ಕಡೆ ಸಂಚಾರ ಮಾಡುತ್ತ ಬಳ್ಳಾರಿಯಲ್ಲಿ ಬಸವಾವತಾರಿಯೆಂದು ಪ್ರಸಿದ್ಧ
ರಾದ ಸಕ್ಕರೆ ಕರಡೆಪ್ಪನ ಆದರಾತಿಥ್ಯವಂ ಸ್ವೀಕರಿಸಿ ಶಿವತತ್ವವನ್ನು
ಬೋಧಿಸಿ ಕರ್ನಾಟಕ ಸಾಮ್ರಾಜ್ಯವೆನಿಸಿದ ಹಂಪೆಯ ವಿರುಪಾಕ್ಷೇಶ್ವರನ
ದರ್ಶನ ಮಾಡಿಕೊಂಡು ಹೊಸಪೇಟ ಚಿತ್ರವಾಡಗಿ ಮೇಲಿಂದ ಪುನಃ
ಬಿಜಾಪುರ ಜಿಲ್ಹೆಯ ಹುನಗುಂದ ತಾಲೂಕಿನಲ್ಲಿ ಪರಮತಪಸ್ವಿಗಳಾದ
ವಿಜಯಮಹಾಂತ ಶಿವಯೋಗಿಗಳಿಂದ ಪ್ರಸಿದ್ಧವಾದ ಇಲಕಲ್ಲ ಗ್ರಾಮ
ವನ್ನು ನೋಡಬೇಕೆಂಬ ಮನಸ್ಸುಳ್ಳವರಾಗಿ ಧಾರವಾಡ ಜಿಲ್ಹೆಯ
ಪ್ರಸಿದ್ಧ ಗ್ರಾಮಗಳಾದ ಹಾಲಕೆರೆ ಅಬ್ಬಿಗೇರಿ ನರೇಗಲ್ಲ ರೋಣ
ಮುಂತಾದ ಗ್ರಾಮಗಳನ್ನು ಸಂದರ್ಶಿಸಿ ಅಲ್ಲಲ್ಲಿಯ ಶಿವಭಕ್ತರ ಸೇವೆಯ
ನ್ನು ಕೈಕೊಳ್ಳುತ್ತ ಸೂಡಿ ಎಂಬ ಗ್ರಾಮಕ್ಕೆ ಬರುವವರಾಗಿದ್ದಾರೆ.

ನಮ್ಮ ಘನಮಠೇಶರು ತಾವು ತಮ್ಮ ಆಂಧ್ರ ದೇಶವನ್ನು
ಬಿಟ್ಟು ಪ್ರಥಮದಲ್ಲಿ ಕರ್ನಾಟಕಕ್ಕೆ ಬಂದಾಗ್ಗೆ ಇದ್ದ ಅವರ ಆಚರಣೆಗೂ
ಈಗಿನ ಅವರ ಆಚರಣೆಗೂ ಮಹದಂತರವಾಗಿತ್ತೆಂದು ಹೇಳಬಹುದು.
ಯಾಕಂದರೆ ಅವರು ಕರ್ನಾಟಕದಲ್ಲಿ ಕಾಲಿಟ್ಟಾಗ ಯಾವ ಭಕ್ತರು
ವಿನ್ನಹ ಮಾಡಿಕೊಂಡರೂ ಅವರಲ್ಲಿ ಊಟ ಮಾಡುತ್ತಿದ್ದರು. ಬರಬರುತ್ತ
ಅವರ ವೈರಾಗ್ಯ ವೃತ್ತಿಯು ವೆಗ್ಗಳವಾಗಿ ಯಾರ ಕೈಯೊಳಗಿನ ಅಡಿಗೆ
ಯನ್ನೂ ಊಟ ಮಾಡದೆ ತಾವೇ ಸ್ವತಃ ಬಸವಪಾಯಸವೆಂದು ತಯಾರ
ಮಾಡಿ ತಮ್ಮ ನಿತ್ಯದ ಪ್ರಸಾದ ಮುಗಿಸುತ್ತಿದ್ದರು.

ಹೀಗಿರುವಲ್ಲಿ ಸೂಡಿ ಗ್ರಾಮಕ್ಕೆ ಬಂದ ನಂತರ ಅಲ್ಲಿಯ ಭಕ್ತರು
ಅವರನ್ನೊಂದು ಮಠದಲ್ಲಿ ಇಳಿಸಿ ಘನಮಠೇಶರಿಗೆ ಸ್ವಾಮೀ ತಾವು ತಮ್ಮ

ಪ್ರಸಾದ ಸಲುವಾಗಿ ಏನೂ ತ್ರಾಸು ತೆಗೆದುಕೊಳ್ಳುವ ಕಾರಣವಿಲ್ಲ
ತಮ್ಮ ಇಚ್ಛೆಯ ಪ್ರಕಾರವೇ ಓರ್ವ ಜಂಗಮನಿಂದ ನಿಮ್ಮ ಪ್ರಸಾದ
ತಯಾರ ಮಾಡಿಸುತ್ತೇವೆ. ನೀವು ನಮ್ಮಗಳಿಗೆಲ್ಲಾ ವಚನ ಶಾಸ್ತ್ರವನ್ನು
ಬೋಧ ಮಾಡಿರಿ ಎಂದು ಆಗ್ರಹ ಮಾಡಲು ಇವರ ಅಪೇಕ್ಷೆಯಂತೆ ಘನ
ಮಠೇಶರು ಮಠದಲ್ಲಿ ಕೂಡಿದ ಭಕ್ತಮಂಡಳಿಗೆ ಬಸವ ಬೋಧಾಮೃತ
ವನ್ನು ಮಾಡುತ್ತಿರುವಾಗ ಒಳಗೆ ಅಡಿಗೆ ಮಾಡುವವನು ಬಹಳ
ಹೊತ್ತಾದರೂ ಬೇಳೆ ಕುದಿಯದ್ದರಿಂದ ಸಿಟ್ಟಿಗೆದ್ದು ಇವನೌನ ಬ್ಯಾಳೀನ
ಕುದಿವಲ್ಲದು ಎಂದು ಅನ್ನುವ ಶಬ್ದವು ಹೊರಗಿರುವ ಘನಮಠೇಶರ ಕರ್ಣ
ದಲ್ಲಿ ಬೀಳಲು ಆ ಕ್ಷಣವೇ ಅವರು ಒಳಗೆ ಹೋಗಿ ಕುದಿಯುವ ಬ್ಯಾಳಿಯ
ಬೈದವನ ಬೈಗಳಿಂದ ಅಪವಿತ್ರವಾಯಿತು ಎಂದು ಅದನ್ನು ತೆಗೆ
ಯಿಸಿ ಮತ್ತೂ ತಾವೇ ತಮ್ಮ ಕೈಯಿಂದ ಪಾಕವನ್ನು ಮಾಡಿಕೊಂಡ
ಪ್ರಸಾದ ಮುಗಿಸಿ ಅಲ್ಲಿಂದ ಮುಂದಕ್ಕೆ ಕಳಕಮಲ್ಲೇಶನ ಸ್ಥಾನವನ್ನು
ನೋಡಿಕೊಂಡು ಹನಮಸಾಗರದ ಹಾದಿಯಲ್ಲಿ ಹತ್ತಿದ ಊರುಗಳನ್ನು
ಸಂದರ್ಶಿಸುತ್ತ ಇಲಕಲ್ಲಿಗೆ ದಯಮಾಡಿಸಿ ಅಲ್ಲಿ ಊರಮುಂದಿರುವ ಹಿರೆ
ಹಳ್ಳದ ದಂಡೆಯ ಒಂದು ತೋಟದಲ್ಲಿಳಿದು ಅಲ್ಲಿಯೇ ತಮ್ಮ ನಿತ್ಯಕರ್ಮ
ಗಳನ್ನು ತೀರಿಸುತ್ತ ಆನಂದದಿಂದಿರುತ್ತಿದ್ದರು.

ಆವಾಗ್ಗೆ ಶ್ರಾವಣ ಮಾಸವಿದ್ದದರಿಂದ ಪ್ರತಿವರ್ಷ ಪದ್ಧತಿಯಂ
ವಿರಕ್ತಮಠದ ವಿಜಯಮಹಾಂತ ಸ್ವಾಮಿಗಳ ಜಾತ್ರೆಯನ್ನು ಇಲಕ
ಭಕ್ತರು ಒಳ್ಳೇ ಭಕ್ತಿಯಿಂದ ಮಾಡುವಂತೆ ಶ್ರಾವಣಮಾಸದ ಜಾತ್ರೆ
ದಿನವು ಬಂದಿರಲು ಸರ್ವರೂ ಸಂಭ್ರಮದಿಂದ ವಿಜಯಮಹಾಂತ ಶಿ
ಯೋಗಿಗಳ ಅಡ್ಡಪಾಲಕಿ ಮಹೋತ್ಸವವನ್ನು ನಾನಾವಿಧ ವಾದ್ಯ
ಳಿಂದಲೂ ವಿಜಯ ಮಹಾಂತೇಶ ಬಹುಪರಾಕ ಎಂಬ ಭಕ್ತವೃಂದ
ಧ್ವನಿಗಳಿಂದಲೂ ಉತ್ಸವವು ಸಕಲ ಸಂಭ್ರಮದಿಂದ ಸಾಗಿರಲು ಊ
ಹೊರಗೆ ತೋಟದಲ್ಲಿರುವ ಘನಮಠೇಶರು ಊರೊಳಗೆ ನಡೆದಿರು
ಉತ್ಸವದ ಧ್ವನಿಯನ್ನು ಕೇಳಿ ತಮ್ಮ ಸಮ್ಮುಖದಲ್ಲಿರುವ ಭಕ್ತಾದಿಗಳ
ಇದಾವ ಧ್ವನಿಯು ಊರೊಳಗೆ ಯಾವ ಉತ್ಸವವು ನಡೆದಿದೆ ಎಂ

ಪ್ರಶ್ನೆಮಾಡಲಾಗಿ ಅಲ್ಲಿಯ ಭಕ್ತರು ಘನಮಠೇಶರಿಗೆ ಸ್ವಾಮಿ ನಮ್ಮ ಗ್ರಾಮದ ವಿರಕ್ತಮಠದ ವಿಜಯಮಹಾಂತಸ್ವಾಮಿಗಳವರ ಜಾತ್ರೆಯನ್ನು ಪ್ರತಿವರ್ಷ ಶ್ರಾವಣಮಾಸದಲ್ಲಿ ಸಕಲರೂ ಬಹು ಭಕ್ತಿಯಿಂದ ಮಾಡುತ್ತಬಂದಿದ್ದಾರೆ.

ಈಗಾದರೂ ಅದೇ ಸ್ವಾಮಿಗಳ ಅಡ್ಡಪಾಲಕಿ ಮಹೋತ್ಸವವು ಹೊರಟಿದೆ. ಆ ಉತ್ಸವದ ಧ್ವನಿಗಳೇ ತಮಗೆ ಕೇಳಿಬರುತ್ತಿವೆ. ಇಂಥ ಉತ್ಸವವು ಇಲ್ಲಿ ಎಲ್ಲಿಯೂ ಆಗುವದಿಲ್ಲ ಈಗಿರುವ ಸ್ವಾಮಿಗಳಾದರೂ ಬಹಳ ಮಹತ್ಪುರುಷರಿದ್ದಾರೆ ಅದಕ್ಕಾಗಿಯೇ ಜನರು ಅವರಮೇಲೆ ಭಕ್ತಿ ವಿಶ್ವಾಸಗಳನ್ನಿಟ್ಟು ನಡಕೊಳ್ಳುತ್ತಾರೆಂದು ಘನಮಠೇಶರಿಗೆ ಅಲ್ಲಿಯ ಜನರು ಹೇಳಿದ್ದನ್ನು ಕೇಳಿ ಘನಮಠೇಶರು ಸಾಕು ನಿಮ್ಮ ಸ್ವಾಮಿಯ ವರ್ಣನೆಯನ್ನು ನಮ್ಮಮುಂದೆ ಮಾಡಬೇಡಿರಿ ಯಾಕಂದರೆ ವಿರತಿ ವಿರಕ್ತ ನಿರಂಜನ ನಿರಾಭಾರಿ ಎಂದು ಮಾರುದ್ದ ಹೆಸರು ಬರಕೊಳ್ಳುವ ಈ ವಿರಕ್ತರು ಪಲ್ಲಕ್ಕಿಯಲ್ಲಿ ಕುಳಿತು ರಾಜಾಧಿರಾಜರಂತೆ ಹೇಗೆ ತಮ್ಮನ್ನು ಮೆರೆಯಿಸಿಕೊಳ್ಳುತ್ತಾರೋ ನಮಗೆ ತಿಳಿಯದಾಗಿದೆ. ತಮಗೆ ಭೋಗ ಭಾಗ್ಯಾದಿಗಳಲ್ಲಿ ಆಶೆ ಇದ್ದರೆ ವಿರಕ್ತಾಶ್ರಮವನ್ನು ಸ್ವೀಕರಿಸಿ ಪೂರ್ವಜರಾದ ತಪಸ್ವಿಗಳಿಂದ ಪವಿತ್ರವಾದ ಪೂಜ್ಯ ಶಿಂಹಾಸನವನ್ನೇಕೆ ಹತ್ತುತ್ತಾರೆ ಪ್ರಭುದೇವ ಪರಂಪರಾಗತ ನಿರಂಜನ ನಿರಾಭಾರಿ ಎಂಬ ಪೂಜ್ಯ ಶಬ್ದಗಳಿಗೆ ಅರಿವಾಳವನ್ನೇಕೆ ಹಚ್ಚಬೇಕು ಯಾವ ಪೂಜ್ಯಸ್ಥಾನಗಳಿಗೆ ತಾವು ಅಧಿಕಾರಿಗಳಾದಮೇಲೆ ಆ ಸ್ಥಾನಕ್ಕೆ ಸರಿಯಾದ ಆಚರಣೆ ಬೇಡವೇ ಬಾಯಿಂದಮಾತ್ರ ನಾವುವಿರತರು ಸನ್ಯಾಸಿಗಳು ಎಂದು ಹೇಳಿ ನಡೆಯುವದುಮಾತ್ರ ಸಾಧಾರಣ ಸಂಸಾರಿಗಳಂತೆ ಸಕಲವಿಧ ರಂಜನೆಗಳಿಗೆ ಆಶೆಬೀಳುವದೇ?

ಇಥವರಿಗೆ ನಿರಂಜನ ನಿರಾಭಾರಿಗಳೆಂದು ಹೇಗೆ ಕರೆಯಬೇಕು ತಮ್ಮಂಥ ಪೂಜ್ಯರೇ ಉತ್ಸವಾದಿಗಳಿಗೆ ಆಶೆಬಿದರೆ ವೀರಶೈವ ಮತದ ಆಶ್ರಮಧರ್ಮಗಳನ್ನು ಪಾಲಿಸುವವರಾರು ತಾವೇ ಡೊಂಕಾ

ಜಮೇಲೆ ಲೋಕದ ಭಕ್ತಾದಿಗಳ ಡೊಂಕನ್ನು ತಿದ್ದುವದುಹೇಗೆ ಮತ
ತತ್ವಗಳಾದ ಅಷ್ಟಾವರಣ ಪಂಚಾಚಾರ ಷಟಸ್ಥಲಗಳನ್ನು ರಕ್ಷಿಸುವದ
ಕ್ಕಾಗಿಯೇ ಪೂರ್ವದ ಮತಸ್ಥಾಪನಾಚಾರ್ಯರೂ ಶಿವಶರಣರೂ
ಊರೂರಿಗೆ ಅಧಿಕಾರಸ್ಥಾನಗಳನ್ನು ನಿರ್ಮಿಸಿದ್ದಾರೆ ಅಂಥಾ ಪೂಜ್ಯ
ಅಧಿಕಾರ ಸ್ಥಾನದಲ್ಲಿದ್ದು ತಮ್ಮ ಅಧಿಕಾರಕ್ಕೆ ಸರಿಯಾದ ಆಚರಣಗಳಿ
ದ್ದರೇನೆ ಇಹಕ್ಕೂ ಪರಕ್ಕೂ ಕಾರಣೀಭೂತರಾಗುತ್ತಾರೆ.

ಎಂದು ಕುಳಿತವರಮುಂದೆ ಘನಮಠೇಶರು ನಿಷ್ಟುರವಾಗಿ ನುಡಿ
ಯಲು ಅಲ್ಲಿಯ ಭಕ್ತರು ಊರೊಳಗೆ ಹೋಗಿ ಈ ವಿಷಯುವನ್ನು ಹಬ್ಬಿ
ಸಲು ಈ ವಿಷಯುವು ಕರ್ಣೋಪಕರ್ಣವಾಗಿ ವಿರಕ್ತಮಠದ ವಿಜಯ
ಮಹಾಂತ ಶಿವಯೋಗಿಗಳವರೆಗೂ ಮುಟ್ಟಿ ಘನಮಠ ಶಿವಯೋಗಿಗಳು
ತಮಗೆ ಈ ಪ್ರಕಾರ ಹೀಯಾಳಿಸಿದರೆಂದು ಕಿವಿಗೆ ಬಿದ್ದಾಕ್ಷಣವೇ , ಸ್ವಾಮಿ
ಗಳು ಮನಸ್ಸಿಗೆ ಏನೂ ವಿಪರೀತ ಮಾಡಿಕೊಳ್ಳದೆ ನಾವು ಎಂಥ ದೊಡ್ಡ
ಸ್ಥಾನದಲ್ಲಿದ್ದರೂ ಅಜ್ಞಾನವೆಂಬ ನಿದ್ರೆಯಲ್ಲಿ ಮಲಗಿದ ನಮ್ಮನ್ನು ಬಡಿ
ದೆಬ್ಬಿಸಿ ಸುಜ್ಞಾನವೆಂಬ ಬೆಳಕನ್ನು ತೋರಿ ನಿಜಸ್ಥಿತಿಯನ್ನರುಹಲು
ಬಂದ ಮಹಾತ್ಮನೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಶಿವಯೋಗಿಗಳಿರುವ
ಸ್ಥಾನಕ್ಕೆ ನಾಲ್ಕೆಂಟು ಜನರನ್ನು ಕೂಡಿಕೊಂಡು ಪಾದಚಾರಿಗಳಾಗಿ
ಘನಮಠ ಶಿವಯೋಗಿಗಳ ಸನ್ನಿಧಿಗೆ ಬರಲು ಶಿವಯೋಗಿಗಳು ಶಿಷ್ಟಾ
ಚಾರದಂತೆ ಬಂದ ಮಹಾಂತ ಯತಿಗಳಿಗೆ ನಮಸ್ಕಾರಮಾಡಿ ಅವರನ್ನು
ಆದರದಿಂದ ಕೂಡ್ರಿಸಿಕೊಂಡು ಏನು ಮಹಾಂತಪ್ಪಾ ನೀನು ಶ್ರೇಷ್ಠ
ವಾದ ಶೂನ್ಯ ಶಿಂಹಾಸನದಲ್ಲಿದ್ದರೂ ಅಜ್ಞಾನಿಗಳಂತೆ ಅಳಿಯುವ ಅಲ್ಪ
ಆಶೆಗೆ ಬಿದ್ದು ಭೋಗ ಭಾಗ್ಯಾದಿಗಳಿಗೆ ಆಶೆಪಡುವದೆ?

ಪೂರ್ವಪುಣ್ಯ ವಿಶೇಷದಿಂದ ಪ್ರಾಪ್ತವಾಪ ನಿರಂಜನಪಥವನ್ನು
ನಿರಾಕರಿಸಿ ಲೋಕದರಂಜನೆಗೆ ಬಿದ್ದು ಆತ್ಮಜ್ಞಾನವನ್ನು ಹಾಳುಮಾಡಿ
ಕೊಂಡು ಭವ ಭವಾಂತರ ಹುಟ್ಟು ಸಾವುಗಳಿಗೆ ಆಹುತರಾಗುವದೇ
ಇರಿವೆ ಎಂಭತ್ತುನಾಲ್ಕುಲಕ್ಷ ಜೀವರಾಶಿಗಳಲ್ಲಿ ಶ್ರೇಷ್ಠವಾದ ಮಾನವ

ಜನ್ಮದ ಮಹತಿಗೆ ಗುಣವೇ ಮುಖ್ಯವಾಗಿದೆಯಲ್ಲದೆ ಮಣಿಹೇಮಾದಿಗಳು ಕಾರಣವಲ್ಲವು ನಾನೇ ದೊಡ್ಡವನೆಂದು ಪಲ್ಲಕ್ಕಿಯಲ್ಲಿ ಕುಳಿತು ಜನರಿಂದ ಹೊರಿಸಿಕೊಂಡು ನಾನಾವೈಭವದೊಡನೆ ನೀನು ಬಜಾರದಲ್ಲಿ ಮೆರೆಯುವಾಗ ಕಾಡಿನಲ್ಲಿ ಬೆಳೆದು ನಿರ್ಜೀವಿಯಾದ ಬಿದುರುಕೋಲು ಒಂದೇ ಒಂದು ವಿನಯಗುಣವನ್ನಾಶ್ರಯಿಸಿ ವಿನಯವಾಗಿ (ಡೊಂಕಾಗಿ) ಬೆಳದದ್ದಕ್ಕೆ ಲೋಕದಲ್ಲಿ ನಿರಂಜದ ನಿರಾಭಾರಿಯಾದ ಸನ್ಯಾಸಿಯ ಶಿರಸ್ಸಿನಮೇಲೆ ಪಲ್ಲಕ್ಕಿಯ ದಂಡಿಗೆಯಾಗಿ ಮೆರೆಯಲಿಕ್ಕೆ ಕಾರಣವಾಯಿತು.

ನೀನೇ ವಿಚಾರಮಾಡಿ ನೋಡು ವಿರಕ್ತಾಶ್ರಮಿಯಾದ ನೀನು ಕಾಷಾಯಾಂಬರ ಧಾರಣಮಾಡಿಕೊಂಡು ನಾನೇ ದೊಡ್ಡವನೆಂದು ಜನರಿಂದ ಮೆರೆಯಿಸಿಕೊಳ್ಳುವ ನೀನು ದೊಡ್ಡವನೋ ಅಥವಾ ಪಲ್ಲಕ್ಕಿಯ ದಂಡಿಗೆ ದೊಡ್ಡದೋ ದಂಡಿಗೆಯ ಆಧಾರವೊಂದಿಲ್ಲದಿದ್ದರೆ ನೀನು ಪಲ್ಲಕ್ಕಿಯಲ್ಲಿ ಕೂಡ್ರಲು ಸಮರ್ಥನಾಗುತ್ತಿದ್ದಿಯಾ ಜ್ಞಾನಸಮೃದ್ಧವಾದ ಮಾನವಜನ್ಮವಿರುವಾಗಲೇ ಅಜ್ಞಾನಿಗಳಂತೆ ವರ್ತಿಸಿ ಮಾನವ ಜನ್ಮವನ್ನು ಹಾಳುಮಾಡಿಕೊಂಡರೆ ಮಾನವಜನ್ಮವೇನು ಸಂತೆಯಲ್ಲಿ ಮಾರುವ ಪಶುಜನ್ಮವೇ ನೋಡು ಮಹಾಂತಪ್ಪಾ ವಿರಕ್ತಸ್ವಾಮಿಯಾದ ನಿನ್ನಲ್ಲಿ ವಿರತಿಗೆ ಸರಿಯಾದ ಆಚರಣೆ ಬೇಡವೇ ರಾಜಾದಿರಾಜರಂತೆ ಪಲ್ಲಕ್ಕಿಯಲ್ಲಿ ಕುಳಿತು ಜನರಲ್ಲಿ ದೊಡ್ಡಾತನೆನಿಸಿಕೊಂಡರೆ ನಿನಗಾಗುವ ಲಾಭವೇನು ಹಿಂದಿನ ಹಿರಿಯರಾದ ಶಿವಶರಣರ ಆಚರಣೆಯನ್ನು ನೀನು ಅರಿಯದವನೇ–

ಜನರಲ್ಲಿ ನಿನ್ನನು ದೊಡ್ಡಾತನೆಂದರೆ । ಚಿನುಮಯ ಶಿವ
ನೇನು ಅರಿಯನೇ ಮರುಳೇ । ಬಿಡು ಬಾಹ್ಯದೊಳು ಡಂಭವ ।

ಎಂದು ಸರ್ಪಣ್ಣಾರ್ಯರು ಹೇಳಿರುವಂತೆ ಯತಿಗಳಾದ ನೀವು ಡಾಂಭಿಕಾಚರಣೆಗೆ ಆಶೆಬೀಳದೆ ನೀತಿಕ್ರಿಯಾಚಾರದಂತೆ ನಡೆದು ಲೋಕವಂದ್ಯರಾಗುವದು ಮೇಲಲ್ಲವೇ ವಿಚಾರಿಯಾದ ನಿನಗೆ ವಿಶೇಷ ಹೇಳಲು

ಕಾರಣವಿಲ್ಲ. ಈ ಪ್ರಕಾರ ವಿಜಯಮಹಾಂತ ಶಿವಯೋಗಿಗಳಿಗೆ ಶ್ರೀಘನ
ಮಠೇಶರು ವಿರತಿಯ ಮಹತ್ವವನ್ನು ಮನಸ್ಸಿನಮೇಲೆ ಪರಿಣಾಮ
ವಾಗುವಂತೆ ಬೋಧಿಸಿದಾಕ್ಷಣವೇ ಪರಿಪಕ್ವ ಹೃದಯರಾದ ವಿಜಯ
ಮಹಾಂತಶಿವಯೋಗಿಗಳು ಘನಮಠೇಶರಿಗೆ ಮಹಾತ್ಮಾ ವೈರಾಗ್ಯಶಿಖಾ
ಮಣಿಯಾದ ನಿನ್ನ ಚರಣಸಾಕ್ಷಿಯಾಗಿ ಆಜನ್ಮ ಪರಿಯಂತರ
ನಾನು ಪಲ್ಲಕ್ಕಿಯನ್ನೇ ಹತ್ತುವದಿಲ್ಲ ಎಂದು ಶಪಥಮಾಡಿ ಘನಮಠೇಶ
ರಿಂದ ಸಕಾಲಕ್ಕೆ ತಮಗಾದ ಜ್ಞಾನಬೋಧೆಯಿಂದ ಆನಂದ ಹೊಂದಿದ
ವರಾಗಿ ಘನಮಠೇಶರ ಗುಣಗಾನಮಾಡುತ್ತ ತಮ್ಮ ಮಠಕ್ಕೆ ತೆರಳಿದರು.

ಇತ್ತ ಘನಮಠೇಶರು ಇಲಕಲ್ಲಗ್ರಾಮದ ಸುತ್ತಮುತ್ತಲಿನ ಗ್ರಾಮ
ಗಳನ್ನು ಸಂಚಾರಮಾಡುತ್ತ ಶಿವಭಕ್ತರಿಂದ ಸಮೃದ್ಧವಾದ ಹುನಗುಂದ
ಗ್ರಾಮಕ್ಕೆ ಬಂದು ಅಲ್ಲಿಯ ಭಕ್ತರ ಭಕ್ತಿ ಭಾವಗಳನ್ನು ನೋಡಿ ಮನ
ಸ್ಸಿಗೆ ಆನಂದಹೊಂದಿ ನಾಗರಾಳ ಎಂಬಸಲ್ಲಿ ತಮ್ಮ ಶಿವಾರ್ಚನಾದಿ
ಗಳನ್ನು ತೀರಿಸಿ ಅವರು ಮಾಡುವ ಭಕ್ತಿಗೆ ಮೆಚ್ಚಿ ಅವರ ಮನೆತನಕ್ಕೆ
ಪರಮಾತ್ಮನು ಅಖಂಡವಾದ ಐಶ್ವರ್ಯವನ್ನು ದಯಪಾಲಿಸಲೆಂದು
ಹರ್ಷದಿಂದ ಆಶೀರ್ವದಿಸಿ ಪೂರ್ವಾಭಿಮುಖವಾಗಿ ಪ್ರಯಾಣ ಮಾಡುತ್ತ
ಕರಡಿ ಕೋಡಿಹಾಳ ಕಂದಗಲ್ಲ ನಂದವಾಡ್ಗಿ ಮುಂತಾದ ಗ್ರಾಮಗಳನ್ನು
ಸಂದರ್ಶಿಸುತ್ತ ಮುಂದೆ ಬಹು ಮನೋಹರವಾದ ಮುದಗಲ್ಲ ಎಂಬ
ಗ್ರಾಮಕ್ಕೆ ಬರುವವರಾಗಿದ್ದಾರೆ.

ಘನಮಠೇಶರು ತಮ್ಮ ತಾಯ್ನಾಡಾದ ತೆಲಗು ದೇಶವನ್ನು
ಬಿಟ್ಟು ಕರ್ನಾಟಕ ಸಂಚಾರದ ಐದಾರು ವರುಷ ಅವಧಿಯಲ್ಲಿ ನಮ್ಮ
ನಾಡಿನಲ್ಲಿ ನಮ್ಮ ಸಮಾಜದಲ್ಲಿ ಅವರ ಪ್ರತೀತಿಯು ಅಪ್ರತಿಮವಾಗಿ
ಬೆಳೆದುಹೋಗಿತ್ತು ಘನಮಠೇಶರು ಹೋದಹೋದಲ್ಲೆಲ್ಲ ಸಮಾಜದ
ಸರ್ವಭಕ್ತರೂ ಅವರನ್ನು ಆದರಪೂರ್ವಕವಾಗಿ ಭಕ್ತಿವಿಶ್ವಾಸಗಳಿಂದ
ಕಾಣುತ್ತಿದ್ದರು. ನಿರಾಶಾಮಯರಾದ ಇವರ ಮನೋವೃತ್ತಿಗೂ ಅವ
ರ್ಣನೀಯವಾದ ವೈರಾಗ್ಯದಿಂದ ವೆಗ್ಗಳವಾದ ತಪಃಶಕ್ತಿಗೂ ಸ್ವಾಭಾ

ವಿಕವಾದ ಸಮಾಜದ ಮೇಲಣ ಇವರ ಪ್ರೇಮಕ್ಕೂ ಬಸವಾದಿ ಶಿವ ಶರಣರ ತತ್ವದಂತೆ ತನ್ನ ಧರ್ಮದ ಅಷ್ಟಾವರಣ ಪಂಚಾಚಾರ ಷಟ್ಸ್ಥಲಗಳನ್ನೇ ತನ್ನ ಸಮಾಜಕ್ಕೆ ಬೋಧಿಸಲು ಹೊರಟ ಮಹಾತ್ಮನಿಗೆ ಯಾವ ಭಕ್ತನು ಬಾಗದಿರನು. ಮುದಗಲ್ಲಿಗೆ ಮಹಾತ್ಮರು ಬಂದ ಕೂಡಲೆ ಮುದಗಲ್ಲ ಗ್ರಾಮದ ಸರ್ವಭಕ್ತರು ನಾ ಮುಂದೆ ನೀ ಮುಂದೆ ಎಂದು ಶಿವಯೋಗಿಗಳ ಸೇವೆಯಲ್ಲಿ ಭಾಗವಹಿಸಿ ನಮ್ಮ ಮನೆಗೆ ಬರಬೇಕು ನಿಮ್ಮ ಮನೆಗೆ ಬರಬೇಕು ಎಂದು ಒಬ್ಬರಿಗೊಬ್ಬರು ಮೇಲಾಡುವದನ್ನು ಕಂಡು ಘನಮಠೇಶರು ಅವರೆಲ್ಲರನ್ನು ಕೂಡ್ರಿಸಿಕೊಂಡು "ಅಪ್ಪಾ, ನೀವು ಮಾಡುವ ಭಕ್ತಿಯು ಡಾಂಭಿಕವೆನಿಸುತ್ತದೆ. ನೀವು ಮಾಡುವ ಈ ಪ್ರಕಾರದ ಪ್ರೇಮಕ್ಕೆ ನಮ್ಮ ಮನಸ್ಸು ಒಪ್ಪುವದಿಲ್ಲಾ. ಸ್ವಾರ್ಥ ರಹಿತವಾದ ಮನಸ್ಸಿನಿಂದ ಯಾವ ಭಕ್ತನು ಮುಚ್ಚು ನೀರನ್ನಷ್ಟೇ ಕೊಟ್ಟರೂ ಅದೇ ನಿಜವಾದ ಭಕ್ತಿ. ನಾನು ಮಾಡುವೆನೆಂಬ ಮಮಕಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಪ್ರತಿ ಫಲಾಶೆಯಿಂದ ಮಾಡುವ ಉಪಚಾರವು ಭಕ್ತಿಯೆನಿಸಲಾರದು. ಯಾರಿಂದ ಏನೂ ಅಪೇಕ್ಷಿಸಲಾರದ ನಮಗೆ ನೀವು ದೂಷಣೆ ಮಾಡಿದರೂ ಅಷ್ಟೇ ಭೂಷಣೆ ಮಾಡಿದರೂ ಅಷ್ಟೇ" ಎಂದು ಅವರಿಗೆ–

> ದೂಷಣೆ ಮಾಡಲಡೊಂಡೇ । ಜನರತಿ । ಭೂಷಣೆ
> ಮಾಡಲದೊಂದೇ ॥ ..............................

ಎಂದು ತನ್ನ ನಿರಾಶಾಮಯವಾದ ಮನಸ್ಸಿನ ಅರಿವು ಅವರಿಗಾಗುವಂತೆ ಐದು ನುಡಿ ಪದವನ್ನು ಮಾಡಿ ಅವರಿಗೆ ಕಲಿಸಿ ಅವರಿಗೆಲ್ಲಾ ನಿಜವಾದ ಭಕ್ತಿಯ ಜ್ಞಾನವನ್ನು ಬೋಧ ಮಾಡಿ ಯಾರ ಮನೆಗೂ ತಾವು ಹೋಗದೆ ಮೈಸೂರ ಮಹಾಂತ ಸ್ವಾಮಿಗಳವರ ವಿರಕ್ತಮಠದಲ್ಲಿಯೇ ತಮ್ಮ ನಿತ್ಯಾಚರಣೆಯನ್ನು ಮಾಡುತ್ತಾ ಬಂದ ಭಕ್ತಾದಿಗಳಿಗೆ ವಚನ ಶಾಸ್ತ್ರವನ್ನು ಬೋಧಿಸುತ್ತಾ ಒಂದೆರಡು ದಿವಸ ಇರುತ್ತಿರಲು ಅಂಕಸದೊಡ್ಡಿಯ ಅಸರಡ್ಡಿ ವೀರಭದ್ರನೆಂಬೋರ್ವ ಭಕ್ತನು ವಿದ್ಯಾವಿಹೀನನಾದರೂ ವಚನಶಾಸ್ತ್ರದಲ್ಲಿ ಬಲ್ಲಿದನಾಗಿ ಘನಮಠೇಶರ ಪ್ರತೀತಿಯನ್ನು

ಕೇಳಿ ಅವರಿಂದ ವಚನ ಶಾಸ್ತ್ರವನ್ನು ಕೇಳಬೇಕೆಂಬ ಕುತೂಹಲವುಳ್ಳವ ನಾಗಿ ಮುದಗಲ್ಲ ಮುಕ್ಕಾಮಿನಲ್ಲಿ ಮಹಾತ್ಮರಿರುವರೆಂಬ ವಿಷಯ ತಿಳಿದು ಪೂರ್ವಕಾಲದ ಪದ್ಧತಿಯಂತೆ ಮೊಳಕಾಲ ಮೇಲೆ ಚಣ್ಣವನ್ನು ತೊಟ್ಟು ಕೊಂಡು ಶಿವಯೋಗಿಗಳ ದರ್ಶನಾರ್ಥಿಯಾಗಿ ಮುದಗಲ್ಲಿಗೆ ಬಂದು ಮಠದಲ್ಲಿರುವ ಮಹಾತ್ಮರಿಗೆ ಸಾಷ್ಟಾಂಗವೆರಗಿ ದೂರಕುಳಿತು ಕೊಳ್ಳಲು ಈತನು ಚಣ್ಣವನ್ನು ತೊಟ್ಟಿದ್ದನ್ನು ಕಂಡು ಇವನು ಯಾವನೋ ಪರಮು ತಸ್ಥನೆಂದು ತಿಳಿದು " ಯಾರಪ್ಪಾ ನೀನು ಇಲ್ಲಿ ಬರಲು ಕಾರಣವೇನು? " ಎಂದು ಪ್ರಶ್ನೆ ಮಾಡಲು ವೀರಭದ್ರಪ್ಪನು ವಿನಯದಿಂದ "ಬುದ್ಧೀ ಇಲ್ಲಿಗೆ ಗಾವುದು ಅಂತರದಲ್ಲಿರುವ ಅಂಕಸದೊಡ್ಡಿ ಎಂಬುದು ನನ್ನ ಗ್ರಾಮ ಅಸ ರಡ್ಡಿ ವೀರಭದ್ರನೆಂದು ನನ್ನ ನಾಮ. ತಮ್ಮಿಂದ ವಚನ ಶಾಸ್ತ್ರವನ್ನು ಕೇಳಬೇಕೆಂಬ ಬಯಕೆಯಿಂದ ಬಂದದ್ದಾಯಿತು.

ಎಂದು ವೀರಭದ್ರಪ್ಪನು ವಿಷಯ ತಿಳಿದಾಕ್ಷಣವೇ ಶಿವಯೋಗಿಗಳು ಇವನ ಸರಳವಾದ ಭಕ್ತಿಯನ್ನು ವಚನ ಶಾಸ್ತ್ರದ ಮೇಲಿನ ಹಂಬಲವನ್ನು ತಿಳಿದು, " ಒಳ್ಳೇದು. ಮೊದಲು ನೀನು ತೊಟ್ಟಿರುವ ಚಣ್ಣವನ್ನು ಬಿಟ್ಟು ಧೋತರವನ್ನುಟ್ಟುಕೊಂಡು ನಮ್ಮಲ್ಲಿಗೆ ಬಾ ಮುಸಲ್ಮಾನರಂತೆ ಮೊಳ ಕಾಲ ಚಣ್ಣವನ್ನು ಹಾಕಿಕೊಂಡರೆ ನಿನ್ನನು ಶಿವಭಕ್ತನೆಂದು ಹೇಗೆ ತಿಳಿಯು ಬೇಕು ? ಶಿವಭಕ್ತರಿಗೆ ಸಲ್ಲತಕ್ಕ ವೇಷಭೂಷಣಗಳಿಂದಲೇ ಸದಾ ವರ್ತಿಸ ಬೇಕು." ಎಂದು ಶಿವಯೋಗಿಗಳು ನುಡಿದಾಕ್ಷಣವೇ ವೀರಭದ್ರಪ್ಪನು ಪ್ರತಿಯನ್ನಾಡದೆ ತಾನು ಉಟ್ಟಿರುವ ಚಣ್ಣವನ್ನು ತೆಗೆದೊಗೆದು ಧೋತರ ವನ್ನುಟ್ಟುಕೊಂಡು ಶಿವಯೋಗಿಗಳ ಸನ್ನಿಧಿಯಲ್ಲಿಯೇ ಶಿವಯೋಗಿಗಳ ಶೇವೆಮಾಡುತ್ತಾ ಅವರಿಂದಾ ವಚನ ಶಾಸ್ತ್ರವನ್ನು ಶ್ರವಣ ಮಾಡಿಕೊ ಳ್ಳುತ್ತಾ ಇರುತ್ತಿರಲು ಮುದಗಲ್ಲ ಭಕ್ತರು ಘನಮಠೇಶರಿಗೆ ಮಾಡುವ ಉಪಚಾರಗಳು ಹೆಚ್ಚಾಗಲು ಶಿವಯೋಗಿಗಳು ವೀರಭದ್ರಪ್ಪನಿಗೆ "ಭಕ್ತಾ, ಈ ಗ್ರಾಮದ ಭಕ್ತರ ಪರಾಮರ್ಶೆಯು ಅತಿಯಾಗಲಿಕ್ಕೆ ಹತ್ತಿತ್ತು. ಇವರು ಮಾಡುವ ಭಕ್ಷಭೋಜ್ಯಾದಿಗಳಿಗೆ ಆಶೆಬಿದ್ದರೆ, ನಿರಾಶಾಮಯರಾದ ನಮಗೆ ನಮ್ಮ ಮನಸ್ಸು ಸ್ವಾತಂತ್ರತಪ್ಪಿ ಆಶಾಆಶಾ ಪರದುಃಖಂ ಎಂಬಂತೆ

ಕಷ್ಟಕ್ಕೆ ಕಾರಣವಾಗಬುಹದು. ಈಗಿನ ಭಕ್ತರಾದರೂ ಸಾಮಾನ್ಯರಲ್ಲಾ ಮೊದಲು ನಮ್ಮಂಥವರನ್ನು ಅಳತೆಇಲ್ಲದ ಅಟ್ಟಕ್ಕೇರಿಸಿ ನಂತರ ಅವರ ಆಧೀನತೆಯಂತೆ ನಾವು ವರ್ತಿಸದಿದ್ದರೆ ಅನಂತ ಅಪಪ್ರಚಾರಮಾಡಿ ಅಧಃ ಪಾತಕ್ಕೆಳೆಯುತ್ತಾರೆ. ಕಾರಣ ಇಂಥವರ ಸಹವಾಸದಲ್ಲಿ ಹೆಚ್ಚು ಕಾಲ ಇರಬಾರದು. ಇನ್ನು ಈ ಗ್ರಾಮ ಬಿಡುವದೇ ಯೋಗ್ಯ "ವೆಂದರು.

ಆದೇ ಗ್ರಾಮದ ಅಡವಿಯಲ್ಲಿ ದಟ್ಟಾಗಿ ಬೆಳೆದ ಬಿಲ್ವವನಕ್ಕೆ ಪ್ರಯಾಣಮಾಡಿ ವೀರಭದ್ರಪ್ಪನೊಡನೆ ಯಾರಿಗೂ ತಿಳಿಯದಂತೆ ವಾಸ ಮಾಡಿ ಪ್ರತಿನಿತ್ಯ ಬಿಲ್ವಪತ್ರಿಗಳನ್ನೇ ತಮ್ಮ ಆಹಾರವನ್ನಾಗಿ ಮಾಡಿ ಕೊಂಡು ಇರುತ್ತಿರಲು, ಈ ವಿಷಯವು ಜನರಿಗೆ ತಿಳಿದು ಘನಮಠೇಶರ ಬಳಿಗೆ ಜನರು ಅತಿಯಾಗಿ ಬರಹತ್ತಲು ಬಂದ ಭಕ್ತರಿಗೆಲ್ಲಾ ಸದ್ಬೋಧೆ ಯನ್ನುಮಾಡಿ ಸರ್ವರಿಗೂ " ನಿಮ್ಮ ಗ್ರಾಮದಲ್ಲಿಯೇ ಬೇಕಾದಷ್ಟು ಮಂದಿ ಗುರುಲಿಂಗ ಜಂಗಮರಿದ್ದಾರೆ. ನಮಗೆಮಾಡಬೇಕೆನ್ನುವ ಉಪ ಚಾರಗಳನ್ನು ನೀವು ಅಲ್ಲಿಯೇ ಸಲ್ಲಿಸಿದರೆ ನಿಮ್ಮ ಭಕ್ತಿಗೆ ಸರಿಯಾದ ಫಲ ವನ್ನು ಸದಾಶಿವನು ಕೊಟ್ಟೇಕೊಡುತ್ತಾನೆ. ಗುರುಲಿಂಗ ಜಂಗಮದಲ್ಲಿ ಭೇದವೆಣಿಸಿದರೆ ಭಕ್ತನು ಮಾಡುವ ಭಕ್ತಿಯಲ್ಲಾ ನಷ್ಟವಾಗಿ ಅಧಃಪಾತ ಕ್ಕೀಡಾಗಲು ಕಾರಣವಾಗುತ್ತದೆ "

ಎಂದು ಅವರಿಗೆ ಸಮಾಧಾನ ಹೇಳಿ ಅಲ್ಲಿಂದ ವೀರಭದ್ರಪ್ಪನನ್ನು ಸಂಗಡ ಕರಕೊಂಡು ಸಮೀಪದಲ್ಲಿರುವ ಲಿಂಗಸೂರು ಎಂಬ ಗ್ರಾಮಕ್ಕೆ ಬಂದು ಅಲ್ಲಿಯ ಭಕ್ತರ ಅನುಮತಿಯಂತೆ ತೋಟದ ಸ್ವಾಮಿಗಳ ವಿರಕ್ತ ಮಠದಲ್ಲಿ ಇಳಿದು ತಮ್ಮ ನಿತ್ಯ ಕರ್ಮಗಳನ್ನು ತೀರಿಸಿ ಕೊಳ್ಳುತ್ತಾ ಲಿಂಗಸೂಗೂರ ಭಕ್ತರಲ್ಲಿ ಪ್ರಮುಖರೂ, ಅಲ್ಲಿಯ ಗೌಡರೂ ಆದ ಪಿಡ್ಡಿನ ಗೌಡರೆಂಬುವರು ತಮ್ಮ ಗ್ರಾಮದ ಸಕಲ ಭಕ್ತರನ್ನೊಡಗೊಂಡು ಶಿವ ಯೋಗಿಗಳ ದರ್ಶನಕ್ಕೆ ಪ್ರತಿದಿವಸ ಉದಯ ಸಾಯಂಕಾಲಗಳಲ್ಲಿ ತಪ್ಪದೆ ಬಂದು ಮಹಾತ್ಮರಿಗೆ ವಂದಿಸಿ ಅವರ ಆಚರಣೆಗೆ ಅನೂಕೂಲ ಮಾಡಿ ಕೊಟ್ಟು ಅವರಿಂದ ಪ್ರತಿನಿತ್ಯ ಅಷ್ಟಾವರಣಗಳ ಅರಿವು ತಮಗಾಗುವ

ವಚನ ಶಾಸ್ತ್ರವನ್ನು ಕೇಳಿ ವಚನ ಶಾಸ್ತ್ರದಲ್ಲಿ ಮಹಾತ್ಮರಿಗಿರುವ ಮಹ
ತ್ತರ ಜ್ಞಾನವನ್ನು ಸರ್ವರೂ ಕೊಂಡಾಡುತ್ತಾ ತಮ್ಮ ಮನೆಗಳಿಗೆ
ಹೋಗುತ್ತಿರಲು ಶ್ರೀ ಶಿವಯೋಗಿ ಘನಮಠೇಶರಿಗೆ ಅದೇ ಲಿಂಗಸುಗೂರ
ಪಂಚಾಕ್ಷರ ಮಠದ ಚರಪಟ್ಟಾಧ್ಯಕ್ಷರೂ ಷಟ್‌ಸ್ಥಲಬ್ರಹ್ಮಿಗಳೂ ಶಿವಾನು
ಭವದಲ್ಲಿ ಬಲ್ಲಿದರೂ ಲೋಕದ ಜನರಲ್ಲಿ ವಿರುದ್ಧ ವರ್ತನೆ ಕಂಡಾಗ್ಯೂ
ಆಧ್ಯಾತ್ಮ ವಿಚಾರದಲ್ಲಿ ಅಪ್ರತಿಮರೆಂದು ತಿಳಿದು ಅವರನ್ನು ಕಾಣಬೇ
ಕೆಂಬ ಅಭಿಲಾಷೆಯುಳ್ಳವರಾಗಿ ತನ್ನೊಡನಿದ್ದ ಅಂಕಸದೊಡ್ಡಿ ಆಸರಡ್ಡಿ
ವೀರಭದ್ರಪ್ಪನನ್ನು ಅಲ್ಲಿಯೇ ಬಿಟ್ಟು "ಈ ದಿವಸ ಸಾಯಂಕಾಲದೊಳ
ಗಾಗಿ ನೀರಲಕೇರಿಯಲ್ಲಿ ನೆಲೆಸಿದ ಬಸವಲಿಂಗಯತಿಗಳನ್ನು ದರ್ಶನ ಮಾಡಿ
ಕೊಂಡು ಪುನಃ ಇಲ್ಲಿಗೆ ಬರುತ್ತೇವೆ ಬಂದ ನಂತರ ನಿನ್ನ ಗ್ರಾಮಕ್ಕೆ
ಪ್ರಯಾಣ ಮಾಡೋಣ"

ಎಂದು ಆತನಿಗೆ ಹೇಳಿ ಹಾಗೆ ತಾವು ಪ್ರಯಾಣ ಬೆಳೆಸಿ ಮಾರ್ಗ
ದಲ್ಲಿ ಬರುವ ಕರಡಕಲ್ಲ ಗ್ರಾಮವನ್ನು ದಾಟಿ ನೀರಲಿಕೇರಿಯ ಸಮೀಪಕ್ಕೆ
ಹೋಗಲು ಎರಡು ಎಮ್ಮೆಗಳನ್ನು ಮೇಯಿಸುತ್ತ ನಿಂತಿರುವ ಶ್ರೀ ಬಸವ
ಲಿಂಗ ಸ್ವಾಮಿಗಳನ್ನು ಇವರೇ ಸ್ವಾಮಿಗಳೆಂದು ಗುರುತಿಸದೆ ಅವರನ್ನೇ
ನೀರಲಕೇರಿಯಲ್ಲಿ ಬಸವಲಿಂಗಪ್ಪನವರೆಂಬವರು ಇದ್ದಾರೆಯೇ ಅವರೇನು
ಮಾಡುತ್ತಿದ್ದಾರೆ ಅವರ ಉದ್ಯೋಗವೇನು? ವ್ಯವಹಾರವೇನು?
ಈ ಪ್ರಕಾರ ಅವರನ್ನೇ ವಿಚಾರಿಸಲು ತೀಕ್ಷ್ಣಮತಿಗಳಾದ ಬಸವ
ಲಿಂಗಪ್ಪನವರು ನಾಡಿನಲ್ಲೆಲ್ಲಾ ವೀರವಿರತಿಯೆಂದು ಪ್ರಖ್ಯಾತನಾಗಿ
ಪ್ರಯಾಣ ಮಾಡುವ ವೀರವಿರಾಗಿ ಘನಮಠೇಶರೆಂಬವರು ಇವರೇ ಇರ
ಬೇಕು. ಅನ್ಯರಿಗೆ ನಮ್ಮ ವಿಷಯ ಇಷ್ಟೊಂದು ಪ್ರಶ್ನೆ ಮಾಡುವ ಯೋ
ಗ್ಯತೆಯಾದರೂ ಹೇಗೆ ಬಂದೀತು ಇವರೇ ಘನಮಠೇಶರೆಂದೂಹಿಸಿ ವ
ಯೋವೃದ್ಧರಾದ ಶ್ರೀಗಳವರು ತಮ್ಮ ಮುಂದೆ ನಿಂತಿರುವ ಘನಮಠೇಶ
ರನ್ನು ಆದರದಿಂದ ತಮ್ಮ ಸಮೀಪಕ್ಕೆ ಕರೆದು ಬಾರಪ್ಪಾ ಕುಳಿತುಕೋ
ಎಂದು ಅವರನ್ನು ಕುಳ್ಳಿರಿಸಿಕೊಂಡು ಶೀಘ್ರ ಕವಿತಾಶಕ್ತಿಯುಳ್ಳ ಬಸವ
ಲಿಂಗಪ್ಪನವರು......................

ತಮ್ಮ ಕೇಳೊ ನಮ್ಮ ಉದ್ಯೋಗ| ತಮ್ಮ ಕೇಳೊ
ನಮ್ಮ ವ್ಯವಹಾರ| ಹಮ್ಮುಬಿಮ್ಮುಗಳೆಂಬೆರಡೆಮ್ಮಿ
ಯ| ಕಾಯ್ತಿವಿ| ತಮ್ಮ ಕೇಳೋ ನಮ್ಮ ಉದ್ಯೋಗ ||

ಈ ಪ್ರಕಾರವಾದ ಪದವನ್ನು ಪೂರ್ಣ ಮಾಡಿ ಹಾಡಲು ಇವರೇ ಬಸವಲಿಂಗಾರ್ಯರೆಂದು ತಿಳಿದು ಘನಮಠೇಶರು ನಮಸ್ಕಾರಗಳನ್ನು ಮಾಡಿದ ನಂತರ ಘನಮಠೇಶರನ್ನು ಬಸವಲಿಂಗಪ್ಪನವರು ತಮ್ಮ ಮಠಕ್ಕೆ ಕರೆದುಕೊಂಡು ಹೋದ ನಂತರ ಉಭಯರೂ ತಮ್ಮ ಲಿಂಗಾರ್ಚನೆಗಳನ್ನು ತೀರಸಿಕೊಂಡು ಸುಖಾಶೀನರಾಗಿ ಕುಳಿತ ನಂತರ ಘನಮಠೇಶರು ಬಸವ ಲಿಂಗಪ್ಪನವರು ಬಲ್ಲಿದರಾದರೂ ಅವರಿಗೆ ಕೆಲವು ಅತಿಸೂಕ್ಷ್ಮಗಳಾದ ವೀರಶೈವ ಧರ್ಮದ ಕಟ್ಟಾಚರಣೆಗಳನ್ನು ನಿವೇದಿಸಿ ಬಸವಲಿಂಗಪ್ಪನ ವರೇ ನೀವು ಜ್ಞಾನ ಸಮೃದ್ಧರಾದರೂ ಕ್ರಿಯಾರಹಿತವಾದ ನಮ್ಮಿ ಶರೀ ರವು ಲೋಕದ ಸ್ತುತಿನಿಂದೆಗಳೆರಡಕ್ಕೂ ಕಾರಣವಾಗುತ್ತದೆ. ಕಾರಣ ನೀವು ಕ್ರಿಯಾಬದ್ಧರಾಗಿ ಜ್ಞಾನ ಪ್ರತಿಪಾದನ ಮಾಡುವದೇ ಮಹಾತ್ಮರ ಮತಯೆಂದು ಅವರಿಗೆ ಅರುಹಿ ಅವರಿಂದ ಅನುಜ್ಞೆಯಂ ಹೊಂದಿ ಪುನಃ ಸಾಯಂಕಾಲಕ್ಕೆ ಲಿಂಗಸೂಗೂರಿಗೆ ದಯಮಾಡಿಸಿ ವಿರಕ್ತಮಠದಲ್ಲಿಯೇ ಶಿವಾರ್ಚನಾದಿಗಳನ್ನು ತೀರಿಸಿ ಬಂದ ಭಕ್ತಾದಿಗಳಿಗೆ ಬಸವಬೋಧಾಮೃತ ವನ್ನು ಬೋಧ ಮಾಡುತ್ತಿದ್ದರು.

ಬಹು ದಿನಗಳಿಂದ ತಮ್ಮ ಹಿಂದೆ ಬೆನ್ನು ಹತ್ತಿದ ಅಂಕಸದೊಡ್ಡಿಯ ವೀರಭದ್ರಪ್ಪನ ಉಪದ್ರವಕ್ಕೆ ಬೇಸತ್ತು ಅಂದಿನ ರಾತ್ರಿ ಮಠಕ್ಕೆ ಬಂದ ಸಕಲ ಭಕ್ತಾದಿಗಳಿಗೆ ನಾಳಿನ ಉದಯಕ್ಕೆ ನಾವು ಮುಂದೆ ಪ್ರಯಾಣ ಮಾಡುತ್ತೇವೆ. ಶಿವನು ನಿಮಗೆ ಸದಾ ಸದ್ಬುದ್ಧಿಯನ್ನಿಯಲಿ ಸದಾ ಇದೇ ಪ್ರಕಾರ ನಮ್ಮಂಥ ಹರಗುರು ಚರಮೂರ್ತಿಗಳಿಗೆ ಯಥಾ ಪ್ರಕಾರ ಸೇವೆ ಯನ್ನು ಸಲ್ಲಿಸಿ ಶಿವಭಕ್ತ ಶ್ರೇಷ್ಠರೆಂದು ಪ್ರಸಿದ್ಧರಾಗಿರಿ ಎಂದು ಸರ್ವರಿಗೂ ಆಶೀರ್ವದಿಸಿ ಊರ ಪ್ರಮುಖರಾದ ಸಿದ್ದಪ್ಪಗೌಡರನ್ನು ಮುಂದೆ ಕರೆದು "ಗೌಡಾ, ನಿನ್ನಲ್ಲಿರುವ ಜಂಗಮ ಪ್ರೇಮಕ್ಕೆ ಶಿವನು ಮೆಚ್ಚಿ, ನಿಮ್ಮ ಮನೆ ತನಕ್ಕೆ ಸದಾ ಸರಕಾರದಿಂದ ಯಥಾ ಪ್ರಕಾರವಾದ ಗೌರವಾದಿಗಳು ಸಲ್ಲು

ತ್ತಿರಲಿ" ಎಂದು ಆತನಿಗೂ ತಮ್ಮ ಅಮೃತ ವಾಣಿಯಿಂದ ಆಶೀರ್ವದಿಸಿ, ಸರ್ವರನ್ನೂ ಅವರವರ ಮನೆಗೆ ಕಳುಹಿಸಿ; ಅದೊಂದು ರಾತ್ರಿ ಅಲ್ಲಿಯೆ ಕಳೆದು, ಮರುದಿವಸ ಪ್ರಾತಃಕಾಲದ ಪೂರ್ವದಲ್ಲಿಯೇ ಎದ್ದು ಶೌಚಾಚ ಮಾನಾದಿಗಳನ್ನು ತೀರಿಸಿಕೊಂಡು, ವೀರಭದ್ರಪ್ಪನೊಡನೆ ಅವನ ಅಪೇಕ್ಷೆ ಯಂತೆ ಅಂಕುಶದೊಡ್ಡಿಗೆ ಪ್ರಯಾಣ ಮಾಡಬೇಕೆಂದು, ವೀರಭದ್ರಪ್ಪನ ಹಿಂದೆ ತಾವೂ ಮಾರ್ಗ ಕ್ರಮಣ ಮಾಡಹತ್ತಿದರು ಮುಂದೆ ವೀರಭದ್ರ ಪ್ಪನು ಬಹುದಿನಗಳಿಂದಲೂ ತಾನು ಕಷ್ಟಪಟ್ಟದ್ದಕ್ಕೆ ಶ್ರೀ ಘನಮಠೇಶರು ತನ್ನ ಪ್ರಾರ್ಥನೆಯಂತೆ ತನ್ನ ಗ್ರಾಮಕ್ಕೆ ಬರಲು ಒಪ್ಪಿದರೆಂಬ ಬಹು ಆನಂದದಿಂದ ಶಿವಯೋಗಿಗಳ ಮುಂದೆ ಮಾರ್ಗ ತೋರಿಸುವ ಮುಂಜಾಗ್ರ ತೆಯಿಂದಲೋ ಮುಂದೆ ಮುಂದೆ ಅವಸರವಾಗಿ ಪ್ರಯಾಣ ಮಾಡುತ್ತ ಮುಂದೆ ಸಂತೆಯಕೆಲೂರ ಎಂಬ ಗ್ರಾಮಕ್ಕೆ ಉಭಯ ಗುರು-ಶಿಷ್ಯರೂ ಬಂದರೆಂಬವಲ್ಲಿಗೆ ನವಮ ಪ್ರಕರಣ ಪರಿಸಮಾಪ್ತಿಃ

## ೯ ನೆಯ ಪ್ರಕರಣಂ ಸಮಾಪ್ತಂ



# ೧೦ ನೆಯ ಪ್ರಕರಣ



ಸೂಚನೆ ಪದ:- ಹರಗುರುಭಕ್ತಿಯುಕ್ತ ಶಿವಧರ್ಮಪರಾಯಣ

ಭಕ್ತವೃಂದದಿಂ | ವರಸುರವಿದ್ಯೆಯಿಂ ಮೆರೆವ ಪಂಡಿತರಿಂ | ನರ ನಾಡಗೌಡರಿಂದ | ಪರಶಿವಧರ್ಮರಕ್ಷಕರೆನಿಪ್ಪ ಮಹತ್ವ | ಮಠಾಧಿನಾಥರಿಂ | ಹಿರಿಮಠದೊಡೆಯ ಧರ್ಮಗುರು | ದೇವ ಶಿಕಪುಂಗವ ಶ್ರೇಷ್ಠ ವರ್ಗದಿಂ | ಗುರುವಿನ ನಾಮದಿಂ ಮೆರೆವ | ಮಠದಮರೇಶ ಮಹಾನುಭಾವರಿಂ| ಸುರವನದಂತೆ ಶೋಭಿಪ ಕೆಲೂರ್ಗೆಸುದರ್ಶನವಿತ್ತ ಘನಮಠಾ ||

ಸಂತೆಕೆಲೂರ ಗ್ರಾಮವೆಂದರೆ ಸರ್ವಸಾಧಾರಣ ಗ್ರಾಮವಾಗಿರದೆ ಇದಕ್ಕೆ ಇತಿಹಾಸ ಪರಂಪರೆ ಇದೆ ಹಿಂದಕ್ಕೆ ಏಳುನೂರು ವರ್ಷಗಳ ಹಿಂದೆ ಈ ಊರಿನ ವಿಶಾಲತೆ ಆಗಿನ ಕಾಲದ ಇಲ್ಲಿಯ ವೀರಶೈವರ ಜನಸಂಖ್ಯೆ ಇವುಗಳ ವಿಷಯವಾಗಿ ಜನರಲ್ಲಿ ಪರಂಪರೆಯಾಗಿ ಬಂದ ಮಾತುಗಳನ್ನು ಕೇಳಿದರೆ ಸಖೇದಾಶ್ಚರ್ಯವೆನಿಸುತ್ತದೆ. ಹಿಂದಿನ ಕಾಲದಲ್ಲಿ ಮೊಗಲರಾಳಿಕೆ ಪ್ರಾಬಲ್ಯವಿದ್ದಾಗ ಈ ಗ್ರಾಮದ ಸುಲಿಗೆಯಾಗಿ ಏಳು ಒಂಟೆಗಳ ಮೇಲೆ ಲಿಂಗಾಯತರ ಚೌಕಗಳನ್ನು ಒಯ್ದರೆಂಬ ಪ್ರತೀತಿಯು ಇಂದಿಗೂ ಪ್ರಸಿದ್ಧವಿದೆ. ಹಿಂದಿನ ಕಾಲದ ಗ್ರಾಮದ ವಿಸ್ತೀರ್ಣವು ಒಂದು ಮೈಲು ಸಹಜವಿರಬಹುದು. ಅಂದಿನ ಹಳೇ ಗ್ರಾಮದ ಅವಶೇಷಗಳು ಇಂದಿಗೂ ನಿಚ್ಚಳವಾಗಿವೆ. ಅಂದಿನಿಂದಲೂ ಪ್ರಸಿದ್ಧವಾದ ಕೆಲೂರಲ್ಲಿ ಇಂದಿಗೂ ಅಂದರೆ ನಮ್ಮ ಚರಿತ್ರ ಪುರುಷ ಘನಮಠೇಶರು ಸಂತೆಕೆಲೂರಿಗೆ ಬರುವ ಸಮಯಕ್ಕಾದರೂ.......................

ವಿದ್ವಾಂಸೋಕವಯೋ ಭಟ್ಟಾ। ಗಾಯಕೋಪರಿಹಾಸಕಃ।
ಇತಿಹಾಸಃ ಪುರಾಣೀಕ ಸಭಾಸಪ್ತಾಂಗ ಲಕ್ಷಣಂ ॥ ........

ಎನ್ನುವಂತೆ ನಮ್ಮ ಕೆಲೂರಲ್ಲಿ ಸಕಲವಿಧ ಕಲಾವಂತರೂ ವೈಯ್ಯಾಕರಣಿಗಳೂ ವೇದಾಂತಿಗಳೂ ಮೊದಲಾದ ಮಹಾಮೇಧಾವಿಗಳು ಉಪಸ್ಥಿತರಿದ್ದರು ಊರ ಹಿರೇಮಠದಲ್ಲಿ ಆಚಾರದಲ್ಲಿ ಅನುರಕ್ತರೂ ಮುಗ್ಧಸ್ವಭಾವಿಗಳೂ ಆದ ವೀರೇಶ್ವರರೆಂಬ ದೇಶಿಕವರೇಣ್ಯರೂ ಮಹಾಂತಿನಮಠದಲ್ಲಿ ಮಹಾಂತಸ್ವಾಮಿಗಳೆಂಬ ಚರವರ್ಯರೂ ಮತ್ತು ಊರ ಪ್ರಮುಖರೂ, ಚಾಣಾಕ್ಷರೂ, ಮಾಲೀ-ಪಾಟೀಲರೂ ಆದ, ಬೋಳರಡ್ಡಿ ಗೌಡ ವಿರೂಪಾಕ್ಷರಾಯ ಮುದ್ದಲಿಂಗಪ್ಪನವರೆಂಬ ನಾಡಗೌಡರ ಮನೆತನಕ್ಕೆ ವಂಶಪರಂಪರಾಗತ ಮನೆ ಗುರುಗಳೂ, ಗುರುವಿನ ಮಠದವರೆಂಬ ನಾಮಾಂಕಿತರೂ, ಸಂಕೇಕೆಲೂರ, ಮುಸಲಿಕಾರಲಕುಂಟೆ, ಕುಣಿಕೆಲೂರ ಎಂಬ ಮೂರು ಗ್ರಾಮಗಳಲ್ಲಿರುವ ಮಠಮಾನ್ಯಗಳಿಂದ ಅಲಂಕೃತರೂ, ಆಚಾರದಲ್ಲಿ ನಿಷ್ಠರೂ ವಿದ್ಯಾವಂತರೂ ಎನಿಸಿದ ಅಮರಪ್ಪನವರೂ, ಅಂಬಲಿಯ ಮಠದಲ್ಲಿ ವೀರಯ್ಯನವರೆಂಬ ವಯೋವೃದ್ಧರೂ ದೇವರು ಶ್ರೀಮಂತಿಕೆಯನ್ನು ಕೊಟ್ಟಿದರೂ ಬಹಿರಂಗದಲ್ಲಿ ಶಿರಿವಂತಿಕೆಯ ದುರಭಿಮಾನವನ್ನು ತೋರಿಕೊಳ್ಳದೆ ಯಾವಾಗಲೂ ಗುರುಲಿಂಗ ಜಂಗಮದಲ್ಲಿ ಭಕ್ತಿಯುತರಾಗಿ ಸದ್ಭಾವನೆಯಿಂದ ಆಚಾರ ಶೀಲರಾಗಿ ನಡೆಯುವ ಹೆಸರೂರ ದೊಡ್ಡಪ್ಪ ಕಾಡಪ್ಪ ಬಸವಲಿಂಗಪ್ಪನವರೆಂಬ ಸಹೋದರತ್ರಯರೂ ಮೂಡಲಪಾಯ ಗಾಯನದಲ್ಲಿ ಬಲ್ಲಿದನೂ ಮತ್ತು ಕನ್ನಡ ಶಾಸ್ತ್ರಾರ್ಥದಲ್ಲಿ ಪಾರಂಗತನಾದ ಲೇವಡಿಯ ಚನ್ನಪ್ಪನೆಂಬಾತನೂ ಇದಲ್ಲದೆ ಒಕ್ಕಲತನದಲ್ಲ ಒಳ್ಳೇ ಹೆಸರಾದ ಪೀಪಿರುದ್ರಪ್ಪನೆಂಬ ಪ್ರಮುಖ ರೈತನೂ ಹಾಡು ಮತ್ತು ಬಾರಿಸುವದರಲ್ಲಿಯೂ ಜ್ಯೋತಿಷ್ಯ ವೇದಾಂತದಲ್ಲಿಯೂ ನಾನಾವಿಧ ಕಲಾವಂತರಿಂದ ಸಮೃದ್ಧವಾದ ಕೆಲೂರಿನಲ್ಲಿ ಸಕಲ ಸಮಾಜದವರ ಗುಡಿ ಗೋಪುರಗಳು ಸಮಾಜ ಬಂಧುಗಳ ಜಾಗ್ರತೆ ಇಂದಲೋ ಧರ್ಮದ ಮೇಲಿನ ಪ್ರೇಮದಿಂದಲೋ ಸಕಲವಿಧ ಪೂಜಾ ಪುರಸ್ಕಾರಗಳಿಂದಲೂ ಗೋಪುರಗಳ ಮೇಲೆ ಥಳಥಳಿಸುವ ಕಳಸಗಳಿಂದಲೂ ನೋಡುವವರ ಕಣ್ಮನಂಗಳಿಗೆ ಆನಂದವೀಯುತ್ತಿತ್ತು.

ಆಗಿನ ಸಮಯದಲ್ಲಿ ಕೆಲೂರ ಪ್ರಮುಖರೆಲ್ಲಾ ಸೂರ್ಯೋದಯ ಸಾಯಂಕಾಲ ಸಮಯಗಳಲ್ಲಿ ಊರ ಮುಂದಿರುವ ಪರ್ವತೇಶನ ದೇವಾಲಯಕ್ಕೆ ಬಂದು ದೇವರ ದರ್ಶನ ತಕ್ಕೊಂಡು ದೇವಸ್ಥಾನದ ಮುಂಭಾಗದಲ್ಲಿರುವ ವಿಶಾಲವಾದ ಬಾಜಾರ ಕಟ್ಟೆಯ ಮೇಲೆ ದಟ್ಟಾಗಿ ಬೆಳೆದ ಬೇವಿನ ಮರದ ತನಿನೆಳಲಲ್ಲಿ ತಾಸೆರಡು ತಾಸು ಕುಳಿತು ಪರಸ್ಪರ ಕ್ಷೇಮ ಸಮಾಚಾರ ತಿಳಿದು ತಮ್ಮ ತಮ್ಮ ಮನೆಗಳಿಗೆ ಹೋಗುವ ವಾಡಿಕೆಯು ಇಂದಿಗೂ ಪ್ರಚಾರದಲ್ಲಿದೆ. ಪ್ರತಿ ದಿವಸ ಪದ್ಧತಿಯಂತೆ ಊರ ಪ್ರಮುಖ ಯಜಮಾನರೆಲ್ಲರೂ ಸೂರ್ಯೋದಯಕ್ಕೆ ಪರ್ವತೇಶನ ದೇವಾಲಯಕ್ಕೆ ಬಂದು ದೇವದರ್ಶನ ತಕ್ಕೊಂಡು ಮಂದಿರದ ಮುಂದಿರುವ ಕಟ್ಟೆಯ ಮೇಲೆ ಕುಳಿತು ಪರಸ್ಪರ ಸಂಭಾಷಣೆ ಗೈಯುತ್ತಿರಲು, ಅದೇ ಸಮಯಕ್ಕೆ ಲಿಂಗಸುಗೂರಿನಿಂದ ಘನಮಠೇಶರನ್ನು ತನ್ನ ಗ್ರಾಮಕ್ಕೆ ಕರಕೊಂಡು ಹೊರಟ ಅಂಕಸದೊಡ್ಡಿಯ ಅಸೆರಡ್ಡಿಯ ವೀರಭದ್ರಪ್ಪನು ಇದೇ ಮಾರ್ಗವಾಗಿ ಇವರೆಲ್ಲರು ಕುಳಿತಿರುವ ಬಾಜಾರ ಕಟ್ಟೆಯ ಸಮೀಪಕ್ಕೆ ಬರಲು ಆಗ ಪ್ರಮುಖರೆಲ್ಲಾ ಪರಿಚಯಸ್ಥನಾದ ವೀರಭದ್ರಪ್ಪನನ್ನು ಕುರಿತು ಓ ಹೋನಸುಕು ಹರಿಯುವದರೊಳಗೆ ಯಜಮಾನನೆಲ್ಲಿಂದ ಬಂದನು ಬನ್ನಿ ಯಜಮಾನರೇ, ಕುಳಿತುಕೊಳ್ಳಿರಿ ಎಂದು ಪರಾಮರ್ಶಿಸಲು ವೀರಭದ್ರಪ್ಪನು ಆತುರದಿಂದ ಸರ್ವರನ್ನುದ್ದೇಶಿಸಿ ಲೋಕದಲ್ಲಿ ವೀರವಿರತರೆಂದು ವಿಖ್ಯಾತನಾದ ಘನಮಠೇಶರೆಂಬವರು ಇವರೇ ಎಂದು ಹಿಂದೆ ಬರುವ ಮಹಾತ್ಮರನ್ನು ತೋರಿಸಲು ಸರ್ವರೂ ಆನಂದಾಶ್ಚರ್ಯವುಳ್ಳವರಾಗಿ ತಾವು ಕುಳಿತ ಕಟ್ಟೆಯಿಂದಿಳಿದು ಲಿಂಗಸುಗೂರ ಮಾರ್ಗವಿಡಿದು ಬರುವ ಶಿವಯೋಗಿಗಳಿಗೆ ಸಮ್ಮುಖರಾಗಿ ಅವರು ಬರುವದನ್ನು ನೋಡುತ್ತಾ ನಿಂತಿರಲು ಶಿವಯೋಗಿಗಳು ಸಮೀಪಕ್ಕೆ ಬಂದಾಕ್ಷಣವೇ ಸರ್ವರೂ ಸಾಲಾಗಿ ಸಾಷ್ಟಾಂಗ ನಮಸ್ಕಾರಗಳನ್ನು ಹಾಕಲು ಶಿವಯೋಗಿಗಳು ಹಸನ್ಮುಖಿಗಳಾಗಿ ಸಾಷ್ಟಾಂಗವೆರಗಿದ ಸರ್ವಭಕ್ತರನ್ನುದ್ದೇಶಿಸಿ "ಏಳಿರಪ್ಪಾ, ನಿಮ್ಮ ಸರಳ ಭಕ್ತಿಭಾವವನ್ನು ಕಂಡು ಮನಸ್ಸಿಗೆ ಮಹಾನಂದವಾಯಿತು. ದೇವರು ನಿಮಗೂ ನಿಮ್ಮ ಗ್ರಾಮಕ್ಕೂ ಕಲ್ಯಾಣ ಮಾಡಲಿ" ಎಂದು ಆಶೀರ್ವದಿಸಿ ಎಲ್ಲರನ್ನುದ್ದೇಶಿಸಿ, ಇದು ಯಾವ ಗ್ರಾಮವಪ್ಪಾ ಈ ಗ್ರಾಮದ

ಹೆಸರೇನು ? ಎಂದು ಪ್ರಶ್ನೆ ಮಾಡಲು ಚಾಣಾಕ್ಷ ಬುದ್ಧಿಯುಳ್ಳ ಲೇವಡಿ ಚನ್ನಪ್ಪನೆಂಬಾತನು ಶಿವಯೋಗಿಗಳಿಗೆ ಬುದ್ಧೀ ಇಲ್ಲಿ ಕೆಲೂರ ಎಂಬ ಗ್ರಾಮಗಳು ಮೂರ್‍ನಾಲ್ಕು ಇರುವ ಕಾರಣ ನಮ್ಮ ಗ್ರಾಮದಲ್ಲಿ ಸಂತೆಯಾಗುವ ಪ್ರಯುಕ್ತ ಈ ಗ್ರಾಮಕ್ಕೆ ಸಂತೆಕೆಲೂರ ಅನ್ನುತ್ತಾರೆ ಎಂದು ಹೇಳಲು ಶಿವಯೋಗಿಗಳು ಎಲ್ಲರೂ ಆಶ್ಚರ್ಯವಾಗುವಂತೆ " ಹೌದಪ್ಪಾ, ನಿಮ್ಮ ಗ್ರಾಮಕ್ಕೆ ಸಂತೀಕೆಲೂರ ಅನ್ನುವದು ಅಂಕಿತನಾಮವಾಗಿರದೆ ಅನ್ವರ್ಥಕನಾಮವಾಗಿದೆ. ಯಾಕಂದರೆ ಸಕಲವಿಧ ಶಾಸ್ತ್ರದಲ್ಲಿಯೂ ಹಲವಾರು ಕಲೆಯಲ್ಲಿಯೂ ಕಾಲಕಾಲಾಂತರ ಅರಿತವರು ಹಲವರಿರುವ ಕಾರಣ ನಿಮ್ಮ ಗ್ರಾಮಕ್ಕೆ ಹಲವೂರು ಅರ್ಥಾತ್ ಕೆಲವೂರು ಎಂಬ ನಾಮವು ಸಾರ್ಥಕವಾಗಿದೆ

ಇದುವರೆಗೂ ಕರ್ನಾಟಕದ ನಾನಾ ಭಾಗಗಳಲ್ಲಿ ನಾವು ತಿರುಗಿದರೂ, ಸಕಲ ವಿಧ ಶಾಸ್ತ್ರಜ್ಞರಿಂದ ಕೂಡಿದ ನಿಮ್ಮಂಥ ಗ್ರಾಮವನ್ನು ನಾವು ಕಾಣಲಿಲ್ಲ. ನಿಮ್ಮ ನಡೆ ನುಡಿ ಅಚಾರ ವಿಚಾರಗಳೆಲ್ಲವೂ ಈ ಅಂಕುಶದೊಡ್ಡಿಯ ವೀರಭದ್ರಪ್ಪನಿಂದ ನಮಗೆ ಮೊದಲೇ ತಿಳಿದಿವೆ. ನಿಮ್ಮೆಲ್ಲರನ್ನು ನೋಡಿ ಬಹು ಸಂತೋಷವಾಯಿತು ಎಂದು ಶಿವಯೋಗಿಗಳು ನುಡಿಯುತ್ತಲೇ ಸದಾಚಾರ ಸದ್ಗುಣಯುತನಾದ ಹೆಸರೂರ ದೊಡ್ಡಪ್ಪನೆಂಬ ಸದ್‌ಗ್ರಹಸ್ಥನು ಶಿವಯೋಗಿಗಳಿಗೆ ನಮಸ್ಕಾರ ಮಾಡಿ ಬುದ್ಧೀ ಶಿವಾರ್ಚನೆಯ ಸಮಯವಾಗಿದೆ, ಇಲ್ಲಿಯೇ ತಮ್ಮ ಶಿವಾರ್ಚನೆಯನ್ನು ಮುಗಿಸಿಕೊಂಡು ಶಿವನು ಕೊಟ್ಟ ಶಿವಪ್ರಸಾದವನ್ನು ಲಿಂಗಾರ್ಪಿತಗೊಳಿಸಿ ಬಡ ಭಕ್ತರ ಬಯಕೆಯನ್ನು ಪೂರ್ಣ ಮಾಡಬೇಕು ಎಂದು ವಿನಯದಿಂದ ವಿಜ್ಞಾಪಿಸಿಕೊಳ್ಳಲು ಶಿವಯೋಗಿ ಘನಮಠೇಶರು ಇವರ ವಿನಯ ವಿವೇಕವನ್ನರಿತು ಇವರ ಅಭಿಲಾಷೆಯನ್ನು ಅಮಾನ್ಯ ಮಾಡದೆ ಆಗಲಿ ಭಕ್ತಶ್ರೇಷ್ಠ ನಿನ್ನ ಅಪೇಕ್ಷೆಯಂತೆ ಲಿಂಗಾರ್ಪಿತವು ನಿಮ್ಮಲ್ಲಿಯೇ ಆಗಲಿ ಅಂದರೆ ನೀವು ನಮ್ಮ ಕಟ್ಟಳೆಯಂತೆ ನಮ್ಮನ್ನು ಯಾರ ಮನೆಗೂ ಕರೆಯದೆ ವಿರಕ್ತಮಠದಲ್ಲಾಗಲೀ ಅಥವಾ ಶಿವಾಲಯದಲ್ಲಾಗಲೀ ಅನುಕೂಲ ಮಾಡಿಕೊಟ್ಟರೆ ಅಲ್ಲಿಯೇ ನಮ್ಮ ನಿತ್ಯ ನೇಮಗಳನ್ನು ನೆರವೇರಿಸುತ್ತೇವೆ.

ಎಂದು ಹೇಳಿದ ಮಾತಿಗೆ ಸರ್ವರೂ ಸಮ್ಮತಿಪಟ್ಟು "ಬುದ್ಧೀ ತಮ್ಮ ಅಭಿಪ್ರಾಯದಂತೆ ನಮ್ಮಲ್ಲಿ ತೋಂಟದ ಸ್ವಾಮಿಗಳವರ ' ವಿರಕ್ತಮಠ ವಿದೆ. ಅಲ್ಲಿಯೇ ತಮ್ಮ ಅನುಷ್ಠಾನಕ್ಕೆ ಅನುಕೂಲ ಮಾಡಿಕೊಡುತ್ತೇವೆ ಅಲ್ಲಿಗೆ ತಾವು ದಯಮಾಡಿಸಬೇಕು" ಎಂದು ಪ್ರಾರ್ಥಿಸಲು ಅದೇ ಸಮ ಯಕ್ಕೆ ಅಂಕಸದೊಡ್ಡಿಯ ಅಸರಡ್ಡಿ ವೀರಭದ್ರಪ್ಪನು ಸುಮ್ಮನಿರದೆ ಶಿವ ಯೋಗಿಗಳಿಗೆ" ಬುದ್ಧಿ ಇನ್ನೂ ಶಿವಾರ್ಚನೆಗೆ ವೇಳೆಯಾಗಿಲ್ಲಾ ಅಷ್ಟ ರೊಳಗಾಗಿ ನಮ್ಮ ಅಂಕಸದೊಡ್ಡಿಗೆ ಸೇರುತ್ತೇವೆ. ಇಲ್ಲಿಗೆ ನಮ್ಮ ಗ್ರಾಮ ಮೂರೇ ಮೈಲು ಉಳಿದಿದೆ ನಮ್ಮಲ್ಲಿಂದ ತಾವು ತಿರುಗಿ ಬರುವಾಗ ಈ ಗ್ರಾಮದಲ್ಲಿ ಶಿವಾರ್ಚನೆ ಮಾಡಬಹುದು" ಎಂದು ಅಡ್ಡಿಮಾಡಲು ಆ ಸರಡ್ಡಿಯ ವೀರಭದ್ರಪ್ಪನ ಅಧಿಕ ಪ್ರಸಂಗಕ್ಕೆ ಘನಮಠೇಶರು ಸಿಡಿಮಿಡಿ ಗೊಂಡು ವೀರಭದ್ರಪ್ಪನಿಗೆ " ಎಲೋ (ಪೆಚ್ಚಕುಂಟಿ) ನೀನು ಈಗ ತಿಂಗಳಿಂದಾ ನಮ್ಮ ಸಹವಾಸದಲ್ಲಿದ್ದು ನಮ್ಮ ಸಲಿಗೆಯಿಂದ ನಮ್ಮ ಮೇಲೆ ಅಧಿಕಾರ ನಡೆಸಯಿಲು ಬಂದಿಯಾ ಮನೆಮಾರು ಮಡದಿ ಮಕ್ಕಳ ಹಂಗು ಹರಿದು ಯಾರಹಂಗಿಲ್ಲದೆ ಯಾರಿಂದ ಎನೂ ಅಪೇಕ್ಷಿಸದೇ ನಿರಾಶಾಮಯಯರಾದ ನಮ್ಮನು ನಿನ್ನ ಅಧೀನ ವೆಂದು ತಿಳಿದಿಯಾ ತಿಂಗಳಿಂದ ಘನಮಠರ ಸೇವೆಮಾಡಿ ನನ್ನ ಗ್ರಾಮಕ್ಕೆ ಅವರನ್ನು ಕರತಂದೆನೆಂಬ ಮಮಕಾರದಿಂದ ಮುಚ್ಚಿದ ನಿನ್ನೊಡನೆ ನಿನ್ನ ಗ್ರಾಮಕ್ಕೆ ನಾವು ಸರ್ವಥಾ ಬರುವದಿಲ್ಲ ಬಂದದಾರಿಗೆ ಸುಂಕವಿಲ್ಲದಂತೆ ನಿನ್ನ ಗ್ರಾಮಕ್ಕೆ ಮರುಳು ಎಂದು ಆತನಿಗೆ ಅರುಹಿ ಸಂತಿಕೆಲೂರ ಭಕ್ತರ ಆಗ್ರಹದಂತೆ ಅವರೊಡನೆ ಬಂದು ತೋಂಟದ ಸ್ವಾಮಿಗಳವರ ವಿರಕ್ತಮಠವನ್ನು ನೋಡಿ ಇಲ್ಲಿಯೇ ನಮಗೆ ಬಹಳ ಯೋಗ್ಯವಿದೆ. ಈ ಸ್ಥಾನವನ್ನು ನೋಡಿದರೆ ಹಿಂದೆ ನಾವು ಬಿಟ್ಟುಬಂದ ಕುಂಟೋಜಿಯ ಚೌಕಿಯೇ ಸ್ಮರಣೆಗೆ ಬರುತ್ತದೆ. ಮತ್ತು ನಿಮ್ಮಲ್ಲಿಯ ಭಕ್ತಿಭಾವಗಳನ್ನು ನೋಡಿದರೆ ಕುಂಟೋಜಿಯ ಭಕರೆ ಇಲ್ಲಿ ಬಂದಂತೆ ಭಾಸವಾಗುತ್ತದೆ. ಎಂದು ತಮ್ಮ ಮನಸ್ಸಿನ ಆನಂದವನ್ನು ವ್ಯಕ್ತಮಾಡಿ ಅಲ್ಲಿಯೇ ತಮ್ಮ ಅನುಷ್ಠಾನಕ್ಕೆ ಆರಂಭಿಸಿದರು.

ಶ್ರೀ ಘನಮಠ ಶಿವಯೋಗಿಗಳು ನಮ್ಮ ಕೆಲವೂರಿಗೆ ಬರುವ ಹಿಂದಿನ ವರ್ಷ ನಡೆದ ಒಂದು ವಿಚಿತ್ರ ಘಟನೆ ಎಂದರೆ ಇಸ್ಲಾಂ ಧರ್ಮದ ಪದ್ಧತಿಯಂತೆ ಪ್ರತಿ ವರ್ಷ ಭಾರತದಾದ್ಯಾಂತ ಆಚರಣೆಯಲ್ಲಿರುವ ಮೊಹರಂ ಹಬ್ಬವು ಬಂದಿರಲು ಆ ಸಮಯದಲ್ಲಿ ಮಹಮ್ಮದಿಯರು ಮೊಹರಂ ತಿಂಗಳ ೧ ನೆಯ ತಾರೀಖಿನಿಂದ ೧೦ ನೆಯ ತಾರೀಖಿನವರೆಗೂ ದೇವರನ್ನು ಕೂಡಿಸಿ ಹಬ್ಬವನ್ನು ಆಚರಿಸಲು ನಿರ್ಮಾಣ ಮಾಡಿಕೊಂಡಿರುವ ಮಸಿದೆ ಮಂದಿರಗಳಲ್ಲಿ ಹಸೇನ, ಹುಸೇನ, ಮೌಲಾಲಿ, ಕಾಶಿಮ್‌ಪೀರ, ಮೊದಲಾದ ದೇವರನ್ನು ಕೂಡಿಸಿ ಹತ್ತು ದಿನಗಳವರೆಗೂ ದೇವರ ಹೆಸರಿನ ಮೇಲೆ ಪ್ರತಿದಿನ ಒಂದೊಂದು ದೇವರ ಉತ್ಸವ ಹೊರಡಿಸಿ ಸಂಭ್ರಮದಿಂದ ಊರೆಲ್ಲ ಪ್ರದಕ್ಷಿಣೆ ಮಾಡುವಂತೆ ಒಂಭತ್ತನೆಯ ದಿನ (ಕತ್ತಲ ರಾತ್ರಿ) ದಲ್ಲಿ ಮುಖ್ಯ ದೇವರಾದ ಹಸೇನ, ಹುಸೇನ ಎಂಬ ಎರಡು ದೇವರ ಮೆರವಣಿಗೆ ಹೊರಡಿಸುತ್ತಾರೆ.

ಅಂದು ಸಂತೆಕೆಲವೂರ ಎಲ್ಲ ದರ್ಮದವರೂ ಈ ದೇವರಿಗೆ ಊದುಬತ್ತಿ, ಸಕ್ಕರೆ ಅರ್ಪಿಸಿ ಭಕ್ತಿಯನ್ನು ತೋರ್ಪಡಿಸುತ್ತಾರೆ, ಅಂದಿನ ರಾತ್ರಿ ಬೆಳಗಿನ ಮೂರು ಗಂಟೆ ಸಮಯಕ್ಕೆ ದೇವರನ್ನು ಪ್ರತಿ ವರ್ಷ ಹಿಡಿಯುವ ನಮ್ಮ ಕೆಲವೂರ ಮಹಮ್ಮದಿಯರಲ್ಲಿ ಮುಲ್ಲಾಗಳೆಂದು ಪ್ರಸಿದ್ಧರಾದವರಲ್ಲಿ ಖಾನಸಾಹೇಬರೆಂಬ ಶರಣರು ನೀತಿ ಕ್ರಿಯಾಚರಣೆಯಲ್ಲಿ ಬಲ್ಲಿದರಾದ್ದರಿಂದ ಅವರೇ ಕೆಲವೂರಿನ ಹಿರೇ ದೇವರಾದ ಹುಸೇನಪೀರಾ ಎಂಬ ದೇವರನ್ನು ಅವರು ತಮ್ಮ ಉಡಿಯಲ್ಲಿಟ್ಟುಕೊಂಡು ಬಾಜಾ ಬಜಂತ್ರಿ ಅನಂತ ಮೋಜು ಮೆರವಣಿಗೆಯಲ್ಲಿ ಬೆಳಗುವ ಇಲಾಲ (ಪಂಜು) ಗಳ ಬೆಳಕಿನಲ್ಲಿ ಗ್ರಾಮದ ಎಲ್ಲ ಬೀದಿಗಳಲ್ಲಿರುವ ಹಿಂದು ಧರ್ಮದ ದೇವತೆಗಳಾದ ಮಾರುತಿ (ಪ್ರಾಣ ದೇವರು) ವೀರಭದ್ರದೇವರು, ದ್ಯಾಮವ್ವ ಎಲ್ಲ ದೇವರ ದರ್ಶನ ತೆಗೆದುಕೊಂಡು ಗ್ರಾಮಾಧಿಕಾರಿಗಳಾದ ಗೌಡ, ಕುಲಕರ್ಣಿ, ಶೆಟ್ಟಿ, ಶಾನುಭೋಗ ಮಠ ಮಂದಿರಗಳಿಗೆ ಭೆಟ್ಟಿಕೊಟ್ಟು ಅವರಿಂದ ಸಕ್ಕರೆ ಉದಬತ್ತಿಯು ಮೊದಲಾದ ಸಕ್ಕರೆ ಪಡೆದು ಗ್ರಾಮದ ಚಾವಡಿಯ ಮುಂದಿರುವ ಈಗಿರುವ ಸಾಹುಕಾರ ಮನೆಗಳಿಗೆ ಭೆಟ್ಟಿಕೊಟ್ಟು ಮುಂದೆ ಬಾಜಾರಕ್ಕೆ ಹೋಗುವ ಪದ್ಧತಿ ಇದ್ದರೂ ಅಂದಿನ ದಿನ ಹುಸೇನಪೀರಾ ದೇವರನ್ನು ಹಿಡಿದ ಖಾನ

ಸಾಹೇಬರು ಸಾಹುಕಾರ ಮನೆಯಿಂದ ಬಜಾರ ಕಡೆಗೆ ಬರದೇ ಸಾಹುಕಾರ ಮನೆಯ ಉತ್ತರ ದಿಕ್ಕಿಗೆ ಲಿಂಗಸುಗೂರಿಗೆ ಹೋಗುವ ಲೈನದವರೆಗೂ ಎಲ್ಲಾ ಬಾಜಾ ಬಜಂತ್ರಿ ಜನಸಂದಣಿಯನ್ನು ತೊರೆದು ದೇವರನ್ನು ಹೆಗಲ ಮೇಲೆ ಹೊತ್ತು ರಭಸದಿಂದ ಮಸಣಕ್ಕೆ ಹೋಗುವ ಮಾರ್ಗದಲ್ಲಿ ಹೋಗಿ ಲೈನದ ಮೇಲೆ ನಿಲ್ಲಲು ಆಗ ಊರ ಜನರೆಲ್ಲ ಗಾಬರಿಯಾಗಿ ಇದೇನು ಎಂದೂ ಹೋಗದ ದಾರಿ ಹಿಡಿದು ಇಂದೇಕೋ ದೇವರು ಈ ದಾರಿಗೆ ಹೋದ ಏನೋ ಇದು ನಮಗೆ ಮುಂಬರುವ ಅನಿಷ್ಠ ಸೂಚನೆ ಎಂದು ಎಲ್ಲರೂ ಗುಂಪಾಗಿ ಹೋಗಿ ಮೌನಿಯಾಗಿ ನಿಂತ ಖಾನಸಾಹೇಬರನ್ನು ಇದೇನು ಮಹತ್ಮರೆ ಎಂದು ಇಲ್ಲದ ಈ ಆಕ್ರಮವೇಕೆ ನಮಗೆ ಭಯವಾಗುತ್ತದೆ, ಇದೇನು ನಿಮ್ಮ ಸೂಚನೆ ಎಂದು ಕೇಳಲಾಗಿ ಹುಸೇನಪೀರಾ ದೇವರನ್ನು ಹಿಡಿದ ಖಾನಸಾಹೇಬರು ಸಮಾಧಾನದಿಂದ ಅಂದು ಜನರನ್ನು ಉದ್ದೇಶಿಸಿ ನುಡಿದ ಭವಿಷ್ಯವಾಣಿ ಎಂದರೆ ನೀವೇನು ಭಯಪಡುವ ಕಾರಣವಿಲ್ಲ ನಿಮಗೇನು ಕೇಡಾಗುವದಿಲ್ಲ.

ಮುಂದಿನ ವರ್ಷ ಇದೇ ಮಾರ್ಗದಿಂದ ಒಬ್ಬ ಮಹತ್ಮರು ಶಿವಯೋಗಿಗಳು ನಮ್ಮ ಗ್ರಾಮಕ್ಕೆ ಬರುತ್ತಾರೆ. ಅವರನ್ನು ನೀವು ಮುಂದೆ ಬಿಡಬೇಡಿರಿ, ಅವರಿಂದ ನಮ್ಮ ಗ್ರಾಮದ ಭವಿಷ್ಯ ಉಜ್ವಲವಾಗುತ್ತಿದೆ ಅವರು ನಮ್ಮ ಗ್ರಾಮಕ್ಕೆ ಬರಲೆಂದೇ ನಮ್ಮ ಗ್ರಾಮದ ಪರವಾಗಿ ಸ್ವಾಗತ ಬಯಸಲು ನಾನಿಲ್ಲಿಗೆ ಬಂದಿದ್ದೇನೆ ಎಂದು ಜನರನ್ನು ಸಮಾಧಾನಪಡಿಸಿ ಮೆರವಣಿಗೆಯೊಡನೆ ಕಾರ್ಯಕ್ರಮ ಮುಗಿಸಿದರೆಂದು ಪ್ರತೀತ ಇದೆ. ಮುಂದಿನ ವರ್ಷವೇ ಶ್ರೀ ಘನಮಠ ಶಿವಯೋಗಿಗಳು ನಮ್ಮ ಗ್ರಾಮಕ್ಕೆ ಬಂದರೆಂದು ಜನಜನಿತವಾಗಿದೆ. ಅಂದು ಘನಮಠ ಶಿವಯೋಗಿಗಳು ನಮ್ಮ ಗ್ರಾಮಕ್ಕೆ ಬರುವ ಭವಿಷ್ಯವನ್ನು ನುಡಿದ ಮುಲ್ಲಾ ಮನೆತನದ ಖಾನಸಾಹೇಬರು ಹಿಂದೆ ಕೆಲ ದಿನಗಳಲ್ಲಿ ಲಿಂಗಸುಗೂರ ಸಿಂಧನೂರ ರೋಡಿನಲ್ಲಿರುವ ಅಸಮುಕಲ್ಲ ಎಂಬ ಗ್ರಾಮದಲ್ಲಿ ಶಿವಾಧೀನರಾಗಿದ್ದಾರೆ. ಗ್ರಾಮದ ಮುಂಭಾಗದಲ್ಲಿ ರೋಡಿನ ಪಕ್ಕದಲ್ಲಿ ಅವರ ಸಮಾಧಿ ಇಂದಿಗೂ ಶೋಭಿಸುತ್ತಲಿದೆ.

ಕೆಲವೂರ ಭಕ್ತರಾದರೂ ಅವರ ಅಪೇಕ್ಷೆಯಂತೆ ಅವರಿಗೆ ಏನೂನ್ಯೂನ ಪೂರ್ಣತೆಯಾಗದಂತೆ ಅವರ ಸೇವಾಕಾರ್ಯದಲ್ಲಿ ದಕ್ಷತೆ ವಹಿಸಿದ್ದರು ಕೆಲೂರಿಗೆ ಘನಮಠೇಶರು ಬಂದಿರುವರೆಂಬ ವಾರ್ತೆಯು ನಾಲ್ಕೂ ಕಡೆಗೆ ಹಬ್ಬಲು ಹಳ್ಳಿಗಳಾದ ಮುಸಲಿಕಾರಲಕುಂಟೆ ಗೋನವಾರ ಕುಣಿಕೆಲೂರ ಅಂಕಸದೊಡ್ಡಿ ಮೊದಲಾದ ಗ್ರಾಮದ ಭಕ್ತರು ತಂಡೋಪತಂಡವಾಗಿ ಬಂದು ಶಿವಯೋಗಿಗಳ ದರ್ಶನಾಶೀರ್ವಾದ ಪಡೆದು ಧನ್ಯರಾಗುತ್ತಿದ್ದರು ಅಂಕಸದೊಡ್ಡಿಯ ವೀರಬದ್ರಪ್ಪನು ಬೇಕಾದಷ್ಟು ಪ್ರಾರ್ಥನೆ ಮಾಡಿದರೂ ಆತನ ಅಪೇಕ್ಷೆಯನ್ನು ನಿರಾಕರಿಸಿದ್ದಕ್ಕಾಗಿ ನಿರುಪಾಯನಾಗಿ ತನ್ನ ಗ್ರಾಮಕ್ಕೆ ಮರುಳಿದನು.

ಇತ್ತ ಘನಮಠೇಶರು ಸಂತೀಕೆಲೂರಲ್ಲಿ ಭಕ್ತರು ಇಳಿಸಿದ ತೋಂಟದ ಸ್ವಾಮಿಗಳ ವಿರಕ್ತಮಠದಲ್ಲಿಯೇ ತಮ್ಮ ನಿತ್ಯ ಕರ್ಮಗಳನ್ನಾಚರಿಸುತ್ತಾ ಐದು ಮನೆ ಕಂತೆ ಭಿಕ್ಷರೂಪಾಗಿ ಕಾಳನ್ನು ತಂದು ಆ ಕಾಳನ್ನೇ ಬಂಡೆಯಮೇಲೆ ಸಣ್ಣಾಗಿ ಅರೆದು ತಮ್ಮ ಹಸ್ತದಿಂದಲೇ ಬಸವ ಪಾಯಸವೆಂದು ಉಪ್ಪು ಖಾರವಿಲ್ಲದೆ ಪಾಕವಂ ಮಾಡಿ ಅಷ್ಟರಿಂದಲೇ ಪ್ರಸಾದ ಮುಗಿಸಿ ಪ್ರತಿನಿತ್ಯ ತಮ್ಮಲ್ಲಿಗೆ ಬರವ ಭಕ್ತಾದಿಗಳಿಗೆ ಅಷ್ಟಾವರಣಗಳ ಅರಿವಾಗಿ ನೈತಿಕ ಧಾರ್ಮಿಕ ಭಾವನೆ ಬೆಳೆವಂತೆ ಬಸವಾದಿ ಶಿವಶರಣರ ವಚನ ಶಾಸ್ತ್ರವನ್ನೂ ನಿಜಗುಣಾರ್ಯರ ಆರುಶಾಸ್ತ್ರವನ್ನೂ ಎಲ್ಲರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಬೋಧಮಾಡುತ್ತಿದ್ದರು ಸಂತೀಕೆಲೂರಲ್ಲಿ ಪ್ರಮುಖರಾದ ಬೋಳರಡ್ಡಿಗೌಡ ಹೆಸರೂರ ದೊಡ್ಡಪ್ಪ ಗುರುವಿನ ಅಮರಯ್ಯಾ ಕಟಾಂಬಲಿ ವೀರಯ್ಯ ಇನ್ನೂ ಹಲಕೆಲವು ಭಕ್ತರು ಶಿವಯೋಗಿಗಳಲ್ಲಿರುವ ಧರ್ಮದ ಮೇಲಿನ ಪ್ರೇಮವನ್ನೂ ಇವರ ಕಟ್ಟಾಚರಣೆಯನ್ನೂ ಕಂಡು ಇವರಿರುವಾಗಲೇ ನಮ್ಮ ಗ್ರಾಮದಲ್ಲಿ ಯಾವದಾದರೊಂದು ಪುರಾಣ ಪ್ರಾರಂಭ ಮಾಡಿದರೆ ನಮ್ಮ ಗ್ರಾಮಕ್ಕೆ ಸತ್‌ಶ್ರವಣವಾಗಿ ಮಹನೀಯರ ಪುಣ್ಯ ಪ್ರಭಾವದಿಂದ ನಮ್ಮ ಪಾಪವೆಲ್ಲ ಪರಿಹಾರವಾಗುವದರಲ್ಲಿ ಸಂದೇಹವಿಲ್ಲ ಎಂದು ಸರ್ವರೂ ಕೂಡಿ ಘನಮಠೇಶರ ಸನ್ನಿಧಿಗೆ ಬಂದು ಬುದ್ಧೀ ತಮ್ಮಿಂದ ಒಂದು ಪುರಾಣ ಕಾರ್ಯ ಪ್ರಾರಂಭ

ವಾದರೆ ಸರ್ವರಿಗೂ ಸದ್ಬೋಧೆಯಾಗುತ್ತದೆಂದು ನಮ್ಮೆಲ್ಲರ ಆಶೆಯಾಗಿದೆ ಕಾರಣ ತಾವು ಅಪ್ಪಣೆ ಕೊಡಿಸಿದರೆ ತಮ್ಮ ಆಜ್ಞಾ ಪ್ರಕಾರ ಕಾರ್ಯಾರಂಭ ಮಾಡಲು ಸರ್ವರೂ ಕಂಕಣಬದ್ಧರಾಗಿದ್ದೇವೆ.

ಎಂದು ಪ್ರಾರ್ಥಿಸಲು ಸರ್ವಭಕ್ತರ ಪುರಾಣದ ಮೇಲಿನ ಪ್ರಬಲ ಪ್ರೇಮವನ್ನು ಕಂಡು ಶಿವಯೋಗಿಗಳು ಸರ್ವರನ್ನುದ್ದೇಶಿಸಿ ಏನಿರಪ್ಪಾ ನಿಮ್ಮ ಅಪೇಕ್ಷೆಯಂತೆ ಇವತ್ತೇ ಪುರಾಣ ಪ್ರಾರಂಭ ಮಾಡಬಹುದು ಅಂದರೆ ನಿಮ್ಮ ಪುರಾಣ ಪ್ರಾರಂಭಕ್ಕೂ ನಮ್ಮ ಪುರಾಣ ಪ್ರಾರಂಭಕ್ಕೂ ಬಹಳ ವ್ಯತ್ಯಾಸವಿದೆ. ನಮ್ಮ ಕಟ್ಟು ನಿಟ್ಟುಗಳಿಗೆ ನೀವು ಒಳಪಟ್ಟು ಪುರಾಣ ಸಮಾಪ್ತಿಯುವರೆಗೂ ನಮ್ಮ ಆಜ್ಞಾ ಪ್ರಕಾರ ವರ್ತಿಸಿದರೆ ಮಾತ್ರ ಪುರಾಣ ಪ್ರಾರಂಭ ಮಾಡಲು ನಮ್ಮ ಒಪ್ಪಿಗೆ ಇದೆ ಯಾಕಂದರೆ ಸಮಾಜ ದಲ್ಲಿಯ ನೈತಿಕ ಧಾರ್ಮಿಕ ದೋಷಗಳನ್ನು ದೂರ ಮಾಡಿಕೊಂಡು ಪರಸ್ಪರ ಪ್ರೇಮದಿಂದರುವದೇ ಪುರಾಣ ಪ್ರವಚನದ ಮುಖ್ಯ ಉದ್ದೇಶ ಅದರ ಬದಲಾಗಿ ಕೆಲವು ಸ್ವಾರ್ಥಿಗಳು ಇಂಥಾ ಸಾಮಾಜಿಕ ಕಾರ್ಯಗಳಲ್ಲಿ ನಮ್ಮದೇ ನಡೆಯಬೇಕೆಂಬ ದುರಭಿಮಾನದಿಂದಾಗಲೀ ಇಲ್ಲವೇ ಸಾಮೂಹಿ ಕವಾಗಿ ಕೂಡಿಸಿದ ದೇವರ ದುಡ್ಡನ್ನು ಸ್ವಾರ್ಥಕ್ಕೆ ಸ್ವಾಹಾ ಮಾಡುವದ ರಿಂದಾಗಲೀ ಸಮಾಜದ ಐಕ್ಯತೆ ಒಡೆದು ಸಮಾಜದಲ್ಲಿ ಭಿನ್ನತೆಯುಂಟಾಗಿ ಪರಸ್ಪರರಲ್ಲಿ ಪ್ರೇಮವಿಲ್ಲದೆ ಮುಂದೆ ಇಂಥಾ ಸಾಮಾಜಿಕ ಕಾರ್ಯಗಳು ನಡೆಯದೆ ಒಂದೇ ಧರ್ಮದವರಾದ ವೀರಶೈವರಲ್ಲಿಯೇ ಪಾರ್ಟಿ ಸಂಗಡ ಗಳಾದ ಉದಾಹರಣೆಗಳನ್ನು ನಾವು ಕಣ್ಣಾರೆ ಕಂಡಿದ್ದೇವೆ

ಕಾರಣ ನಿಮ್ಮ ಗ್ರಾಮದಲ್ಲಿ ಅಂಥಾ ಅನೈಕ್ಯತೆಗಳಿದ್ದರೆ ಪುರಾಣ ಪ್ರಾರಂಭಿಸಲು ನಮ್ಮ ಇಚ್ಛೆ ಇಲ್ಲಾ ಎಂದು ಶಿವಯೋಗಿಗಳು ಹೇಳಿ ದ್ದನ್ನು ಎಲ್ಲರೂ ಕೇಳಿ ಬುದ್ಧೀ ನಮ್ಮಲ್ಲಿ ಅಂಥಾ ಪಾರ್ಟಿ ಪಂಗಡಗಳೇನೂ ಇಲ್ಲಾ ತಮ್ಮ ಇಚ್ಛೆಗೆಯೇನೂ ಭಂಗಬಾರದಂತೆ ನಡೆಯಲು ಸಿದ್ಧರಿದ್ದೇವೆ ಎಂದು ಎಲ್ಲರೂ ಸಾಷ್ಟಾಂಗ ಹಾಕಲು ಶಿವಯೋಗಿಗಳು ಸರ್ವಭಕ್ತರ ಪುರಾಣದ ಮೇಲಿನ ಪ್ರೇಮವನ್ನು ಕಂಡು ಸರ್ವರಿಗೂ ಉಪದೇಶಿಸಿದ್ದೇ ನಂದರೆ ಪರಮಾತ್ಮನು ಯಾರ್ಯಾರಿಗೆ ಯಾವ ಪ್ರಕಾರ ಯೋಗ್ಯತೆ ಕೊಟ್ಟ

ದ್ದಾನೆಯೋ ಆ ಭಕ್ತನು ಪುರಾಣ ಸೇವೆಗೆ ತನ್ನ ಶಕ್ತಿಯಿಂದ ಸಹಾಯ ಮಾಡಲು ಎಂದೂ ಹಿಂಜರಿಯಬಾರದು. ಯಾವನು ವಹಿಸಿಕೊಂಡು ಕಾರ್ಯವನ್ನು ಪುರಾಣ ಪ್ರಾರಂಭದಿಂದ ಸಮಾಪ್ತಿಯ ವರೆಗೂ ತನ್ನ ಕೆಲ ಸದಲ್ಲಿ ಅನ್ಯರಿಂದ ಹೇಳಿಸಿಕೊಳ್ಳಬಾರದು. ಪುರಾಣದಂಥ ಪವಿತ್ರ ಕಾರ್ಯಗಳಲ್ಲಿ ಪ್ರಮುಖರಾದವರು ನಿರಭಿಮಾನದಿಂದ ದುಡಿಯಬೇಕು ನಾವು ದೊಡ್ಡವರು, ನಾವು ಅಧಿಕಾರಿಗಳು ನಮ್ಮನ್ನು ಮೊದಲು ಕರೆಯ ಬೇಕು, ಕೇಳಬೇಕು ಎಂಬ ಕೀಳು ಭಾವನೆಗಳನ್ನು ಇಂಥಾ ಶಿವನ ಕಾರ್ಯಗಳಲ್ಲಿ ಮೊದಲು ಕಿತ್ತಿ ಹಾಕಬೇಕು. ನಮ್ಮೆಲ್ಲರ ಪವಿತ್ರ ಹೃದ ಯಗಳನ್ನು ನೋಡಿ ಆನಂದವಾಯಿತು.

ನಿಮ್ಮ ಇಚ್ಛೆಯ ಪ್ರಕಾರ ಪುರಾಣದ ಸರ್ವ ಸಾಹಿತ್ಯಗಳನ್ನು ಅಣಿ ಮಾಡಿಕೊಂಡು ಓದುವದಕ್ಕೂ, ಹೇಳುವದಕ್ಕೂ ಪಂಡಿತರನ್ನು ಬರಮಾಡಿ ಕೊಂಡು ಬಹು ದಿನಗಳಿಂದಲೂ ವೀರಭದ್ರವಿಜಯವೆಂಬ ಪುರಾಣವನ್ನು ಕೇಳಬೇಕೆಂಬ ಬಯಕೆ ಬಲವಾಗಿದೆ. ಕಾರಣ ಅದೇ ಸುಚ್ಚರಿತ್ರೆಯನ್ನೇ ಉತ್ತಮವಾದ ಮುಹೂರ್ತವನ್ನು ನೋಡಿ ಮೊದಲು ಮಾಡಿರಿಯಂದು ಎಲ್ಲರಿಗೂ ಹೇಳಲು ಸರ್ವರೂ ಸಮ್ಮಿಲಿತರಾಗಿ ಪುರಾಣದ ವಿಷಯ ಆಲೋಚನೆ ಮಾಡಿ ಪುರಾಣ ಹೇಳಲು ಆಗಿನ ಕಾಲದಲ್ಲಿ ಬಳ್ಳಾರಿಯ ಶಿವಶರಣ ಸಕ್ಕರೆ ಕರಡೆಪ್ಪನವರ ಆಶ್ರಯದಿಂದ ಅಧಿಕ ವಿದ್ಯಾರ್ಜನೆ ಮಾಡಿ ಪ್ರಪಂಚದಲ್ಲಿ ಪ್ರಸಿದ್ಧರಾದ ಕೆಲವು ಪಂಡಿತರಲ್ಲಿ ಹುನಗುಂದ ತಾಲೂಕ ಕಂದಗಲ್ಲ ಮಠದ ವೇ|| ಪಂ|| ಅಮರೇಶ ಶಾಸ್ತ್ರಿಗಳೂ ವೇ|| ಪಂ|| ಪರ್ವತ ಶಾಸ್ತ್ರಿಗಳೂ ಎಂಬ ಉಭಯ ಸಹೋದರರು. ಸಂಸ್ಕೃತ ವಿದ್ಯಯಲ್ಲಿ ಅಸ ಪೃಶ ಪಂಡಿತರೆಂದು ಕರ್ನಾಟಕ ಭಾಗದಲ್ಲೆಲ್ಲಾ ಪ್ರಸಿದ್ಧರಾಗಿದ್ದರು.

ಇವರೀರ್ವರಲ್ಲಿ ಹಿರಿಯರಾದ ಅಮರಪ್ಪ ಶಾಸ್ತ್ರಿಗಳವರನ್ನು ಪುರಾಣ ಹೇಳಲಿಕ್ಕೆ ಕರೆಯಿಸಿ ತಮ್ಮ ಗ್ರಾಮದಲ್ಲಿಯೇ ಆಚಾರದಲ್ಲಿ ನಿಷ್ಠಾವಂತ ರಾಗಿಯೂ ಶ್ರೀ ಶಿವಯೋಗಿ ಘನಮಠೇಶರ ಪ್ರೇಮಕ್ಕೆ ಪಾತ್ರರಾಗಿಯೂ ಇರುವ ಗುರುವಿನ ಮಠದೊಡೆಯರಾದ ಅಮರಪ್ಪನವರನ್ನು ಪುರಾಣ ಓದ ಲಿಕ್ಕೂ ನೇಮಕ ಮಾಡಿ ಶಿವಯೋಗಿಗಳಿರುವ ತೋಂಟದ ಸ್ವಾಮಿಗಳವರ

ಮಠದ ಸಮೀಪದಲ್ಲಿರುವ ವಿಶಾಲವಾದ ವೀರಭದ್ರ ದೇವರ ಗುಡಿಯನ್ನೇ ಪುರಾಣ ಹಚ್ಚಲಿಕ್ಕೆ ಯೋಗ್ಯ ಸ್ಥಾನವೆಂದ ನಿಯಮಿಸಿ ಶಾಲಿವಾಹನ ಶಕೆ ೧೮೦೧ ನೇ ಪ್ರಮಾಥಿ ಸಂವತ್ಸರದ ಆಶ್ವೀಜ ಶುದ್ಧ ಪ್ರತಿಪದೆಯ ಶುಭ ದಿನದಲ್ಲಿ ಶಿವಯೋಗಿಗಳ ಅನುಮತಿಯಂತೆ ಪುರಾಣ ಕಾರ್ಯವನ್ನು ಪ್ರಾರಂಭಿಸಿದರು.

ಘನಮಠೇಶರು ಸಂಗೀತ ಸಾಹಿತ್ಯಗಳಿಂದ ಶ್ರೋತೃವೃಂದಕ್ಕೆ ಶೃತಿಗಾನಂದವಾಗುವಂತೆ ಬೋಧಿಸುವ ಶಾಸ್ತ್ರಿಗಳ ಪುರಾಣ ಪ್ರವಚನವನ್ನೂ ಪುರಾಣ ಕಾರ್ಯದಲ್ಲಿ ಭಕ್ತರು ಭಕ್ತಿ ವಹಿಸಿ ಮಾಡುವ ಸೇವಾ ಭಾವವನ್ನೂ ಕಂಡು ಆಯ್ಯಾ ಇಂಥಾ ಗ್ರಾಮವನ್ನು ನಾವೆಲ್ಲಿಯೂ ಕಂಡಿಲ್ಲಾ ಈ ಗ್ರಾಮವನ್ನು ಬಿಟ್ಟು ಮುಂದೆ ಪ್ರಯಾಣ ಮಾಡಲು ನಮಗೆ ಮನಸ್ಸಿಲ್ಲವಾಗಿದೆ ನೀವೆಲ್ಲರೂ ನಿರ್ವಂಚನೆಯಿಂದ ನಿರಭಿಮಾನದಿಂದ ಮಾಡುವ ಸೇವೆಯನ್ನು ಕಂಡು ಮನಸ್ಸಿಗೆ ಮಹದಾನಂದವಾಯಿತು. ಆದರೆ ನಿಮ್ಮೆಲ್ಲರ ಮಧ್ಯದಲ್ಲಿ ಕುಳಿತ ಈ ಬೋಳರಡ್ಡಿಯ ಗೌಡನನ್ನು ನೋಡಿದರೆ ಮಾತ್ರ ನಮಗೆ ಖೇದವಾಗುತ್ತಿದೆ ಯಾಕೆಂದರೆ ವೀರಶೈವನಾದ ತಾನುಭವಿಗಳ ಸ್ನೇಹ ಮಾಡಿದ್ದು ಮತ್ತು ಅನ್ಯವಿತ್ತಾಪಹರಣ ಮಾಡುವದು ಎರಡನೇ ತಪ್ಪು. ಈ ಪ್ರಕಾರ ಹೃದಯವನ್ನು ಮಲಿನ ಮಾಡಿಕೊಂಡು ಮೇಲೆ ಪುರಾಣ ಕೇಳಿದರೆ ಆಗುವದೇನು ? ಹುತ್ತ ಬಡಿದರೆ ಹಾವು ಸಾಯ್ವುದೇ ಎಂಬ ಶಿವಶರಣರ ವಚನದಂತೆ ವೀರಶೈವನಾದ ನೀನು ಇವೆರಡು ದುರ್ಗುಣಗಳನ್ನು ದೂರ ಮಾಡಿ ಗುರುದೇವತಾದಿಗಳಲ್ಲಿ ಭಕ್ತಿಯುತನಾದರೆ ಮಾತ್ರ ನಿನ್ನ ಮನೆತನಕ್ಕೆ ದೇವರು ಸದಾ ಕಲ್ಯಾಣ ಮಾಡುತ್ತಾನೆ.

ಎಂದು ಶಿವಯೋಗಿಗಳು ಅರುಹಿದಾಕ್ಷಣವೇ ತುಂಬಿದ ಸಭೆಯಲ್ಲಿ ಬೋಳರಡ್ಡಿಯ ಗೌಡನು ಎದ್ದು ಶಿವಯೋಗಿಗಳಿಗೆ ಸಾಷ್ಟಾಂಗ ಹಾಕಿ "ಬುದ್ಧೀ ತಮ್ಮ ಆಜ್ಞೆಯಂತೆ ನನ್ನಲ್ಲಿರುವ ದುರ್ಗುಣಗಳನ್ನು ಇಂದಿನಿಂದಾ ತಮ್ಮ ಪಾದಕ್ಕರ್ಪಿಸಿದ್ದೇನೆ" ಎಂದು ವಿನಂತಿ ಮಾಡಿಕೊಳ್ಳಲು ಶಿವ

ಯೋಗಿಗಳು ಸಾಷ್ಟಾಂಗ ಹಾಕಿದ ಗೌಡನನ್ನು ಕೈಹಿಡಿದೆಬ್ಬಿಸಿ "ಹಾ, ನೆಟ್ಟಗಾಯಿತು ಗೌಡಾ, ವೀರಶೈವರಾದ ನಾವು ಎಂದೂ ಅನಾಚಾರಕ್ಕೆ ಆಸ್ಪದ ಕೊಡಬಾರದು ಎಂದು ಪ್ರಾಯಶ್ಚಿತ್ತ ಬುದ್ಧಿಯಿಂದ ಪರಿಶುದ್ಧನಾದ ಗೌಡನನ್ನು ಮನ್ನಿಸಿ, ವೇಳೆ ಬಹಳ ಆದುದರಿಂದ ಪುರಾಣದ ಮಂಗಲಕ್ಕೆ ಅಪ್ಪಣೆಯನ್ನಿತ್ತರು. ಪುರಾಣ ಮಂಗಲಾ ನಂತರ ಶಿವಯೋಗಿಗಳ ಅನುಜ್ಞೆಯಂ ಹೊಂದಿ ತಮ್ಮ ತಮ್ಮ ಮನೆಗಳಿಗೆ ಹೋದ ನಂತರವೂ ಸರ್ವರೂ ಕುಳಿತರೂ ನಿಂತರೂ ಶಿವಯೋಗಿಗಳ ಧ್ಯಾನದಲ್ಲಿಯೇ ನಿರತರಾಗಿ ನಿತ್ಯದಲ್ಲೂ ತಮಗೆ ನಿಯಮಿಸಿದ ಪುರಾಣ ಕಾರ್ಯಗಳನ್ನು ತಪ್ಪದೆ ಮನಃಪೂರ್ವಕವಾಗಿ ನಡೆಸುತ್ತಿದ್ದರು.

ಪ್ರತಿ ದಿವ್ಸ ಈ ಪ್ರಕಾರ ಘನಮಠೇಶರ ಅಧ್ಯಕ್ಷತೆಯಲ್ಲಿ ಪುರಾಣ ಕಾರ್ಯವು ಯಾವ ವಿಘ್ನಾದಿಗಳಿಲ್ಲದೆ ಸರ್ವ ಸಂಭ್ರಮದಿಂದ ಸಾಗಿರಲು ಪುರಾಣದಲ್ಲಿ ಅಂದಿನ ದಿವಸ ಭಕ್ತ ಭಾಂಡಾರಿಯೆನಿಸಿದ ಬಸವನ ಮಹಿಮೆಯನ್ನು ಕಂದಗಲ್ಲ ಅಮರೇಶ ಪಂಡಿತರು ತಮ್ಮ ಅಸ್ಖಲಿತ ವಾಣಿಯಿಂದ ಸಭೆಯ ಜನರು ಬೆರಗಾಗುವಂತೆ ಬ ಸ ವ ಮಹಿಮೆಯನ್ನು ವರ್ಣಿಸಲು ಸಾಧಾರಣ ಮನುಷ್ಯರಿಗೆ ಸಾಧ್ಯವಲ್ಲಾ ಬಸವಾ ಎಂಬ ಮೂರು ಅಕ್ಷರದ ಮಹಿಮೆಯನ್ನು ಮೂರು ತಿಂಗಳವರೆಗೂ ನಾವು ಹೇಳಬಲ್ಲೆವು ಎಂದು ಶ್ರೋತೃ ವೃಂದಕ್ಕೆ ಬೋಧ ಮಾಡುತ್ತಿರಲು ದೂರದಲ್ಲಿ ಕಟ್ಟೆಯ ಮೇಲೆ ಸುಖಾಸೀನರಾಗಿ ಕುಳಿತಿರುವ ಘನಮಠೇಶರು ತಟ್ಟನೆ ಎದ್ದು ಬಂದು ಪುರಾಣ ಸಮ್ಮುಖದಲ್ಲಿ ನಿಂತು ಅಮರಪ್ಪ ಶಾಸ್ತ್ರಿಗಳಿಗೆ ಅಯ್ಯಾ ಬಸವ ಮಹಿಮೆಯನ್ನು ಎಂಟುನೂರು ವರ್ಷಗಳಿಂದಲೂ ವಿಶ್ವದಲ್ಲಿ ವಿಖ್ಯಾತರಾದ ಮಹಾ ಮಹಾ ಕವಿಗಳೂ ಸಾಹಿತಿಗಳೂ ಪುರಾಣಿಕರೂ ಮುಕ್ತ ಕಂಠದಿಂದ ಸಾರಿದರೂ ಬಸವ ಮಹಿಮೆಯು ಮುಗಿಯದಿರುವಾಗ ನೀನು ನಾನೇ ವಿದ್ಯಾವಂತನೆಂಬ ಮದದಿಂದ ಮೂರು ತಿಂಗಳ ಹೇಳುವೆನೆಂದು, ಹೆಮ್ಮೆಪಟ್ಟುಕೊಂಡೆಯಾ ? ಒಬ್ಬ ಕವಿಯು ಶಿವಶರಣರ ಮಹಿಮೆಯನ್ನು ವರ್ಣಿಸಲು ಮನುಷ್ಯ ಮಾತ್ರರಾದ ನಾವೇಕೆ ?

ಸಾವಿರ ಹಸ್ತವುಂ ಪಡೆದ ಬಾಣಗೆ ತೀರದು ನಿಮ್ಮನರ್ಚಿಸಲ್।
ಸಾವಿರ ನೇತ್ರವುಂ ಪಡೆದ ಇಂದ್ರಗೆ ತೀರದು ನಿಮ್ಮನೀಕ್ಷಿಸಲ್।
ಸಾವಿರ ಜಿಂಹ್ವೆಯುಳ್ಳ ಫಣಿವಲ್ಲಭ ಕೀರ್ತಿಸಲಾರ। ನಾನೆಂತು
ಗಾವಲಿನರ್ಚಿಪೇಂ। ಈಕ್ಷಿಪೇಂ। ಕೀರ್ತಿಪೇಂ ಶಂಕರಾ ॥

ಎಂದು ವರ್ಣಿಸಿರುವಾಗ ನರ-ಗುರಿಗಳಾದ ನಾವೆಷ್ಟರವರು ? ಬಸವನ ವಿಷಯವಾಗಿ ನೀನು ಆಡಿದ ಅಪರಾಧದ ವಾಣಿಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಅರ್ಭಟಿಸಲು ಸಾಹಿತ್ಯ ಶಾಸ್ತ್ರದಲ್ಲಿ ಕೋವಿದರಾದ ಅಮರೇಶ ಪಂಡಿತರು " ವಿನಾಶಕಾಲೇ, ವಿಪರೀತ ಬುದ್ಧಿಃ " ಎನ್ನುವಂತೆ ಶಿವಯೋಗಿಗಳ ಸಲಹೆಗೆ ಸಮ್ಮತಿಯನ್ನು ಸೂಚಿಸದೆ ತಾವು ತಮ್ಮ ತಾಳ್ಮೆಯನ್ನು ಕಳೆದುಕೊಂಡು, ಸಿಟ್ಟಿನಿಂದ ಶಿವಯೋಗಿಗಳಿಗೆ "ಏ, ಘನಮಠದಪ್ಪಾ" ಎಂದು ಏಕವಚನದಿಂದ ಸಂಸ್ಕೃತದ ಗಾಳಿಯೂ ಸಹಸೋಂಕಲಾರದ ನೀನು ಕನ್ನಡದಲ್ಲಿ ನಾಲ್ಕು ಕವನಗಳನ್ನು ಕಟ್ಟಿ ಹಾಡಿದರೆ ದೊಡ್ಡ ಪಂಡಿತನಾದೆಯಾ ? ನಮ್ಮನ್ನು ಹಳಿಯುವ ಯೋಗ್ಯತೆ ನಿನಗೆಲ್ಲಿಯದು? ನೀನೇನಾದರೂ ನಮ್ಮಿಂದ ಕೇಳುವದಿದ್ದರೆ, ಅಥವಾ ಹೇಳುವದಿದ್ದರೆ, ಪುರಾಣ ಸಮಾಪ್ತಿಯ ನಂತರ ಕೇಳಿ ಹೇಳಬೇಕಾಗಿತ್ತು. ಮಧ್ಯದಲ್ಲಿ ಅಧಿಕ ಪ್ರಸಂಗ ಮಾಡಿ ಪಂಡಿತರಿಗೆ ಅಪಮಾನ ಮಾಡಿಸುವಿಯಾ ? ಎಂದು ಮಾರುತ್ತರ ಬೀಯ್ಯಲು ಪಂಡಿತನಾದರೂ ಪಾಮರನಂತೆ ತಮಗೆ ಅಪಶಬ್ದಗಳನಾಡಿನ ಅಮರಪ್ಪ ಶಾಸ್ತ್ರಿಗಳಿಗೆ ಘನಮಠೇಸರು ಹೌದು ಪಂಡಿತ್ರರೇ ತಮ್ಮಿಂದ ಪುರಾಣ ಶ್ರವಣ ಮಾಡಿಕೊಳ್ಳಬೇಂತಲೇ ಪಂಡಿತನೆಂದು ಪರಾಮರ್ಶಿಸಿ ಪ್ರಯತ್ನಪಟ್ಟು ಕರೆಯಿಸಿದ್ದಕ್ಕೆ ಸರಿಯಾದ ಸಂಭಾವನೆ ಕೊಟ್ಟಿ. ಕೂಡಿದ ಸಭೆಯಲ್ಲಿ ಜಂಗಮನನ್ನು ಜರಿದ ನಿನ್ನ ಬಾಯಿಗೆ ಬಗದಾಳ ಹುಟ್ಟಲಿಯೆಂದು ಶಾಪ ಕೊಟ್ಟು ನಿಂತಿರಲು, ಇವರೀರ್ವರವಾದವು ಮತ್ತಷ್ಟು ವಿಕೋಪಕ್ಕೆ ಮುಟ್ಟಬಹುದೆಂದು ಮುಂಜಾಗ್ರತೆಯಿಂದ ಹೆಸರೂರ ದೊಡ್ಡಪ್ಪನೆಂಬ ಸದ್ಭಕ್ತನು ಸಭೆಯಲ್ಲಿ ಎದ್ದು ನಿಂತು ಮಹಾತ್ಮರೇ ತಾವೇ ಈ ಪ್ರಕಾರ ಮಾಡಿದರೆ ಮಂದಮತಿಗಳಾದ ನಾವೇನು ಮಾಡಬೇಕು. ಪುರಾಣ ಮಂಗಲದ ಸಮಯವು ಸಮೀಪಿಸಿದೆ

ತಾ ವೀ ರ್ವ ರೂ ಶಾಂತರಾಗಬೇಕೆಂದು ಬೇಡಿಕೊಳ್ಳುತ್ತೇವೆ ಎಂದು ಪ್ರಾರ್ಥಿಸಲು ಶಿವಯೋಗಿಗಳು ಸಿಟ್ಟಿನಿಂದ ಶಾಸ್ತ್ರಿಗಳಿಂದ ತಾಪಕೊಟ್ಟ ದ್ದನ್ನು ಕಂಡು ಸಭೆಯವರೆಲ್ಲಾ ಇದೇನು ಅನಾಹುತವೆಂದು ಮನಸ್ಸಿನ ಲ್ಲಿಯೇ ನಡಗುತ್ತಾ ಅವಸರವಾಗೆ ಅಂದಿನ ದಿನ ಅಷ್ಟಕ್ಕೇ ಪುರಾಣ ಮಂಗಲ ಮಾಡಿ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಪ್ರಯಾಣ ಮಾಡಿ ದರು.

ಪ್ರತಿ ದಿವಸದಂತೆ ಅಮರಪ್ಪ ಶಾಸ್ತ್ರಿಗಳು ತಮ್ಮ ನಿಯಮಿತ ಸ್ಥಳಕ್ಕೆ ಹೋಗಿ ತಮ್ಮ ಸ್ನಾನ ಶಿವಾರ್ಚನೆಗಳನ್ನು ಮುಗಿಸಿ ಊಟವಾ ಗುವದರೊಳಗೆ ಅವರ ಕುತ್ತಿಗೆಯು ಬಾಯಲಿಕ್ಕೆ ಹತ್ತಿ ನೀರು ಕುಡಿಯ ಲಿಕ್ಕೂ ಸಹ ಬಾರದಂತಾಯಿತು. ಏಕಾಏಕಿ ಈ ಪ್ರಕಾರ ತಮಗೆ ವಿಪ ರೀತವಾದದ್ದನ್ನು ಕಂಡು ಶಾ ಸ್ತ್ರಿ ಗ ಳು ಘಾಬರಿಯಾಗಿ ಮಹಾ ತ್ಮರ ಮಹಿಮೆಯನ್ನು ಮನಸ್ಸಿನಲ್ಲಿ ನೆನೆದು ವಿನಾಶಕಾಲೇ ವಿಪರೀತ ಬುದ್ಧಿಃ ಯನ್ನುವಂತೆ ವೇದವೇದಾಂತ ತರ್ಕಮಿಾಮಾಂಸಾದಿ ಸಾಹಿತ್ಯದಲ್ಲಿ ಪಾರಂಗತನಾದ ನಾನು ಪಾಮರನಂತೆ ಬುದ್ಧಿ ಭ್ರಮಿಷ್ಠನಾಗಿ ಪರಶಿವನೇ ಜಂಗಮ ರೂಪದಿಂದ ಅವತರಿಸಿದ ಭೋಗಿಗ ವಿಶ್ವವನ್ನೇ ತೃಣ ಸಮಾನ ಮಾಡಿ ಹಗಲಿರುಳೂ ಬಸವಾದಿ ಶಿವಶರಣರ ತತ್ವವನ್ನೇ ವಿಶ್ವದಲ್ಲಿ ಹರಡಿ ತನ್ನ ಸಮಾಜ ತನ್ನ ಧರ್ಮದ ಸೇವೆಗಾಗಿಯೇ ಜನ್ಮವೆತ್ತಿದ ಧರ್ಮ ಮೂರ್ತಿಗೆ ಹಿಂದು ಮುಂದು ನೋಡದೆ ಮಂದ ಬುದ್ಧಿಯಿಂದ ಮಾಡಿದ ನಿಂದೆಗೆ ತಕ್ಕ ಪ್ರಾಯಶ್ಚಿತ್ತವಾಯಿತು.

ವಜ್ರ ಲೇಪವದಂತೆ ಶಿವಯೋಗಿಯ ಶಾಪವು ಎನ್ನನ್ನೆಂದಿಗೂ ಬಿಡ ಲಾರದು. ಭೂಮಿಯ ಮೇಲೆ ಬಿದ್ದವರು ಭೂಮಿಯನ್ನೇ ಆಶ್ರಯಿಸು ವಂತೆ ಶಿವಯೋಗಿಯನ್ನು ಶರಣು ಹೋಗಿ ಕೃತಾಪರಾಧಕ್ಕೆ ಕ್ಷಮೆಯನ್ನು ಬೇಡಿಬಂದ ಬಂಧನದಿಂದ ಬಯಲಾಗಬೇಕು. ಎಂಬ ಭ್ರಾಂತಿಯಿಂದ ಘನಮಠೇಶರು ಸನ್ನಿಧಿಗೆ ಬಂದು ಮಠದ ಅಂಗಳದಲ್ಲಿ ಕಟ್ಟೆಯಮೇಲೆ ಕುಳಿತಿರುವ ಘನಮಠೇಶರ ಸಮ್ಮುಖದಲ್ಲಿ ಒಂಟಿಗಾಲ ಮೇಲೆ ನಿಂತು

ನಾನಾವಿಧವಾಗಿ ಸ್ತುತಿಸಿದರೂ ಶಿವಯೋಗಿಗಳು ಶಾಂತರಾಗದೆ ಶಾಸ್ತ್ರಿಗಳೇ ಲಂಚ ಕೊಡದಿದ್ದರೆ ಹಾಕಲಿಕ್ಕೂ ಲಂಚ ಕೊಟ್ಟರೆ ತೆಗೆಯಲಿಕ್ಕೂ ಬರುವ ಇದು ಗೌಡರ ಬೇಡಿಯಲ್ಲಾ ಶಿವನೇ ತನ್ನ ಸ್ವರೂಪಿ ಜಂಗಮನಿಂದ ಹಾಕಿಸಿದ ಬೇಡಿಯನ್ನು ತಗೆಯಲು ನನ್ನಿಂದೇಕೆ ನಮ್ಮಪ್ಪನಿಂದಲೂ ಸಾಧ್ಯವಿಲ್ಲಾ ನಿಜವಾದ ಜಂಗಮನಿಂಕದರಿಗಾಗುವ ಪ್ರಾಯಶ್ಚಿತ್ತವನ್ನು ಜಗತ್ತು ನಿನ್ನಿಂದ ಕಲಿತುಕೊಳ್ಳಲಿಯೆಂದು ಶಿವಯೋಗಿಗಳು ನಿಶ್ಯಾಪವೀಯದೆ ನಿರಾಕರಿಸಲು ಶಾಸ್ತ್ರಿಗಳು ಕೃತಾಪರಾಧಕ್ಕೆ ನಿರುಪಾಯರಾಗಿ ಮಠದಲ್ಲಿ ಹೋಗಿ ಮಲಗಲು ಬೆಳಗಾಗುವದರೊಳಗಾಗಿ ಕುತ್ತಿಗೆಯ ಬಾಹು ಹೆಚ್ಚಿ ಶಾಸ್ತ್ರಿಗಳಿಗೆ ಮಾತಾಡಲಿಕ್ಕೂ ಸಹ ಬಾರದಂತಾಗಲು ಊರ ಪ್ರಮುಖರೆಲ್ಲಾ ಶಾಸ್ತ್ರಿಗಳಿಗೆ ಕೊಡಬೇಕಾದ ಬಹುಮಾನವನ್ನೆಲ್ಲಾ ಶಿವಯೋಗಿಗಳ ಅನುಮತಿಯಂತೆ ಕೊಟ್ಟು ಭಂಡೀ ಕಟ್ಟಿಸಿ ಅವರನ್ನು ಅವರ ಊರಿಗೆ ಕಳುಹಿ ಬರಲು ಮುಂದೆ ಮೂರು ತಿಂಗಳಲ್ಲಿಯೇ ಕುತ್ತಿಗೆಯಲ್ಲಿ ಹುಣ್ಣು ವಡೆದು ಹುಳ ಬಿದ್ದು ಅದರಿಂದಲೇ ಶಾಸ್ತ್ರಿಗಳು ಶಿವಾಧೀನರಾದರೆಂಬ ಸುದ್ದಿಯು ಇಂದಿಗೂ ಪ್ರಸಿದ್ಧವಿದೆ ಮುಂದೆ ಪುರಾಣವು ಮಾರ್ಗಶಿರ ಮಾಸದವರೆಗೆ ನಡೆದು ಪುರಾಣ ಸಮಾಪ್ತಿಯ ಸಮಯವು ಸಮೀಪಕ್ಕೆ ಬರಲು ಸಕಲ ಭಕ್ತರು ಶಿವಯೋಗಿಗಳ ಅನುಮತಿಯಂತೆ ಸಮಾಪ್ತಿಯ ಸಮಾರಾಧನೆಗೆ ಸಕಲರೂ ಶಕ್ತಿ ಮೀರಿ ಸಾಹಿತ್ಯಗಳನ್ನು ಕೂಡಿಸಿ ನಾನಾ ಪ್ರಕಾರವಾದ ಪಕ್ವಾನ್ನಗಳನ್ನು ಮಾಡಿಸಿ ಗಣತೃಪ್ತಿಯು ನಡೆದಿರಲು ಕೆಲೂರ ಗ್ರಾಮದಲ್ಲಿಯೇ ಅಧಿಕ ಸಾಹುಕಾರ ನೆನಿಸಿದ ಕೋಮಟಿಗರ (ವೈಶ್ಯರ) ಹನುಮಂತಪ್ಪನೆಂಬವನು ಮನಸ್ಸಿನಲ್ಲಿಯೇ ಶ್ರೀ ಶಿವಯೋಗಿ ಘನಮಠೇಶರು ಪುರಾಣ ಕಾರ್ಯಕ್ಕೆ ನನ್ನಿಂದ ಏನು ಪಡೆಯಲಿಲ್ಲವಲ್ಲಾ ವೀರಶೈವನಲ್ಲದ ನನ್ನಿಂದ ಪಡೆಯ ಬಾರದೆಂಬುವವೇ ಅವರ ಉದ್ದೇಶವಿರಬಹುದು ಶಿವಶಿವಾ ಪರಮಾತ್ಮನು ಬೇಕಾದಷ್ಟು ಸಂಪತ್ತು ಕೊಟ್ಟಿದ್ದರೂ ಶಿವಯೋಗಿಗಳ ಪ್ರೇಮಕ್ಕೆ ಪಾತ್ರನಾಗಲಿಲ್ಲವಲ್ಲಾ ಎಂದು ಮನಸ್ಸಿನಲ್ಲಿ ಮರುಗುತ್ತಿರಲು ಇತ್ತ ಗಣಾರಾಧನೆಯ ಗಡಿಬಿಡಿಯಲ್ಲಿದ್ದ ಘನಮಠೇಶರು ಒಮ್ಮಿಂದೊಮ್ಮೆ ಅಲ್ಲಿದ್ದವರಿಗೆ ಎಲೋ ಯಾರಿರುವಿರೋ ವೈಶ್ಯರ ಹನುಮಂತಪ್ಪನನ್ನು ಬೇಗನೆ ಕರೆಯಿರಿ ಎಂದು ಅಜ್ಞಾಪಿಸಲು

ಆ ಕ್ಷಣವೇ ಅಲ್ಲಿದ್ದವರು ಅವಸರವಾಗಿ ಹೋಗಿ ಹನುಮಂತಪ್ಪನನ್ನು ಶಿವ ಯೋಗಿಗಳು ಕರೆಯುವರೆಂದು ಹೇಳಿದಾಕ್ಷಣವೇ ಹನುಮಂತಪ್ಪನು ಆತು ರದಿಂದ ಶಿವಯೋಗಿಗಳ ಸನ್ನಿಧಿಗೆ ಬಂದು ಸಾಷ್ಟಾಂಗ ವೆರಗಲು ಘನಮಠೇ ಶರು ಹನುಮಂತಪ್ಪನಿಗೆ, ಏನಯ್ಯಾ ಪುರಾಣ ಪ್ರಸ್ತಕ್ಕೆ ಸಹಾಯ ಸಲ್ಲಿಸ ಬೇಕೆಂಬ ಬಲವಾದ ಆಶೆಯಾಗಿದೆಯಲ್ಲವೇ ನಿನ್ನ ಇಚ್ಛೆಯೇ ಹಾಗಿದ್ದಲ್ಲಿ ನಾವು ಹೇಳಿದ ಮಾತಿಗೆ ಪ್ರತಿಯಾಡದೆ ನಡೆಯಿಸಬೇಕೆಂಬ ನಂಬಿಗೆ ನಿಜ ವಿದ್ದರೆ ನಮಸ್ಕಾರ ಮಾಡು ಮನಸ್ಸಿನಲ್ಲದಿದ್ದರೆ ಮರುಳಿ ಮನೆಗೆ ಹೋಗು ಎಂದು ಹೇಳಲು ಹನುಮಂತಪ್ಪನು ಶಿವಯೋಗಿಗಳಿಗೆ ಬುದ್ದೀ ತಮ್ಮ ಸನ್ನಿದಿಯಲ್ಲಿ ಅನೃತವನ್ನಾಡಿ ಇನ್ನಾವ ಸದ್ಗತಿಯನ್ನು ಸಂಪಾದಿಸಲಿ ನನ್ನ ಪ್ರಾಣವನ್ನೇ ತ್ರಿಕರ್ಣಪೂರ್ವಕವಾಗಿ ತಮ್ಮ ಪಾದಕ್ಕರ್ಪಿಸಲು ಸಿದ್ಧ ನಾಗಿದ್ದೇನೆ. ಅಪ್ಪಣೆಯಾಗಬೇಕೆಂದು ಪ್ರಾರ್ಥಿಸಲು ಶಿವಯೋಗಿಗಳು ಹಾಗಾದರೆ ಹನುಮಂತಪ್ಪಾ ನಾಳಿನ ದಿವಸವೇ ನೆರೆಯುವ ಗಣಾಧೀಶ್ವರ ರಿಗೆ ಅರವತ್ತು ಮೂರು ಆಕಳುಗಳನ್ನು ನೀನು ದಾನ ಮಾಡಿ ಧನ್ಯನಾದರೆ ಮುಂಧಿನ ಮೂರುತಿಂಗಳಲ್ಲಿ ನಿನ್ನ ವಂಶವೆಲ್ಲಾ ನಾಶವಾಗಿ ಸರ್ವರಿಗೂ ಸದ್ಗತಿಯಾಗುತ್ತದೆ.

ವಂಶ ಸಹಿತ ಕೈಲಾಸವನ್ನು ಕಾಣಬೇಕೆನ್ನುವ ಅಭಿಲಾಷೆ ಇದ್ದಲ್ಲಿ ಮನವಪ್ಪಿ ಸಾಷ್ಟಾಂಗ ಹಾಕು ಇಲ್ಲವೇ ನಿನ್ನ ಸಂಪತ್ತೆಲ್ಲಾ ಆ ಪಾತ್ರಕ್ಕೆ ಹಾಳಾಗಿ ಭವಭವಾಂತರ ನರಕಯಾತನಯನ್ನನುಭವಿಸು ಯೆಂಬ ಶಿವ ಯೋಗಿಗಳ ವಾಕ್ಯಗಳನ್ನು ಕೇಳಿದೊಡನೆ ಸುವಿಚಾರಿಯಾದ ಹನುಮಂತ ಪ್ಪನು ಮನಸ್ಸಿನಲ್ಲಿ ಎಳ್ಳಷ್ಟಾದರೂ ಅಳುಕದೆ ಹಾಗೇ ಆಗಲೆಂದು ಶಿವ ಯೋಗಿಗಳಿಗೆ ಸಾಷ್ಟಾಂಗ ಹಾಕಿ ಆಗಲೇ ಮನೆಗೆ ಹೋಗಿ ಶಿವಯೋಗಿಗಳ ಆಜ್ಞೆಯಪ್ರಕಾರ ಅರವತ್ತು ಮೂರು ಆಕಳುಗಳನ್ನು ತರಿಸಿ ಮಾಹೇಶ್ವರರಿಗೆ ದಾನ ಮಾಡಲು ಘನಮಠೇಶರ ಅಮೃತವಾಣಿಯಂತೆ ಮೂವತ್ತು ಜನರಿಂದ ಕೂಡಿದ ಹನುಮಂತಪ್ಪನ ಮನೆತನವು ಮೂರು ತಿಂಗಳಲ್ಲಿಯೇ ಮೂಲ ಸಹಿತ ನಾಶವಾಗಿ ಹನುಮಂತಪ್ಪನು ವಂಶ ಸಹಿತ ಗಣಪದವಿಯನ್ನೈದಿ ದನು.

ಇಂದಿಗೂ ಕೆಲೂರಲ್ಲಿ ವೈಶ್ಯ ಸಂತತಿಯೇ ವೃದ್ಧಿಯಾಗುವದಿಲ್ಲ ವೆಂದು ಕೆಲವರ ನಂಬಿಕೆಯಾಗಿದೆ. ಅಸ್ತು ಕೆಲೂರ ಭಕ್ತರ ಆಗ್ರಹದಂತೆ ಘನಮಠೇಶರು ಪುರಾಣ ಸಂಭ್ರಮನ್ನು ಸಮಾಪ್ತಿ ಗೊಳಿಸಿ ಸುಖವಾಗಿ ಸಕಲರೊಡನೆ ಸಂಭಾಷಣೆ ಗೈಯುತ್ತಾ ಕುಳಿತಿರಲು ಮತ್ತೊಂದು ದಿವಸ ಇದೇ ಪುರಾಣ ಹೇಳಲಿಕ್ಕೆ ಬಂದ ಕಾದಗಲ್ಲ ಅಮರಪ್ಪ ಶಾಸ್ತ್ರಿಗಳ ತಮ್ಮಂದಿರಾದ ಪಂಡಿತ ಪರ್ವತ ಶಾಸ್ತ್ರಿಗಳವರು ಮಹಾತ್ಮರ ದರ್ಶನಾರ್ಥಿ ಗಳಾಗಿ ಬಂದಾಗ ಅದೇ ರಾತ್ರಿ ಪರ್ವತ ಶಾಸ್ತ್ರಿಗಳಿಗೆ ಹಾವು ಕಚ್ಚಲು ಸರ್ವರೂ ಘಾಬರಿಯಾಗಿ ಶಾಸ್ತ್ರಿಗಳಿಗೆ ಗಿಡಹಾಕಿಸಬೇಕಂದು ಗಡಿಬಿಡಿಯ ಲ್ಲಿರಲು ನಡೆದ ವಿಷಯುಯವನ್ನು ಘನಮಠೇಶರು ಕೇಳಿ ಯಾರೂ ಈ ಶಾಸ್ತ್ರಿ ಗಳಿಗೆ ಗಿಡಹಾಕಿಸುವ ಕಾರಣವಿಲ್ಲಾ ಲಿಂಗನಿಷ್ಠಾಪರರಾಗಿ ಅನವರತವೂ ಆಚಾರದಿಂದ ನಡೆದು ಪವಿತ್ರ ಶರೀರಗಳಾದ ಪರ್ವತ ಶಾಸ್ತ್ರಿಗಳಿಗೆ ಕ್ಷುದ್ರ ಜಂತುವಾದ ಹಾವಿನ ವಿಷವೆಷ್ಟರದು ಕಚ್ಚಿದ ಹಾವನ್ನು ಮಾತ್ರ ಯಾರೂ ಕೊಲ್ಲಬೇಡಿರಿ ಎಂದು ಎಲ್ಲರಿಗೂ ಆಜ್ಞಾಪಿಸಲು ಪರ್ವತ ಶಾಸ್ತ್ರಿಗಳಿಗೆ ಕಚ್ಚಿದ ಸರ್ಪವು ಎಲ್ಲಿಯೂ ಹರಿದು ಹೋಗದೆ ಅಲ್ಲಿಯೇ ಸುಂದಾಗಿ ಬಿದ್ದು ಬೆಳಗಾಗುವದರೊಳಗಾಗಿ ಶಾಸ್ತ್ರಿ ಗಳಿಗೆ ಕಚ್ಚಿದ ಸರ್ಪದ ಪ್ರಾಣ ಹೋಯಿತೇ ಹೊರ್ತು ಶಿವಯೋಗಿಗಳ ಪ್ರಭಾವದಿಂಪ ಶಾಸ್ತ್ರಿಗಳಿಗೆ ಕಿಂಚಿತ್ತಾದರೂ ತೊಂದರೆಯಾಗದೆ ಸುಖರೂಪ ವಾಗಿದ್ದರು.

ಶಿವಯೋಗಿ ಘನಮಠೇಶರು ಸೂರ್ಯೋದಯವಾದೊಡನೆಸರ್ವ ರನ್ನು ಕರೆಯಿಸಿ ಅವರೆಲ್ಲರಿಗೂ ಸತ್ತ ಹಾವನ್ನು ತೋರಿಸಿ ಈ ಸರ್ಪವು ತನ್ನ ವಿಷವನ್ನು ತಾನು ಪುನಃ ತಕ್ಕೊಳ್ಳದಿದ್ದರೆ ಈ ವ್ಯಾಳ್ಯಕ್ಕೆ ನಿಮ್ಮ ಶಾಸ್ತ್ರಿಗಳ ಸಮಾಧಿಯಾಗುತ್ತಿತ್ತು. ಅವರ ಬದ ಲಾಗಿ ಈ ಸತ್ತ ಸರ್ಪಕ್ಕೆ ಅಂತ್ಯ ಸಂಸ್ಕಾರಗಳನ್ನು ಮಾಡಿ ಸಮಾಧಿ ಮಾಡಿರಿ ಎಂದು ಆಜ್ಞಾಪಿಸಲು ಸರ್ವರೂ ಮಹಾತ್ಮರ ಅಗಾಧ ಶಕ್ತಿ ಯನ್ನು ಅಂತರಂಗದಲ್ಲಿಯೇ ಕೊಂಡಾಡುತ್ತಾ ವೀರಶೈವರ ಅಂತೇಷ್ಟಿ ವಿಧಿಯಂತೆ ಸರ್ವ ಸಂಸ್ಕಾರಗಳನ್ನು ಆ ಸರ್ಪಕ್ಕೆ ಮಾಡಿಸಿ ಈಗಿರುವ ಬನ್ನಿ

ಮಹಾಂಕಾಳಿಯ ಕಟ್ಟೆಯ ಮಧ್ಯದಲ್ಲಿರುವ ಬನ್ನಿಯ ವೃಕ್ಷದ ಮುಂಭಾಗದಲ್ಲಿಯೇ ಸಮಾಧಿ ಮಾಡಿದ್ದಾರೆ. ಅಂದಿನಿಂದ ಆ ಕಟ್ಟೆಯ ಮಧ್ಯದಲ್ಲಿ ಚಕ್ರಾಕಾರವಾಗಿರುವ ಕಲ್ಲಿಗೆ ನಾಗಪ್ಪನ ಕಲ್ಲೆಂದು ಜನರು ಅನ್ನುವದಲ್ಲದೆ ಪ್ರತಿ ವರ್ಷ ನಾಗ ಚತುರ್ಥಿಯಲ್ಲಿ ಊರ ಜನರು ಅಲ್ಲಿಯೇ ಹಾಲು ಹಾಕುವದು ರೂಢಿಯಾಗಿದೆ.

ಈ ಪ್ರಕಾರ ಘನಮಠೇಶರು ಅಮಾನುಷ ಕೃತಿಗಳನ್ನು ಮಾಡುತ್ತಾ ಬಂದ ಭಕ್ತಾದಿಗಳಿಗೆ ಧಾರ್ಮಿಕ ತತ್ವಗಳನ್ನು ಬೋಧ ಮಾಡುತ್ತಿರಲು ಅಂಕಸದೊಡ್ಡಿಯ ಅಸರಡ್ಡಿ ವೀರಭದ್ರಪ್ಪನು ತಾನು ಅರಿಯದೆ ಅಡಿದ ಅಪರಾಧಕ್ಕೆ ಅನಂತ ಪ್ರಕಾರವಾಗಿ ಸ್ತೋತ್ರ ಮಾಡಿ ತನ್ನ ಗ್ರಾಮಕ್ಕೆ ಬರಬೇಕೆಂದು ಪ್ರಾರ್ಥಿಸಲು ಘನಮಠೇಶರು ಬಹು ದಿನದಿಂದಲೂ ತಮ್ಮ ಸಲುವಾಗಿಯೇ ಮುದಗಲ್ಲ ಗ್ರಾಮದಿಂದ ತಮ್ಮ ಬೆನ್ನು ಬಿಡದೆ ಸೇವಾಸಕ್ತನಾದ ವೀರಭದ್ರಪ್ಪನ ವಿನಂತಿಯನ್ನು ಮನ್ನಿಸಿ ಆತನ ಗ್ರಾಮವಾದ ಅಂಕಸದೊಡ್ಡಿಗೆ ಹೋಗಿ ಅಲ್ಲಿಯ ಹಿರೇಮಠದಲ್ಲಿ ವಾಸಮಾಡಿ ಮಠದಲ್ಲಿಯೇ ತಮ್ಮ ನಿತ್ಯ ಕರ್ಮಗಳನ್ನು ಮುಗಿಸಿ ಮಠಕ್ಕೆ ಬಂದ ಭಕ್ತಾದಿಗಳಿಗೆಲ್ಲಾ ವಚನ ಶಾಸ್ತ್ರವನ್ನು ಬೋಧಿಸುತ್ತಿರುವ ಸಮಯಕ್ಕೆ ಗೆಜ್ಜಲಗಟ್ಟೆಯ ಸಂಸ್ಥಾನ ಅಪ್ಪನವರು ಇಲ್ಲಿಗೆ ಬಂದಿರಲು ಅವರು ಘನಮಠೇಶರ ದರ್ಶನವಾಗಬೇಕೆಂದು ತಮ್ಮ ಆಳುಗಳ ಮುಖಾಂತರ ನಾವು ಸ್ವಾಮಿಗಳ ಭೆಟ್ಟಿಗೆ ಬರುತ್ತೇವೆ. ಸ್ವಾಮಿಗಳ ಸಮೀಪದಲ್ಲಿದ್ದವರೆಲ್ಲಾ ದೂರ ಹೋಗಬೇಕು.

ಎಂದು ತಮ್ಮ ಘೋಷಾ ಪದ್ಧತಿಯನ್ನು ತಿಳುಹಿಸಲು ತಮ್ಮ ಮಾಲೀಕರ ಅಪ್ಪಣೆಯನ್ನು ಆಳುಗಳು ಶಿವಯೋಗಿಗಳ ಸನ್ನಿಧಿಗೆ ಬಂದು ನಿಜಸ್ಥಿತಿಯನ್ನು ತಿಳಿಸಲು ಘನಮಠೇಶರು ಬಂದವರಿಗೆ ಅಪ್ಪಾ ಇಲ್ಲಿರುವ ಭಕ್ತರನ್ನೆಲ್ಲಾ ಹೊರಗೆ ಕಳುಹಿ ನಿಮ್ಮ ಅಪ್ಪನವರನ್ನು ಭೆಟ್ಟಿಯಾಗುವದರಿಂದ ನನಗೆ ಬರುವ ಭಾಗ್ಯವಾದರೂ ಏನು ನಿಮ್ಮ ಅಪ್ಪನವರನ್ನು ಕಾಣದೆ ಹಾಗೇ ಮುಂದಕ್ಕೆ ಪ್ರಯಾಣ ಮಾಡಿದರೆ ನಮಗಾಗುವ ನಷ್ಟವಾದರೂ ಏನು ಬೇಕಾದವರು ಬೇಕಾದಾಗ ಬರಬಹುದು ಹೋಗ

ಬಹುದು ಇಷ್ಟವಿಲ್ಲದಿದ್ದರೆ ಬಿಟ್ಟು ಬಿಡಬಹುದು ನಾವು ಮಾತ್ರ ಯಾರಿಗೂ ಎಂದೂ ಏನನ್ನೂ ಹೇಳಲಾರೆವು. ನಿಮ್ಮ ಅವ್ವನವರ ಮಾತಿನಂತೆ ಬಂದ ಭಕ್ತಾದಿಗಳಿಗೆಲ್ಲಾ ಎದ್ದು ಹೋಗಿರೆಂದು ಹೇಳಲು ನನಗೇನು ಅಧಿಕಾರ ಜಗತ್ತಿನ ಜನರ ಸ್ತುತಿನಿಂದೆಗಳಿಗೆ ಹಿಗ್ಗದೆ ಯಾರಿಂದ ಏನು ಬೇಕು ಬೇಡೆಂಬ ಭಾವನೆಯನ್ನು ಬರಿದು ಮಾಡಿ ಊರೂರ ತಿರುಗುವವರಿಗೆ ಯಾರದೇನು ಭಯ ನಿಮ್ಮ ತಾಯಿಯವರು ಬೇಕಾದರೆ ಬರಬಹುದು ಸಾಕಾದರೆ ಬಿಡಬಹುದು.

ಎಂದು ಹೇಳಲು ಈ ವಿಷಯ ಗೆಜ್ಜಲಗಟ್ಟಿಯ ಅವ್ವನವರು ಕೇಳಿ ಮನಸ್ಸಿನಲ್ಲಿಯೇ ಇವರ ನಿರಾಶಾಮಯವಾದ ನಿಷ್ಠುರ ವಾಕ್ಯವನ್ನು ಕೇಳಿ ಭಯಗ್ರಸ್ತರಾಗಿ ಇಂಥಾ ಮಹಾತ್ಮರಿಗೆ ಹೇಳಿ ಕಳಿಸಿದ್ದು ನನ್ನದೇ ಅಪರಾಧವೆಂದು ತಾವೇ ಅಲ್ಲಿಗೆ ಹೋಗಿ ಮುಖದ ತುಂಬಾ ಸೆರಗು ಹಾಕಿಕೊಂಡು ಶಿವಯೋಗಿಗಳಿಗೆ ನಮಸ್ಕಾರ ಮಾಡಲು ಶಿವಯೋಗಿಗಳು ಆ ತಾಯಿಯವರಿಗೆ ಅಮ್ಮಾ ಪತಿವ್ರತೆಯರಾದ ನೀವು ಬಹಿರಂಗದಲ್ಲಿ ಹಾಕುವ ಬುರುಕೆಗಿಂತಲೂ ಅಂತರಂಗದಲ್ಲಿ ನಿಮ್ಮ ಮಂಗ ಮನಸ್ಸಿಗೆ ಬುರುಕೆ ಹಾಕಿ ಶಿವಸಾಕ್ಷಿಯಾಗಿ ಪತಿಯ ಹೊರ್ತು ಪರಪುರುಷರನ್ನು ಕೆಟ್ಟ ದೃಷ್ಟಿಯಿಂದ ನೋಡಬಾರದೆಂಬುದೇ ನಿಜವಾದ ಬುರುಕೆ ಆಗಲಿ ಅಮ್ಮಾ ನಿಷ್ಠೆಯಿಂದ ಜಂಗಮನನ್ನು ಕಾಣಲು ಬಂದ ನಿನ್ನಂತೆ ನಿನ್ನ ಮನೆತನದಲ್ಲಿ ಸದಾ ಜಂಗಮ ಭಕ್ತಿಯು ನೆಲೆಗೊಳ್ಳಲಿಯೆಂದ ಮಹಾತ್ಮರ ಆಶೀರ್ವಾದದಂತೆ ಇಂದಿಗೂ ಗೆಜ್ಜಲಗಟ್ಟಿಯ ಸಂಸ್ಥಾನಾಧೀಶರು ಪರಂಪರೆಯಾಗಿ ಗುರುಲಿಂಗ ಜಂಗಮ ಪ್ರೇಮಿಗಳಾಗಿ ಶ್ರೀ ಅಮರೇಶ್ವರ ಮಹಾ ಕ್ಷೇತ್ರದಲ್ಲಿ ಅಂದಿನಿಂದ ಇಂದಿನವರೆಗೂ ಅವ್ಯಾಹತವಾಗಿ ನಡೆಯಿಸಿದ ಜಂಗಮ ದಾಸೋಹವನ್ನು ನೋಡಿದರೆ ಅಂದಿಗೆ ಆ ಮಹಾ ತಾಯಿಗೆ ಆಶೀರ್ವದಿಸಿದ ಘನಮಠೇಶರ ಅಮೃತ ವಾಣಿಯೇ ಕಾರಣವೆಂದು ಹೇಳಬಹುದು.

ನಂತರ ಘನಮಠೇಶರು ಅಂಕಸದೊಡ್ಡಿಯಿಂದ ಪುನಃ ಕೆಲೂರಿಗೆ ಬರುವಾಗ ಸರ್ವಭಕ್ತರು ಇವರನ್ನು ಕಳಿಸುತ್ತಾ ತಮ್ಮ ಗ್ರಾಮದ ಕರೇ

ಅಗಸಿಯಲ್ಲಿ ಬರಲು ಘನಮಠೇಶರ ಪಾದದಲ್ಲಿರುವ ಕಟ್ಟಿಗೆಯ ಆವುಗೆಗಳು ಜಾರಲು ಕಾಲು ಜಾರಿದ್ದಕ್ಕೆ ಘನಮಠೇಶರು ಹೀಗಾಗಲು ಕಾರಣವೇನು ಎಂದು ಆಕಾಶದ ಕಡೆ ನೋಡುತ್ತಾ ಕ್ಷಣಕಾಲ ಅನಿಮಿಷ ದೃಷ್ಟಿಯಿಂದ ಆಕಾಶವನ್ನೇ ನೋಡಿ ನಂತರ ನಮ್ಮ ಪರವಾದಿಯು ಕೈಲಾಸಕ್ಕೆ ತೆರಳಿದ್ದಾನೆ. ನಾವಿನ್ನು ವಿಲಂಬ ಮಾಡಲು ಮಾರ್ಗವಿಲ್ಲಾ ಶಿವಸನ್ನಿಧಿಗೆ ಹೋಗುವ ಪ್ರಥಮ ಸೂಚನೆಯೇ ನಮ್ಮ ಕಾಲು ಜಾರಿದ ಕುರುಹಾಗಿದೆ ಎಂದು ಅವಸರದಿಂದ ಎಲ್ಲರನ್ನು ಅಲ್ಲಿಂದಲೇ ಹಿಂದಕ್ಕೆ ಕಳುಹಿ ತಮ್ಮ ಪ್ರೇಮದ ಶಿಷ್ಯನಾದ ಆಸರಡ್ಡಿಯ ವೀರಭದ್ರಪ್ಪನೊಡನೆ ಸಂತೀಕೆಲೂರಿಗೆ ಬಂದು ಮೊದಲು ತಾವಿದ್ದ ತೋಂಟದ ಸ್ವಾಮಿಗಳವರ ಮಠದಲ್ಲಿಯೇ ತಮ್ಮ ಸ್ನಾನ ಶಿವಾರ್ಚನೆಗಳನ್ನು ತೀರಿಸಿಕೊಂಡು ಪ್ರಸಾದವನ್ನೇನೂ ಪರಿಗ್ರಹಿಸದೆ ಹಾಗೆಯೇ ಮಲಗಿಬಿಟ್ಟರು.

ಸೂರ್ಯೋದಯವಾದರೂ ಪ್ರತಿ ದಿವ್ಸ ಪ್ರಾತಃಕಾಲದ ಪ್ರಥಮದಲ್ಲಿಯೇ ತಮ್ಮ ಶೌಚಾಚಮನಾದಿಗಳನ್ನು ಮುಗಿಸುವವರು ಇಂದು ತಾಸೆರಡು ತಾಸು ಹೊತ್ತು ಏರಿದರೂ, ಹಾಗೆಯೇ ಮಲಗಿರುವರಲ್ಲಾ ಎಂದು ಪ್ರತಿ ದಿವಸ ಶಿವಯೋಗಿಗಳ ದರ್ಶನಕ್ಕೆ ಬರುವ ಪ್ರಮುಖ ಭಕ್ತರಾದ ಹೆಸರೂರ ದೊಡ್ಡಪ್ಪ ಗುರುವಿನ ಅಮರಯ್ಯ ಮೊದಲಾದವರು ದೇಹಾಲಸ್ಯದಿಂದ ಮಲಗಿದ ಘನಮಠೇಶರಿಗೆ ತಾವು ಈ ಪ್ರಕಾರ ತಮ್ಮ ನಿತ್ಯಕರ್ಮಾದಿಗಳನ್ನು ಬಿಟ್ಟು ನಿರಾಹಾರಿಗಳಾಗಿ ಮಲಗಿದರೆ ನಮ್ಮ ಮನಸ್ಸಿಗೆ ಹೇಗೆ ಸಮಾಧಾನವಾಗಬೇಕು. ನಾನಾದರೂ ತಮ್ಮನ್ನು ಬಿಟ್ಟು ಹೇಗೆ ಮನೆಗೆ ಹೋಗಬೇಕು ತಮ್ಮ ಸ್ನಾನ ಶಿವಾರ್ಚನಾದಿಗಳನ್ನು ಮಾಡಿಸಿ ತಮ್ಮ ಪ್ರಸಾದ ಪಾಕಮಾಡಲು ಯಾರನ್ನಾದರೂ ಯೋಗ್ಯ ಶಿಷ್ಯನನ್ನು ತಮ್ಮ ಸೇವೆಗೆ ನೇಮಿಸಲು ಅಪ್ಪಣೆಯಾಗಬೇಕು.

ಅಂದರೆ ಇದೇ ಮಠದಲ್ಲಿರುವ ಮಲ್ಲಿಕಾರ್ಜುನಯ್ಯನನ್ನು ತಮ್ಮ ಸೇವಾ ಕಾರ್ಯಕ್ಕೆ ನೇಮಿಸಿದರೆ ಉತ್ತಮನಾದ ಮಲ್ಲಿಕಾರ್ಜುನಯ್ಯನು ತಮ್ಮ ಸೇವೆಯಲ್ಲಿ ಏನೂ ನ್ಯೂನತೆ ಬಾರದಂತೆ ನಡೆಯುತ್ತಾನೆ ಎಂದು

ಹೇಳಲು ಘನಮಠೇಶರು ಅಪ್ಪಾ ಸಾವಿಗೆ ಸಮೀಪರಾದ ನಮಗೆ ಉಪಚಾರ
ವಾದರೂ ಏತಕ್ಕೆ ಬೇಕು ಅನಂತ ಕಟ್ಟು ನಿಟ್ಟುಗಳಿಗೊಳಪಟ್ಟ ನಮ್ಮ ಸೇವೆ
ಯನ್ನು ಮಾಡಲು ನಿಮ್ಮ ಮಲ್ಲಿಕಾರ್ಜುನಯ್ಯನು ಒಪ್ಪುವನೇ ಹಾಗಿದ್ದಲ್ಲಿ
ಅವನನ್ನು ನಮ್ಮ ಸನ್ನಿಧಿಗೆ ಕರೆಯಿರಿ ಅವನೊಪ್ಪಿದರೆ ಆಗಬಹುದು ಎಂದ
ಕೂಡಲೇ ಮನೆಯೊಳಗಿದ್ದ ಮಲ್ಲಿಕಾರ್ಜುನಯ್ಯನನ್ನು ಕರೆಯಲು ತಮ್ಮ
ಸಮ್ಮುಖದಲ್ಲಿ ಬಂದು ನಿಂತ ಮಲ್ಲಿಕಾರ್ಜುನಯ್ಯನನ್ನು ನೋಡಿ ಘನಮಠೇ
ಶರು ಹೌದೇನಪ್ಪಾ ನಮ್ಮ ಸೇವೆಯನ್ನು ಮಾಡಬೇಕಾದರೆ ನೀನು ಬಹಳ
ಕಷ್ಟಪಡಬೇಕಾಗುತ್ತದೆ. ನೀನು ಸಾಯುವ ಪರ್ಯಂತರ ಅನ್ಯ ದೇವರಿಗೆ
ಹಣೆ ಹಚ್ಚಿ ನಮಸ್ಕಾರ ಮಾಡಬಾರದು ಯಾವ ದೇವರಿಗೂ ಕೈಯತ್ತಿ
ಕಾಯಿ ಒಡೆಯಬಾರದು. ಅಸುವಳಿಯುವ ಪ್ರಸಂಗ ಬಂದರೂ ಅನೃತ
ವನ್ನಾಡಬಾರದು. ಸತ್ಯದಯೆ ಅಹಿಂಸಾದಿಗಳಿಂದ ಭಾವ ಶುದ್ಧನಾಗಿ
ನೀನು ನಮ್ಮ ನಿತ್ಯ ನೇಮಗಳನ್ನು ನೆರವೇರಿಸಿದಲ್ಲಿ ನಿನಗೂ ನಿನ್ನನ್ನು
ನೇಮಿಸಿದ ಈ ಭಕ್ತರಿಗೂ ಸದಾಶಿವನು ಸದ್ಗತಿಯನ್ನೀಯುತ್ತಾನೆ.

ಎಂದು ಆತನಿಗೆ ಸದ್ಬೋಧೆಯಂ ಮಾಡಿ ತಮ್ಮ ಸೇವೆಗೆ ಅನುಮ
ತಿಯಂ ಕೊಟ್ಟು ತಮ್ಮ ದೇಹಾಲಸ್ಯ ವಿಶೇಷವಾದದ್ದಕ್ಕೆ ಕುಳಿತಲ್ಲಿಯೇ
ವಚನ ಶಾಸ್ತ್ರವನ್ನು ನೋಡುತ್ತಾ ಅಸರಡ್ಡಿಯ ವೀರಭದ್ರಪ್ಪ ಮತ್ತು
ಹೆಸರೂರ ದೊಡ್ಡಪ್ಪನೇ ಮೊದಲಾದ ಭಕ್ತರಿಗೆ ಮನುಷ್ಯ ಶರೀರದ ಮಹ
ತಿಯನ್ನು ವರ್ಣಿಸುತ್ತಾ ಮಾನವನು ಸತ್ಯಾದಿ ಸದ್ಗುಣಯುತನಾಗಿ ತನ್ನ
ತಾ ತಿಳಿದು ಅನಿತ್ಯ ಸಂಸಾರದಲ್ಲಿ ನಿತ್ಯತ್ವವನ್ನು ತಿಳಿದು
ಸದಾಶಿವನ ಪ್ರೇಮಕ್ಕೆ ಪಾತ್ರರಾಗಿ ಸದ್ಗತಿ
ಯನ್ನು ಸಂಪಾದಿಸುವದೇ ಮಾನವ ಜನ್ಮದ ಅಂತಿಮದ ಗುರಿಯಾ
ಗಿದೆ. ಅರಿತರೆ ಮಹಾದೇವ, ಅರಿಯದಿರೆ ಮಾನವ. ಇದೇ
ಬಸವಾದಿ ಶಿವಶರಣರ ವಚನ ಶಾಸ್ತ್ರದ ರಹಸ್ಯ. ತನ್ನ ಧರ್ಮ ತತ್ವ
ದಂತೆ ತಾನು ನಡೆದು ಅನ್ಯರಿಗೆ ಅದನ್ನೇ ಬೋಧ ಮಾಡುವದೇ ಸಮಾಜ
ಸೇವೆ. ಸಮಾಜ ಸೇವೆಯೇ ಸರ್ವೇಶ್ವರನ ಸೇವೆ. ಈ ಪ್ರಕಾರ ಸರ್ವ
ರಿಗೂ ಬೋಧ ಮಾಡಿ ತಮ್ಮ ನಿತ್ಯ ಕರ್ಮಗಳನ್ನು ಮಲ್ಲಿಕಾರ್ಜುನಯ್ಯ

ನಿಂದಲೇ ಮುಗಿಸಿಕೊಂಡು ದೇಹಾಲಸ್ಯ ವಿಶೇಷವಾದದ್ದಕ್ಕಾಗಿ ಸರ್ವರಿಗೂ ಅಪ್ಪಣೆ ಕೊಟ್ಟು ಗುರುಮಠದಲ್ಲಿಯೇ ಪ್ರತಿ ದಿವಸದಂತೆ ಮಲಗಲು ಅಂದಿನ ರಾತ್ರಿಯೇ ಪರಮಾತ್ಮನು ಶಿವಯೋಗಿಗಳ ಸ್ವಪ್ನದಲ್ಲಿ ಬಂದು ಅನಿತ್ಯ ವಾದ ಸಂಸಾರದಲ್ಲಿ ಈತಿ ಬಾಧಾದಿಗಳಿಗೆ ಸಿಲುಕದೆ ಜಗತ್ತನ್ನೆಲ್ಲಾ ವೈರಾಗ್ಯ ದೃಷ್ಟಿಯಿಂದ ನೋಡಿ ಬಸವಾದಿ ಶಿವಶರಣರ ತತ್ವಗಳನ್ನೇ ವಿಶ್ವದಲ್ಲಿ ಹರಡಿ ವೀರವಿರಾಗೀ ಘನಮಠ ನೆಂದು ಅಂಚದ್ರಾರ್ಕ ಶಾಶ್ವತವಾಗಲಿ ಸಾಕು ನಿನ್ನ ಮಾನವ ಜನ್ಮವನ್ನು ಸಮಾಪ್ತಿಗೊಳಿಸಿ ನನ್ನ ಸನ್ನಿಧಿಗೆ ಬಾ. ಹಿಂದಕ್ಕೆ ನೀರಡಗುಂಭದಲ್ಲಿ ನೀನು ಫಣತೊಟ್ಟು ಬಂದಂತೆ ನಿನ್ನ ಪ್ರತಿ ವಾದಿಗಳಾದ ಶಂಷಾಬಾದಿಯ ಚನ್ನಬಸವ ಯೋಗಿಗಳು ನನ್ನ ಸನ್ನಿಧಿಗೆ ಸೇರಿದ್ದಾರೆ ಎಂಬ ಶುಭ ಸಂದೇಶವನ್ನು ಸ್ವಪ್ನದಲ್ಲಿ ಅರುಹಿ ಅಂತರ್ಧಾನ ನಾದನು.

ನಂತರ ಘನಮಠೇಶರು ಅಂತಿಮ ಜಾವದಲ್ಲಿ ತಮಗಾದ ಶುಭ ಸ್ವಪ್ನವನ್ನೇ ಚಿಂತಿಸುತ್ತಾ ಸೂರ್ಯೋದಯದಲ್ಲಿ ತಮ್ಮ ದರ್ಶನಕ್ಕೆ ಬಂದ ಸಮಸ್ತ ಭಕ್ತಾದಿಗಳನ್ನು ಕೂಡ್ರಿಸಿಕೊಂಡು "ಏನರಪ್ಪಾ, ಹಿಂದಕ್ಕೆ ನೀರಡಗುಂಭವೆಂಬ ಗ್ರಾಮದಲ್ಲಿ ಜ್ಞಾನ ಕ್ರಿಯೆಗಳ ವಿಷಯ ಶಂಷಾಬಾ ದಿಯ ಚನ್ನಬಸವ ಶಿವಯೋಗಿಗಳಿಗೂ ನನಗೂ ವಾದವಾಗಿ ನಮ್ಮಲ್ಲಿ ಆ ವಿಷಯವು ಬಗೆಹರಿಯದೆ ಶಿವ ಸಭೆಯಲ್ಲಿ ಶಿವನಿಂದಲೇ ಪರಿಷ್ಕಾರ ವಾಗಲೆಂದು ಫಣ ತೊಟ್ಟಿದ್ದೆವು. ಈಗ ಚನ್ನಬಸವ ಶಿವಯೋಗಿಗಳು ಮತ್ತು ನಾವು ನಮ್ಮ ವಾದಕ್ಕೆ ಸಾಕ್ಷಿಯಾಗಿ ಕೋರಿದ ನೀರಡಗುಂಭ ಮಠದ ಸಿದ್ಧಲಿಂಗ ಶಿವಯೋಗಿಗಳು ಮತ್ತು ಅದೇ ಗ್ರಾಮದ ಶಾಂತವೀರ ಪ್ಪನೆಂಬ ಗೌಡ .ಈ ಮೂವರು ಕೈಲಾಸಕ್ಕೆ ಬಂದಿರುವರೆಂದು ಅಂದಿನ ದಿವಸ ತಮ್ಮ ಸ್ವಪ್ನದಲ್ಲಿ ಶಿವನರುಹಿದ ವಿಷಯುವನ್ನು ಸವಿಸ್ತಾರವಾಗಿ ಸರ್ವರಿಗೂ ಅರುಹಲು ಸಕಲ ಭಕ್ತರು ಆನಂದಾಶ್ಚರ್ಯವುಳ್ಳವರಾಗಿ ಇದು ವರೆಗೂ ತಮ್ಮ ಗ್ರಾಮದಲ್ಲಿದ್ದು ತಮ್ಮ ಸದ್ಬೋಧೆಯಿಂದ ನಮ್ಮ ಅಜ್ಞಾನವನ್ನೆಲ್ಲಾ ಅಳಿದು ಸುಜ್ಞಾನ ಮಾರ್ಗದರ್ಶಕರಾಗಿ ಪ್ರತ್ಯಕ್ಷ ಮಹಾದೇವನಂತೆ ಪ್ರಕಾಶಿಸುತ್ತಿದ್ದ ಮಹಾತ್ಮರು ನಮ್ಮನ್ನಗಲುವರೆಂಬ

ಚಿಂತೆಯಿಂದ ಖಿನ್ನವದನರಾಗಿ ಮಹಾತ್ಮರೇ ತಮ್ಮ ಜ್ಞಾನ ಕ್ರಿಯಾ ಬಲದಿಂದ ಶಾಪಾನುಗ್ರಹಶಕ್ತರಾಗಿ ವಿಶ್ವವನ್ನೆಲ್ಲಾ ಸಂಚಾರ ಮಾಡಿದರೂ ಅಂತ್ಯಕ್ಕೆ ನಮ್ಮಗಳ ಪುಣ್ಯ ವಿಶೇಷದಿಂದ ನಮ್ಮ ಕನಿಷ್ಠ ಕೆಲವೂರನ್ನೇ ತಮ್ಮ ನೆಲೆಯನ್ನಾಗಿ ಮಾಡಿಕೊಂಡು ಅನಂತ ಅಮಾನುಷ ಕೃತಿಗಳನ್ನು ಮಾಡಿ ಅಜ್ಞಾನಿಗಳಾದ ನಮ್ಮಿಂದ ಅನಂತ ಪುಣ್ಯ ಕಾರ್ಯಗಳನ್ನು ಮಾಡಿಸಿ ಪ್ರತಿದಿನದಲ್ಲೂ ತಮ್ಮ ಅಮೃತ ವಾಣಿಯಿಂದ ಸದ್ಬೋಧಾಮೃತವನ್ನು ಪಾನ ಮಾಡಿಸುವ ತಾವು ಏಕಾಏಕಿ ಅಜ್ಞ ಭಕ್ತರನ್ನಗಲಬಹುದೇ ? ಇದುವರೆಗೂ ತಮ್ಮ ದರ್ಶನ ಶ್ರವಣಾದಿಗಳಿಂದ ಧನ್ಯರಾದ ನಾವು ಮತ್ತಾರನ್ನು ಮೊರೆ ಹೋಗಬೇಕು.

ಎಂದು ನಾನಾ ಪ್ರಕಾರವಾಗಿ ಪ್ರಳಾಪಿಸುತ್ತಿರುವ ಪ್ರೀತಿಯ ಭಕ್ತರನ್ನು ನೋಡಿ ಘನಮಠೇಶರು ದಯಾ ದೃಷ್ಟಿಯಿಂದ ಭಕ್ತರಿರಾ (ಜಾತಸ್ಯ ಮರಣಂ ಧೃವಂ) ಎಂಬ ವಾಕ್ಯದಂತೆ ಈ ಮರ್ತ್ಯದಲ್ಲಿ ಯೋಗಿಯಾಗಲಿ ತಪಸ್ವಿಯಾಗಲಿ ಮಾನವ ಶರೀರವನ್ನು ಧರಿಸಿದ ಪ್ರತಿಯೊಂದು ವ್ಯಕ್ತಿಯು ತನ್ನ ಕರ್ಮಾನುಗುಣವಾಗಿ ಎಂದಾದರೊಂದು ದಿವಸ ಸಾಯಲೇಬೇಕು. ಕಾರಣ ಮಾನವನು ತನಗೆ ಸಾವು ಸನ್ನಿಹಿತವಾಗುವದರೊಳಗೆ ಸತ್ಪಥದ ಶೋಧ ಮಾಡಿ ಸದ್ಗತಿಯನ್ನೈದಬೇಕು.

ಸಾವಿಗಾಗಿ ಯಾರೂ ಚಿಂತಿಸಬಾರದು. ಮಹಾತ್ಮರಿಗೆ ಮರಣವೇ ಮಹಾನವಮಿಯೆಂದು ಆರ್ಯೋಕ್ತಿ ಇಲ್ಲವೆ ಶಿವನ ಶುಭ ಸೂಚನೆಯಂತೆ ಇಂದು ನಾವು ಈ ನಶ್ವರವಾದ ದೇಹತ್ಯಾಗ ಮಾಡಲೇಬೇಕು. ಈಶ್ವರೇಚ್ಛೆಯನ್ನು ಮೀರಲು ಮಾನವನಿಗೆ ವಿರುದ್ಧ ವಿಷಯ (ಶುಭಸ್ಯಶೀಘ್ರಂ) ಎಂಬಂತೆ ಶುಭ ಕಾರ್ಯವನ್ನು ಮಾಡಲು ಆಲಸ್ಯ ಮಾಡಿದರೆ ಅಮೃತವೂ ಕೂಡ ವಿಷವಾಗುತ್ತದೆ ಕಾರಣ ನಮ್ಮ ಪರಲೋಕ ಪ್ರಯಾಣವನ್ನು ಯಾರೂ ತಡೆಯಬೇಡಿರಿ ಎಂದು ಎಲ್ಲರಿಗೂ ಪ್ರತಿ ಬಂಧ ಮಾಡಲು ಆಗ ಸರ್ವರೂ ನಿರುಪಾಯರಾಗಿ ಮಹಾತ್ಮರಿಗೆ ಪ್ರತಿಯನ್ನಾಡಲು ಭಯದಿಂದ ಬುದ್ಧೀ ಇಂದು ಶನಿವಾರವಲ್ಲವೇ (ಸತ್ತೆಲ್ಲಖೋಡಿ ಶನಿವಾರ) ಎಂದು ಲೋಕದಲ್ಲಿ ಶನಿವಾರ ಸಾಯಬಾರದೆಂದು ನಾಣ್ಣುಡಿ ಇದೆ

ಎನ್ನಲು ಘನಮಠೇಶರು ಇದೆಲ್ಲಿಂದ ತಂದಿರಪ್ಪಾ ನಿಮ್ಮ ಶಾಸ್ತ್ರ ಇಂದು ಶನಿವಾರವಾದರೆ ನಾಳೆಯ ದಿನ.......................

(ನಪಶ್ಚಾತ್ ಭಾನುಶುಕ್ರೇಚ) ಎಂದು ಜೋತಿಷ್ಯ ಶಾಸ್ತ್ರವು ಆದಿತ್ಯವಾರ ಮೇಲಕ್ಕೆ ಹೋಗಲು ನಿಷೇಧಿಸುತ್ತದೆ. ಹೀಗೆಯೇ ಮೀನ ಮೇಷ ಎಂದು ದಿನಗಳೆಯಲು ಶಿವಾಜ್ಞೆಯನ್ನುಲ್ಲಂಘಿಸಿದ ಪಾಪಕ್ಕೆ ಗುರಿಯಾಗಬೇಕಾಗುತ್ತದೆ. ಸೋಮವಾರ ಸೂರ್ಯೋದಯಕ್ಕೆ ಶಿವಲೋಕವನ್ನೈದಲು ಪ್ರಶಸ್ತವಿದೆ ಕಾರಣ ಸೋಮವಾರ ಮಾತ್ರ ಯಾರೂ ಯಾವ ಕಾರಣದಿಂದಲೂ ನಮ್ಮನ್ನು ತಡೆಯಬಾರದು ಎಂದು ಎಲ್ಲರನ್ನು ಸಮ್ಮತಿಗೊಳಿಸಿ ನಿಮ್ಮೆಲ್ಲರಿಗೆ ನಾವು ಹೇಳುವ ಮತ್ತೊಂದು ಮಹತ್ವದ ವಿಷಯವೇನಂದರೆ ನಿಮ್ಮ ಗ್ರಾಮದಲ್ಲಿ ಎಲ್ಲ ಮತದವರಿದ್ದರೂ ಮತಮತಾಂತರ ದ್ವೇಷಗಳನ್ನು ನಾವು ಬಂದಾಗಿನಿಂದಲೂ ಪರೀಕ್ಷೆ ಮಾಡಿ ನೋಡಿದರೆ ಶೈವ ವೈಷ್ಣವ ಶಾಕ್ತ್ಯೆಯ, ಗಾಣಪತ್ಯ ಹಾಲುಮತ, ವಾಲ್ಮೀಕಿ, ಕ್ರೈಸ್ತ, ಮಹಮ್ಮದಿಯ ಮೊದಲಾದ ಎಲ್ಲ ಧರ್ಮದವರು ನಾವು ಬಂದಾಗಿನಿಂದ ನಮ್ಮ ಧರ್ಮ ಬೋಧೆಯನ್ನು ಕೇಳಲು ಭಕ್ತಿ ಭಾವದಿಂದ ಆತುರರಾಗಿ ಬರುವದನ್ನು ನೋಡಿದರೆ ನಾವು ಈ ಗ್ರಾಮಕ್ಕೆ ಬರುವ ಪೂರ್ವದಲ್ಲಿ ಮೊಹರಂ ಹಬ್ಬದಲ್ಲಿ ತಮ್ಮ ದೇವರನ್ನು ಹಿಡಿದು ಖಾನಸಾಹೇಬರೆಂಬ ಸತ್ಪಾತ್ಮರು ನಾವು ಬರುವ ಭವಿಷ್ಯ ಸೂಚನೆಯನ್ನು ನಿಮಗೆ ಹೇಳಿದಂತೆ ಆ ವಿಷಯುವನ್ನು ನಾವು ನಿಮ್ಮಲ್ಲಿಯ ಜನರಿಂದ ತಿಳಿದು ಸರ್ವ ಧರ್ಮದವರ ನಿರ್ಮಲ ಹೃದಯದ ಭಾವವನ್ನು ತಿಳಿದೆ. ಬಸವಣ್ಣನವರ ವಚನದಂತೆ ದೇವನೊಬ್ಬ ನಾಮ ಹಲವು ಎಂಬಂತೆ ಎಲ್ಲ ಧರ್ಮದ ದೇವರಲ್ಲಿಯೂ ದೇವರಿದ್ದಾನೆ. ಎಂಬ ತತ್ವವನ್ನು ನಿಮ್ಮ ಸಂತೆಕೆಲೂರ ಭಕ್ತರ ಭಕ್ತಿ ಭಾವಕ್ಕೆ ಮೆಚ್ಚಿ ನಿಮ್ಮ ಗ್ರಾಮದಲ್ಲಿಯೇ ನಾವು ನೆಲೆಸಬೇಕಾಯಿತು.

ನಿಮ್ಮ ಭಕ್ತಿ ಭಾವದ ಪ್ರೇಮವೇ ನಮ್ಮನ್ನು ಈ ಊರು ಬಿಟ್ಟು ಮುಂದೆ ಹೋಗಲು ಅಡ್ಡಿ ಮಾಡಿತು. ಶಿವನು ಕೂಡ ನಮ್ಮ ಆಯುಷ್ಯದ ಪರಿಸಮಾಪ್ತಿಯನ್ನು ನಿಮ್ಮ ಗ್ರಾಮದಲ್ಲಿಯೇ ಪೂರ್ಣ ಮಾಡಿದ ಕಾರಣ ನಮ್ಮ ಜೀವನದಲ್ಲಿ ಸಂಪಾದಿಸಿದ ಶಿವಯೋಗ ಸಾಮರ್ಥ್ಯವನ್ನೆಲ್ಲ ಇದು

ವರೆಗೂ ಶಿವಯೋಗಿಗೆ ಸೇವೆ ಸಲ್ಲಿಸಿದ ನಿಮ್ಮ ಮತ್ತು ಸುತ್ತಲೆಲ್ಲ ಗ್ರಾಮ ಗಳ ಭಕ್ತರಿಗೆ ತ್ರಿಕರಣಪೂರಕವಾಗಿ ಮುಂದಿನ ನಿಮ್ಮ ಬಾಳು ಆಯುರಾ ರೋಗ್ಯ ಐಶ್ವರ್ಯಾಭಿವೃದ್ಧಿಯಾಗಲೆಂದು ಹರಿಸುತ್ತೇವೆ. ನಮ್ಮ ಈ ಅಂತ್ಯದ ಆಶೀರ್ವಚನವನ್ನು ಮರೆಯದೆ ಈ ಸೆಂತಿಕೆಲವೂರಿನ ಸಕಲ ಮತದವರು ಬಂಧು ಭಾವದಿಂದ ದ್ವೇಷಾಸುಯೆಗಳಿಗೆ ಎಡೆಗೊಡದೆ ಕಷ್ಟ ಪರಂಪರೆ ಗಳನ್ನು ತಂದುಕೊಳ್ಳಬಾರದೆಂದು ಮತ್ತೊಮ್ಮೆ ಎಲ್ಲರಿಗೂ ಹರ್ಷೋದ್ಗಾರ ಗಳಿಂದ ಹರಸುತ್ತೇವೆ

ನಮ್ಮ ಮರಣಾ ನಂತರ ನಮ್ಮ ಶವವನ್ನು ಸಮಾಧಿಗೊಳಿಸದೆ ಸಣ್ಣಾಗಿ ಛಿದ್ರ ಮಾಡಿ ನಿಮ್ಮ ಗ್ರಾಮದ ಸುತ್ತಲೂ ಚಲ್ಲಿದರೆ ನಿಮ್ಮ ಗ್ರಾಮಕ್ಕೆ ಮುಂದೆ ಯಾವ ಕಾಲಕ್ಕೂ ಮಾರಿಕಾದಿ ಅಪಮೃತ್ಯುಗಳು ಬಾರದೆ ಅಶನ ವಸನಾದಿ ಸಕಲ ಸಂಪತ್ತುಗಳು ಸಮೃದ್ಧಿಯಾಗಿ ನಿಮ್ಮ ಗ್ರಾಮವು ಸುಖದ ಆಗರವಾಗುತ್ತದೆ ಎಂದು ಆಜ್ಞಾಪಿಸಲು ಸಕಲರೂ ದುಃಖದಿಂದ ಬುದ್ಧೀ ಸಾಂಪ್ರದಾಯ ವಿರುದ್ಧ ಶಾಸ್ತ್ರವಿರುದ್ಧವಾದ ಅಸಂಹ್ಯವಾದ ಈ ಅಮಾನುಷ ಕೃತಿಯನ್ನೆಸಗಲು ನಮ್ಮಿಂದ ಕಾಲತ್ರಯಕ್ಕೂ ಆಗದ ಮಾತ ನ್ನು ತಾವು ಹೇಳಬಾರದು.

ಎಂದು ಅರಿಕೆ ಮಾಡಿಕೊಳ್ಳಲು ಅದಕ್ಕೆ ಘನಮಠೇಶರು ಆಗಲಿ ನಿಮ್ಮಿಂದ ಈ ಕಾರ್ಯವಾಗದಿದ್ದರೆ ಯಾರೂ ಇಲ್ಲದ ನಿರ್ಜನ ಪ್ರದೇಶದಲ್ಲಿ ಹದ್ದು ಕಾಗೆ ನರಿನಾಯಿಗಳು ಹರಿದು ತಿನ್ನುವಂತೆ ನಮ್ಮ ಶರೀರವನ್ನು ಬಿಸಾಡಿ ಬರುವದಾದರೂ ಆಗಬಹುದೇ ನಮ್ಮ ಮಾತನ್ನು ನಿರಾಕರಿಸಿ ಮೂರ್ತಿ ಪೂಜಾ ವಿರೋಧಿಗಳಾದ ನಮ್ಮ ಇಚ್ಛೆಯ ವಿರುದ್ಧವಾಗಿ ನಮ್ಮ ಶರೀರವನ್ನು ಸಮಾಧಿ ಮಾಡಿ ಸಮಾಧಿಯ ಮೇಲೆ ಗದ್ದುಗೆಯನ್ನು ಕಟ್ಟಿ ಕಾಯಿ ಕರ್ಪೂರಗಳನ್ನು ಒಡೆಯುತ್ತಾ ಹೋದರೆ ನಮ್ಮ ಸಮಾಧಿಯ ಮೇಲೆ ಗದ್ದುಗೆಯನ್ನು ಕಟ್ಟಿಸಿದವರ ವಂಶವೆಲ್ಲಾ ನಷ್ಟವಾಗಿ ನನ್ನಂತೆ ಅವರದೂ ನಿರ್ನಾಮವಾಗಿ ನಾಮಶೇಷವಾಗುತ್ತದೆ.

ಇದರ ಮೇಲೆ ನಿಮಗೆ ಇಷ್ಟವಾದುದನ್ನು ಮಾಡಿರಿ ಎಂದು ಹೇಳಿ ನಾವು ಅಸುವಳಿಯಲು ಇನ್ನೆರಡು ದಿವಸದ ಅವಧಿ ಇದೆ ಭಕ್ತಾದಿಗಳೆಲ್ಲಾ

ಶ್ರವಣ ಭಜನ ಅರ್ಚನಾದಿ ಕಾರ್ಯಗಳನ್ನು ಬೇಕಾದ ಹಾಗೆ ಮನಸ್ವೀ ಮಾಡಿ ನಿಮ್ಮ ಕಡೆಯ ಸೇವೆಯನ್ನು ಸಲ್ಲಿಸಿರಿ ಎಂದು ಅಜ್ಞಾಪಿಸಿ ಭಕ್ತರ ಮಧ್ಯದಲ್ಲಿದ್ದ ಹೆಸರೂರ ದೊಡ್ಡಪ್ಪನನ್ನು ಮುಂದೆ ಕರೆದು ಭಕ್ತ ಶ್ರೇಷ್ಠಾ ನಾವು ನಿನ್ನ ಗ್ರಾಮಕ್ಕೆ ಬಂದಂದಿನಿಂದ ಇಲ್ಲಿಯ ವರೆಗೂ ನಿನ್ನ ಸರಳ ಭಕ್ತಿಯನ್ನು ನೋಡಿ ನಮಗೆ ಮಹದಾನಂದವಾಗಿದೆ. ನಿನ್ನಂಥಾ ಸದ್ಭಕ್ತರಿಂದಲೇ ನಮ್ಮಂಥ ಹರಗುರು ಜಂಗಮರ ಆಚಾರ ನಡೆದು ಊರಲ್ಲಿಯ ಸಮಾಜ ಕಾರ್ಯಗಳು ನಿರ್ವಿಘ್ನವಾಗಿ ನಡೆಯುತ್ತವೆ. ಪರಮಾತ್ಮನು ನಿನ್ನ ಮನೆತನಕ್ಕೆ ಸದಾ ಸಂಪತ್ತನ್ನನುಗ್ರಹಿಸಿ ನಿನ್ನ ವಂಶದಲ್ಲಿ ಗುರುಲಿಂಗ ಜಂಗಮ ಭಕ್ತಿಯು ನಿರಾತಂಕವಾಗಿ ನಡೆಯಲೆಂದು ನಮ್ಮ ಶುಭಾಶೀರ್ವಾದವಿದೆ ಎಂದು ದೊಡ್ಡಪ್ಪನಿಗೆ ಮಂಗಲಾಶೀರ್ವಾದ ಮಾಡಿ ಇನ್ನುಳಿದ ಭಕ್ತರಿಗೂ ಅವರವರ ಭಾವನಾ ಸರಿಯಾಗಿ ಅವರವರಿಗೆ ಆಶೀರ್ವದಿಸಿ ತಮ್ಮ ನಿತ್ಯ ಕರ್ಮಾಚರಣೆಗೆ ವೇಳೆಯಾಗಲು ಸರ್ವರಿಗೂ ಅಪ್ಪಣೆ ಕೊಟ್ಟು ತಾವೂ ಮಲ್ಲಿಕಾರ್ಜುನಯ್ಯನ ಸಹಾಯದಿಂದ ತಮ್ಮ ನಿತ್ಯ ವಿಧಿಗಳನ್ನು ಮುಗಿಸಿಕೊಂಡು ಬಂದ ಭಕ್ತಾದಿಗಳಿಗೆ ಶುಭಾಶೀರ್ವಾದ ಮಾಡುತ್ತಾ ಮಠದಲ್ಲಿ ಕುಳಿತಿರಲು ಸುತ್ತಲಿನ ಗ್ರಾಮಗಳಲ್ಲೆಲ್ಲಾ ಸೋಮವಾರ ಸೂರ್ಯೋದಯಕ್ಕೆ ಘನಮಠೇಶ ಶಿವಯೋಗಿಗಳು ಶಿವಾಧೀನರಾಗುವರೆಂಬ ವಾರ್ತೆಯು ಎಲ್ಲಾ ಕಡೆಗೆ ಹಬ್ಬಲು ಸುತ್ತಲಿನ ಭಕ್ತರು ತಂಡೋಪತಂಡವಾಗಿ ಬಂದು ಎರಡು ದಿವಸಗಳಲ್ಲಿ ಸಂತೆಕೆಲೂರ ಗ್ರಾಮವು ಎಲ್ಲಿ ನೋಡಿದಲ್ಲಿ ಶಿವಭಕ್ತರಿಂದ ತುಂಬಿ ಸರ್ವರೂ ಹಗಲಿರುಳೆನ್ನದೆ ನುಡಿಯುವ ಶಿವನಾಮ ಸ್ಮರಣೆಯ ನಿನಾದವು ನಭೋ ಮಂಡಲಕ್ಕೆ ವ್ಯಾಪಿಸಿತ್ತು. ಘನಮಠೇಶರಿರುವ ತೋಂಟದ ಸ್ವಾಮಿಗಳವರ ವಿರಕ್ತ ಮಠದಲ್ಲಿಯಂತೂ ಪುರಾಣ ಕೀರ್ತನೆ, ಶಿವಮಂತ್ರ ಪಠನೆ, ಬಂದ ಭಕ್ತಾದಿಗಳಿಗೆ ಅನ್ನ ಸಂತರ್ಪಣೆ ಇತ್ಯಾದಿ ಕಾರ್ಯಗಳು ಅವ್ಯಾಹತವಾಗಿ ಸಾಗಿದ್ದವು, ಈ ಪ್ರಕಾರ ದಿವಾರಾತ್ರಿಯನ್ನದೆ ಎಡೆಬಿಡದೆ ಸಕಲ ಜನ ಸಮೂಹವು ತ್ರಿಕರಣ ಶುದ್ಧಿಯಿಂದ ಮಾಡುವ ಶಿವನ ಸೇವೆಯನ್ನು ಕಂಡು ಮಹದಾನಂದವುಳ್ಳವರಾಗಿ ಮೇಲಿಂದ ಮೇಲೆ ಸದಾಶಿವನು ನಿಮಗೆ ಇದೇ ಪ್ರಕಾರವಾದ ಸದ್ಬುದ್ಧಿಯನ್ನೀಯಲಪ್ಪಾ ಎಂದು ಆಶೀರ್ವದಿಸುತ್ತಿದ್ದರು.

ಹೀಗೆ ಸರ್ವರೂ ಆನಂದ ಪರವಶರಾಗಿ ಅಭವನಾಮ ಸ್ಮರಣೆಮಾ ಡುತ್ತಿರಲು ಯಾರಿಗೂ ಗೊತ್ತಿಲ್ಲದಂತೆಯೇ ಶನಿವಾರ ಆದಿವಾರಗಳೆರಡೂ ಕಳೆದು ಆದಿವಾರರಾತ್ರಿಯಾಗಲು ಇಂದಿನ ಬೆಳಗಿನ ಜಾವದಲ್ಲಿಯೇ ಶಿವಯೋಗಿಗಳು ಶಿವನ ಸನ್ನಿಧಿಯನ್ನೈದುವ ಸಮಯ ಸಮೀಪಿಸಿತಲ್ಲಾ ಇಂದೊಂದೇ ದಿವಸವಲ್ಲದೆ ನಾಳಿನದಿನ ನಮಗೆ ಶಿವಯೋಗಿಗಳ ಸೇವೆ ಸಿಗ ಲಾರದು ಎಂದು ಕೆಲವರು ನಮಸ್ಕಾರದಿಂದಲೂ, ಕೆಲವರು ಕರಜೋಡಿಸು ತ್ತಲೂ ಮತ್ತೆ ಕೆಲವರು ಶಿವಯೋಗಿಗಳ ದೇಹದ ಮೇಲೆಯೇ ನೆಟ್ಟ ದೃಷ್ಟಿಯುಳ್ಳವರಾಗಿಯೂ, ಇನ್ನುಳಿದವರು ಮಹಾತ್ಮರ ಮಹಿಮೆಗ ಳನ್ನು ಮನದಲ್ಲಿ ನೆನೆಯುತ್ತಲೂ ನೆರೆದ ಸಮೂಹವೆಲ್ಲಾ ನಾನಾವಿಧವಾಗಿ ಶಿವಯೋಗಿಗಳಿಗೆ, ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ರಾತ್ರಿ ಕಳೆ ದಂತೆ ಜನರ ಮನಸ್ಸಿನಲ್ಲಿ ಇಥಾ ಶಿವಯೋಗಿಗಳನ್ನು ಪುನಃ ನಾವು ಕಾಣುವದು ದುರ್ಲಭವೆಂದು ದುಃಖವೂ ಮತ್ತು ಮಹಾತ್ಮರನ್ನುಮನ ಕಾನೋಡಿ ಈ ನಶ್ವರನಾದ ದೇಹದಿಂದ ಪುಣ್ಯಾತ್ಮರ ಸೇವೆ ಮಾಡಿದ್ದಕ್ಕೆ ತಮ್ಮ ಶರೀರ ಸಾರ್ಥಕವಾಯಿತೆಂಬ ಆನಂದವೂ ಏಕಕಾಲಕ್ಕೆ ಉತ್ಪನ್ನ ನಾಗಿ ಒಮ್ಮೆ ಆನಂದ, ಒಮ್ಮೆ ದುಃಖ ಇವೆರಡರ ತಾಕಲಾಟದಲ್ಲಿ ಬೆಳ ಗಿನ ಜಾವವು ಸಮೀಪಿಸಲು ಘನಮಠೇಶರು ತಮ್ಮ ಪ್ರೀತಿಯ ಭಕ್ತನಾದ ಹೆಸರೂರ ದೊಡ್ಡಪ್ಪನನ್ನು ಕರೆದು ದೊಡ್ಡಾ ಈಗ ಸಮಯ ಎಷ್ಟಾಗಿರ ಬಹುದು, ಶುಕ್ರತಾರೆಯು ಉದಯವಾಗಿರಬಹುದೇ ಎಂದು ಪ್ರಶ್ನೆ ಮಾಡಲು ದೊಡ್ಡಪ್ಪನು ಹೊರಗೆ ಹೋಗಿ ಶುಕ್ರ ನಕ್ಷತ್ರವು(ಬೆಳ್ಳಿಚಿಕ್ಕಿಯು) ಮಾರಿನಳತೆ ಮೇಲಕ್ಕೇರಿರುವದನ್ನು ನೋಡಿ ಶಿವಯೋಗಿಗಳ ಸನ್ನಿ ಧಿಯಲ್ಲಿ ಬಂದು ನಕ್ಷತ್ರ ಉದಯವಾದ ವಿಷಯವನ್ನು ತಿಳಿಸಲು ಆಗಲೇ ಘನಮಠೇಶರು ಆಸನದಿಂದೆದ್ದು ಮಠದಲ್ಲಿರುವ ಭಾವಿಯ ಹತ್ತರಹೋಗಿ ಸಚೇಲ ಸ್ನಾನವಂ ಮಾಡಿ ಗುರುಮಠದಲ್ಲಿ ಬಂದು ತಮ್ಮ ಇಷ್ಟಲಿಂಗ ದಲ್ಲಿಯೇ ನೆಟ್ಟ ದೃಷ್ಟಿಯುಳ್ಳವರಾಗಿ ಆತ್ಮಲಿಂಗವನ್ನು ಸಮರಗೊಳಿಸಿ ಏಕದೇಕ ಧ್ಯಾನದಲ್ಲಿಯೇ ಗುರುಮಠದ ಮುಂದಿರುವ ಕಟ್ಟೆಯ ಮೇಲೆ ದರ್ಭಾಸನವನ್ನು ಹಾಕಿಸಿ ಸರ್ವರಿಗೂ ಸನಿರಪ್ಪಾ ಇದೇ ನಮ್ಮ ಕಡೆಯ ಸಂದೇಶ ಶಿವನು ಸರ್ವರಿಗೂ ಸುಖವನ್ನುಂಟು ಮಾಡಲಿ ಎಂದು ತಮ್ಮ

ಅಮೃತ ವಾಣಿಯಿಂದ ಅಂತ್ಯದ ಆಶೀರ್ವಾದವಂ ಮಾಡಿ ನಾವು ಈ ಆಸನದ ಮೇಲೆ ಕೆಲ ಹೊತ್ತು ಮೌನದಿಂದ ಮಲಗಿಕೊಳ್ಳುತ್ತೇವೆ. ಯಾರೂ ನಮ್ಮನ್ನು ಎಬ್ಬಿಸಿ ಮೌನವನ್ನು ಭಂಗಗೊಳಿಸಬಾರದು ಎಂದು ಕಟ್ಟಪ್ಪಣೆಯನ್ನು ಮಾಡಿ ಹಾಸಿದ ಆಸನದ ಮೇಲೆ ಪಶ್ಚಿಮಕ್ಕೆ ಮಸ್ತಕ ಪೂರ್ವಕ್ಕೆ ಪಾದ ಬಲ ಭಾಗವನ್ನು ಮೇಲು ಮಾಡಿ ತಮ್ಮ ಕಾವಿಯ ಕಪನಿಯನ್ನು ಅಂಗಾಂಗ ಪೂರ್ತಿಯಾಗಿ ಹೊದ್ದುಕೊಂಡು ಮಲಗಿಬಿಟ್ಟರು ಭಕ್ತ ಸಮೂಹವೆಲ್ಲಾ ಮೊದಲೇ ತಮಗೆ ತಿಳಿಸಿದ ಪ್ರಕಾರ ಶಿವಭಜನೆಯನ್ನು ಮತ್ತಷ್ಟು ಆವೇಶದಿಂದ ಮಾಡುತ್ತಿರಲು ಸೂರ್ಯೋದಯವಾಗಿ ಎರಡು ಮೂರು ತಾಸು ಹೊತ್ತು ಯೇರಿದರೂ ಒಂದೇ ಮಗ್ಗುಲಾಗಿ ಮಲಗಿದ ಶಿವಯೋಗಿಗಳು ಹಾಗೇ ಮಲಗಿದ್ದರಿಂದಲೂ ತಮ್ಮನ್ನು ಎಬ್ಬಿಸಬಾರದೆಂದು ಕಟ್ಟಪ್ಪಣೆ ಮಾಡಿದ್ದರಿಂದಲೂ ಭಯಗ್ರಸ್ತರಾಗಿ ತಮ್ಮ ಭಜನೆಯಲ್ಲಿಯೇ ಆಸಕ್ತರಾಗಿರಲು ಗುರುವಿನ ಅಮರಯ್ಯ ಹೆಸರೂರ ದೊಡ್ಡಪ್ಪನೆ ಮೊದಲಾದ ಭಕ್ತರೆಲ್ಲರೂ ಬಹು ವಿಧವಾಗಿ ಆಲೋಚಿಸ ಮೂರು ತಾಸು ಹೊತ್ತು ಏರಿದರೂ ಶಿವಯೋಗಿಗಳು ಹಾಗೇ ಮಲಗಿದರಲ್ಲಾ ಇದಕ್ಕೆ ಏನು ಆಲೋಚನೆ ಮಾಡುವದು ಮೊದಲೇ ತಾವು ತಿಳಿಸಿದಂತೆ ಶಿವಾಧೀನರಾಗಿರಬಹುದೇ ಅಥವಾ ಇನ್ನೂ ಇರಬಹುದೇ ಎಂದು ಯಾವದೂ ತಿಳಿಯದವರಾಗಿ ದೊಡ್ಡಪ್ಪನೇ ಅವರಗೆ ಪ್ರೀತಿಯ ಶಿಷ್ಯ ಆತನೇ ಸ್ನಾನಮಾಡಿ ಅವರು ಹೊದ್ದಿರುವ ಕಾವಿಯ ಕಪನಿಯನ್ನು ತೆಗೆದು ನೋಡಲು ಸಮರ್ಥನು ಅವರನ್ನು ಎಬ್ಬಿಸಲು ಅನ್ಯರಿಂದ ಆಗದ ಮಾತು ಎಂದು ಎಲ್ಲರೂ ದೊಡ್ಡಪ್ಪನವರ ಮುಖವನ್ನು ನೋಡಲು ದೊಡ್ಡಪ್ಪನು ಸರ್ವರ ಅಭಿಪ್ರಾಯದಂತೆ ಸಚೇಲ ಸ್ನಾನ ಮಾಡಿ ಮಡಿಯಿಂದ ಮಹಾತ್ಮರ ಸನ್ನಿಧಿಗೆ ಬಂದು ಮೇಲೆ ಹೊದ್ದುಕೊಂಡ ಕಾವಿಯ ಕಪನಿಯನ್ನು ಸೂಕ್ಷ್ಮವಾಗಿ ತೆಗೆದು ನೋಡಲು ಅಲ್ಲೇನಿದೆ ಶಿವಯೋಗಿಗಳ ಭೌತಿಕ ಶರೀರವಂದೇ ಉಳಿದಿದೆ ಇದುವರೆಗೂ ಅದೇ ಶರೀರದಲ್ಲಿ ಅಡಕವಾಗಿ ಅನಂತ ಅಮಾನುಷ ಕೃತಿಗಳನ್ನೆಸಗಿದ ಅವರ ಅಂತರಾತ್ಮನು ಪರಂಧಾಮವನ್ನೈದಿ ಪರಶಿವನಲ್ಲಿ ಸಮರಸಗೊಂಡಿದ್ದಾನೆ.

ಮಹಾತ್ಮರ ವಾಕ್ಯವೆಂದಾದರೂ ಸಟೆಯಾಗುವದುಂಟೆ ಎಂದು ಸರ್ವರೂ ಸಾಂಬಜಯನಮಃ ಪಾರ್ವತೀ ಪತೇ ಹರಹರ ಮಹಾದೇವ ಎಂದು ಜಯ ಜಯಕಾರ ಮಾಡಿ ಮುಂದಿನ ಕಾರ್ಯವನ್ನು ಹೇಗೆ ಮಾಡ ಬೇಕು ಎಂದು ಊರೊಳಗಿನ ಪ್ರಮುಖ ಭಕ್ತರೆಲ್ಲಾ ಸಭೆ ಕೂಡಿ ಶಿವ ಯೋಗಿಗಳ ಅಂತೇಷ್ಟಿ ಕಾರ್ಯವನ್ನು ಅವರ ಇಚ್ಛಾ ಪ್ರಕಾರ ಮಾಡ ಬೇಕೋ, ಅಥವಾ ಸಾಂಪ್ರದಾಯಕ್ಕೆ ಸರಿಯಾಗಿ ಶಾಸ್ತ್ರ ಪದ್ಧತಿಯನ್ನನು ಸರಿಸಬೇಕೋ, ಎಂಬ ಚರ್ಚೆಯಾಗಿ ಮಹಾತ್ಮರು ಹೇಳಿದಂತೆ ಮಾಡಲು ಮನುಷ್ಯ ಮಾತ್ರರಾದ ನಮ್ಮಿಂದ ಸಾಧ್ಯವೇ? ಗುರೋರ್ವಾಕ್ಯೈ ಶಾಸ್ತ್ರ ಸಮ್ಮತಿಯಂತೆ ಅವರ ಪಾದದ ಅಳತೆಯನ್ನು ತೆಗೆದುಕೊಂಡು ಇದೇ ಮಠ ದಲ್ಲಿ ಅವರ ಕ್ರಿಯಾ ಸಮಾಧಿಯನ್ನು ಪೂರ್ಣ ಮಾಡಿದರೆ ನಮಗೆ ಪಾಪವೂ ಇಲ್ಲಾ, ಪುಣ್ಯವೂ ಇಲ್ಲಾ. ಮೊದಲೇ ಮಂದಮತಿಗಳಾದ ನಾವು ಮಹಾತ್ಮರ ಶವವನ್ನು ಛಿದ್ರ ಮಾಡಿ ಅಚ್ಚಳಿಯದ ಪಾಪವನ್ನು ಬೆನ್ನಿಗೆ ಕಟ್ಟಿಕೊಳ್ಳುವದಲ್ಲದೆ ಲೋಕ ಪ್ರಸಿದ್ಧರಾದ ಘನಮಹೇಶರನ್ನು ಸಂತೆಕೆಲೂರ ಗ್ರಾಮದವರು ತಮ್ಮ ಸ್ವಾರ್ಥಕ್ಕಾಗಿ ಅಮಾನುಷ ಕೃತಿಯನ್ನು ಮಾಡಿದ ಅಪವಾದವು ಕಾಲಕಾಲಾಂತರ ನಮ್ಮ ಗ್ರಾಮಕ್ಕೆ ಬಿಟ್ಟದ್ದಲ್ಲಾ.

ಕಾರಣ ಸರ್ವರ ಅಭಿಪ್ರಾಯದಂತೆ ಮಠದಲ್ಲಿಯೇ ಶಿವಯೋಗಿ ಗಳ ಸಮಾಧಿಯನ್ನು ಮಾಡಬೇಕೆಂದು ಬಹುಮತವು ಹೆಚ್ಚಾಗಲು ಆವಾಗ್ಗೆ ಸರ್ವರೂ ಸಭೆಯ ನಿರ್ಣಯದಂತೆ ಹಿರೇಮಠದ ದೇಶಿಕರನ್ನು ಮಹಾಂತಿನ ಮಠದ ಚರವರ್ಯರನ್ನೂ ಕರೆಯಿಸಿ ಅವರ ಸಮಕ್ಷಮವಾಗಿ ಊರ ಪ್ರಮುಖರೆಲ್ಲಾ ಕ್ರಿಯಾ ಸಮಾಧಿಯ ಸಾಹಿತ್ಯಗಳನ್ನೆಲ್ಲಾ ಸಜ್ಜು ಗೊಳಿಸಿ ಮಠದಲ್ಲಿ ಯಃಥಾ ಪ್ರಕಾರವಾದ ದಾಸೋಹದಿಂದಲೂ ಪ್ರತಿ ಯೊಬ್ಬರ ಕರ್ಣದಲ್ಲಿಯೂ ಓಂಕಾರನಾದವೇ ಪ್ರತಿಧ್ವನಿತವಾಗುವಂತೆ ಮಾಡುವ ಶಿವನಾಮ ಭಜನೆಯಿಂದಲೂ ಶಾಲಿವಾಹನ ಶಕೆ (೧೮೦೧) ಪ್ರಮಾಥಿ ಸಂ॥ ರದ ಪುಷ್ಯ ಶುದ್ಧ ೪ ಸೋಮವಾರ ಸೂರ್ಯೋದಯಕ್ಕೆ ಶಿವಾಧೀನರಾದ ಶಿವಯೋಗಿಗಳ ಶವ ಸಂಸ್ಕಾರ ಕಾರ್ಯವನ್ನು ಮರುದಿವಸ ಅಂದರೆ ಪುಷ್ಯ ಶು॥ ೫ ಮಂಗಳವಾರ ಮಧ್ಯಾನ್ನಕ್ಕೆ ಮುಗಿಸಿ ತಮ್ಮ ಅಂತಿ ಮ ಸೇವೆ ಸಲ್ಲಿಸಿದರೆಂಬಲ್ಲಿಗೆ ದಶಮ ಪ್ರಕರಣ ಸಮಾಪ್ತಿ.

# ೧೧ ನೆಯ ಪ್ರಕರಣ



ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳು ತಮ್ಮ ತಪಸ್ಸಾಮರ್ಥ್ಯದಿಂದ ಅಮಾನುಷ ಕೃತಿಗಳನ್ನು ಮಾಡುತ್ತಾ ಅನಂತ ದೇಶಗಳನ್ನು ಸಂಚರಿಸಿ ಅಂತ್ಯಕ್ಕೆ ರಾಯಚೂರ ಜಿಲ್ಹೆಯ ಲಿಂಗಸುಗೂರ ತಾಲೂಕಿನ ಸಂತೆ ಕೆಲೂರೆಂಬ ಸಣ್ಣ ಗ್ರಾಮದಲ್ಲಿ ಶಿವಾಧೀನರಾದಂದಿನಿಂದ ಸಂತೆಕೆಲೂರ ಗ್ರಾಮವು ಒಂದು ಪುಣ್ಯ ಕ್ಷೇತ್ರವಾಗಿ ಪರಿಣಮಿಸಿದೆ ಎಂದರೂ ಅಡ್ಡಿಯಿಲ್ಲಾ. ಆ ಮಹಾತ್ಮರು ಕೆಲೂರಲ್ಲಿ ತಮ್ಮ ದೇಹವಿಸರ್ಜಿಸಿದಾಗಿನಿಂದಾ ಜಗತ್ತಿನ ನಾನಾ ಮೂಲೆಗಳಿಂದ ಸಾಧು ಸತ್ಪುರುಷರು, ಸಜ್ಜನರು ಅಂದಿನಿಂದ ಇಂದಿನ ವರೆಗೂ ಬರುತ್ತಲಿದ್ದಾರೆ. ಮತ್ತು ಶಿವಯೋಗಿಗಳ ಜಾಗ್ರತ ಸಮಾಧಿಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶಿವಯೋಗಿಗಳು ತಮ್ಮ ಸಮಾಧಿಯ ಮೇಲೆ ಗದ್ದುಗೆಯನ್ನು ಕಟ್ಟಬಾರದೆಂದು ಕಟ್ಟಪ್ಪಣೆ ಮಾಡಿದ್ದರೂ ಶಿವಯೋಗಿಗಳು ಶಿವೈಕ್ಯರಾದ ಮೂರು ವರ್ಷಗಳ ನಂತರ ಜನರು ಬೇಡವೆಂದರೂ ಅಂಕಸದೊಡ್ಡಿ ಗಾಣಿಗರ (ಸಜ್ಜನರ) ನರಸವ್ವನೆಂಬ ಸದ್ಭಕ್ತಳು ನನ್ನ ಮನೆತನವು ನಾಶವಾಗಿ ನಾಮಶೇಷವಾದರೂ ಅಡ್ಡಿಯಿಲ್ಲಾ ಎಂದು ಹನುಮಸಾಗರದಿಂದ ಉತ್ತಮವಾದ ಕಲ್ಲುಗಳನ್ನು ತರಿಸಿ ಶಿವಯೋಗಿಗಳ ಸಮಾಧಿಯ ಮೇಲೆ ಗದ್ದುಗೆಯನ್ನು ನಿರ್ಮಿಸಿದ ನಂತರ ಅಂಕಸದೊಡ್ಡಿಯಲ್ಲಿರುವ ಆಕೆಯ ವಂಶವೆಲ್ಲಾ ನಾಶವಾಗಿ ಇಂದಿಗೂ ಹೇಳಹೆಸರಿಲ್ಲದಂತಾಗಿದೆ. ಕೆಲೂರಲ್ಲಿ ಘನಮಠಯತಿಗಳು ಶಿವಾಧೀನರಾದ ನಂತರ ಇಲಕಲ್ಲ ಚಿತ್ತರಗಿ ವಿರಕ್ತ ಮಠ ದೊಡೆಯರೂ ಮಹಾ ಮಹಿಮಾಶಾಲಿಗಳೂ ಆದ ವಿಜಯ ಮಹಾಂತ ಶಿವಯೋಗಿಗಳು ವರ್ಷಕ್ಕೊಮ್ಮೆಯಾದರೂ ಕೆಲೂರಿಗೆ ಬಂದು ಶಿವಯೋಗಿಗಳ ಸಮಾಧಿಯೆದುರು ಕುಳಿತುಕೊಂಡು ಘನಮಠಾ ಸಂಸಾ

ರಕ್ಕೆ ತಿಲಾಂಜಲಿಯನ್ನು ಕೊಟ್ಟು ಸನ್ಯಾಸತ್ವವನ್ನು ಸ್ವೀಕರಿಸಿದ ನಾವು ನಿನ್ನಲ್ಲಿ ಯಾವ ಭಾಗ್ಯವನ್ನೂ ಬೇಡಲು ಬಂದವರಲ್ಲಾ ನೀನು ಜಗತ್ತಿನಲ್ಲಿ ದೊಡ್ಡವನೆನಿಸಿಕೊಂಡು ವಿರಕ್ತರ ಸೊತ್ತಾದ ವೈರಾಗ್ಯ ಧನವನ್ನು ಕದ್ದು ಕೊಂಡು ಬಂದು ಈ ಕೆಲೂರಲ್ಲಿ ಅಡಗಿಕೊಂಡು ಕುಳಿತರೆ ನಮ್ಮ ಗಂಟನ್ನು ಕೊಡುವವರಾರು ದಯಮಾಡಿ ನಮ್ಮ ಗಂಟನ್ನು (ವಿರತಿಯನ್ನು) ನಮಗೆ ಕೊಟ್ಟುಬಿಡು ನಮ್ಮ ಗಂಟನ್ನು ಕೊಡುವವರೆಗೂ ನಾವು ನಿನ್ನನ್ನು ಬಿಟ್ಟು ಹೋಗುವದಿಲ್ಲಾ ಎಂದು ತಾವು ತೊಟ್ಟುಕೊಂಡ ಕಪನಿಯನ್ನು ತೆಗೆದು ಬರೇ ಮೈಯಿಂದಲೇ ಗದ್ದುಗೆಯ ಮುಂಭಾಗದಲ್ಲಿ ಮಲಗಿಕೊಳ್ಳುತ್ತಿದ್ದ ರಂತೆ ಅಲ್ಲಿದ್ದ ಭಕ್ತರು ಬುದ್ಧೀ ನೆಲದ ಮೇಲೆ ಹೀಗೆ ತಾವು ಬರೇ ಮೈ ಯಿಂದ ಮಲಗಬಹುದೇ ಏನಾದರೂ ಆಸನವನ್ನು ಹಾಕುತ್ತೇವೆ.

ಎಂದು ಪ್ರಾರ್ಥಿಸಲು ಅದಕ್ಕೆ ವಿಜಯ ಮಹಾಂತ ಶಿವಯೋಗಿಗಳು ಹಾಗಲ್ಲವಪ್ಪಾ ಈ ಸಮಾಧಿಯೊಳಡಗಿದ ವೀರವಿರತಿಯ ಪಾದಸ್ಪರ್ಶದಿಂದ ಪವಿತ್ರವಾದ ಪುಣ್ಯ ಭೂಮಿಯಿದು ನಮ್ಮ ದೇಹಕ್ಕೆ ಈ ಪುಣ್ಯ ಭೂಮಿಯ ಸ್ಪರ್ಶದಿಂದ ನಮ್ಮ ಹೃದಯದೊಳಗೆ ನಿರಾಶಾಮಯವಾದ ವಿರಾಗವು ಉತ್ಪನ್ನವಾಗಬಹುದೆಂದು ನಾವೀ ಪ್ರಕಾರ ಮಾಡಿದೆವು ಎಂದು ಎಲ್ಲರಿಗೆ ಹೇಳುತ್ತಿದ್ದರಂತೆ ಈ ವಿಷಯವನ್ನು ಈಗ್ಗೆ ಹದಿನೈದು ವರ್ಷಗಳ ಹಿಂದೆ ಶಿವಾಧೀನರಾದ ಶಿವಯೋಗಿಗಳ ಸಮಕಾಲೀನರಾದ ಕಟಾಂಬಲಿ ವೀರ ಯ್ಯನವರೆಂಬ ವಯೋವೃದ್ಧರು ಬಾಯಿ ತುಂಬಾ ಹೇಳುತ್ತಿದ್ದರು ಇವ ರಿಂದಲೇ ಶಿವಯೋಗಿಗಳ ಅನಂತ ವಿಷಯಗಳು ನಮಗೆ ಸಂಗ್ರಹೀತವಾ ಗಿವೆ. ಆಸ್ತು ವಿ ಜ ಯ ಮಹಾಂತ ಶಿ ವ ಯೋ ೀ ಗಿ ಗ ಳಂ ಥ ಮಹಾಮಹಿಮರೇ ಈ ಪ್ರಕಾರ ವರ್ಣಿಸಿರುವಾಗ ಘನಮಠೇಶರ ವೈರಾ ಗ್ಯದ ಆಳತೆಯಷ್ಟೆಂಬುದನ್ನು ವಾಚಕರೇ ಊಹಿಸಬಹುದು.

ಈಗ್ಗೆ ಇಪ್ಪತ್ತು ವರ್ಷಗಳ ಮುಂಚೆ ಧಾರವಾಡದ ಮುರಘಾಮಠದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರು ತಮ್ಮವರನ್ನು ಸಂತೆಕೆಲೂ ರಿಗೆ ಕಳುಹಿಸಿ ಗದ್ದುಗೆಯ ಫೋಟೋವನ್ನೂ ಮತ್ತು ಮಠದಲ್ಲಿದ್ದ ಶ್ರೀ ಘನ ಮಠ ಶಿವಯೋಗಿಗಳ ಕೈ ಬರಹದ ಕೆಲವು ವಚನ ಶಾಸ್ತ್ರಗಳನ್ನೂ ಪದ್ಯ

ಗಳನ್ನೂ ತಮ್ಮಲ್ಲಿಗೆ ತರಿಸಿಕೊಂಡು ಶಿವಯೋಗಿಗಳ ಪದ್ಯಗಳನ್ನೆಲ್ಲಾ ಸಂಗ್ರಹಿಸಿ ಸಂ. ಶಿ. ಭೂಸನೂರಮಠ ಎಂ.ಎ. ಇವರು **ಭಕ್ತಿ ಸುಧಾಸಾರ** ಎಂಬ ಬಹು ಅಂದವಾದ ಗ್ರಂಥವನ್ನು ಪ್ರಕಾಶಪಡಿಸಿ ಸಮಾಜಕ್ಕೆ ಮಹೋಪಕಾರವನ್ನು ಮಾಡಿದ್ದಾರೆ. ಇದಲ್ಲದೆ ಮೂವತ್ತು ವರ್ಷಗಳ ಅಂದಾಜಿಗೆ ಮೈಸೂರಿನ ಮುಗ್ಧವೀರ ಸ್ವಾಮಿಗಳೆಂಬುವರು ಇದೇ ಶ್ರೀ ಘನ ಮಠಾರ್ಯರ ಗದ್ದುಗೆಯಲ್ಲಿ ಬಂದು ಕುಳಿತು ಊರವರಿಗೆಲ್ಲಾ ಘನಮ ಠರ ಮಹತ್ವಗಳನ್ನು ಹೇಳುವದಲ್ಲದೆ ಅದೇ ಗದ್ದುಗೆಯಲ್ಲಿ ಸಪ್ತ ಭಜ ನೆಯನ್ನು ಮಾಡಿಸಿ ಭಜನಾ ಸಮಾಪ್ತಿಯ ಕಾಲಕ್ಕೆ ಅವರ್ಣನೀಯ ವಾದ ಭೂರಿಗಣಾರಾಧನೆಯನ್ನು ಮಾಡಿಸಿ ಏಕಾಏಕಿ ಇಲ್ಲಂದಾ ಮಾಯ ವಾದವರು ಹತ್ತು ಹನ್ನೆರಡು ವರ್ಷಗಳ ಮುಂದೆ ಮತ್ತೂ ನಮ್ಮ ಸಂತೆಕೆಲೂ ರಿಗೆ ಬಂದು ಶ್ರೀ ಶರಣಬಸವೇಶ್ವರ ಪುರಾಣ ಪ್ರಾರಂಭ ಮಾಡಿಸಿ ಭಕ್ತರಿಗೆ ಸತ್‌ಶ್ರವಣಗೊಳಿಸಿ ಪುರಾಣ ಸಮಾಪ್ತಿಯ ಕಾಲಕ್ಕೆ ಮಹಾಗಣಾರಾಧನೆ ಯನ್ನು ಅತ್ಯಂತ ಅವಸರದಿಂದ ಮಾಡಿಸಿ ಆರಾಧನೆ ಮುಗಿಸಿದೊಡನೆಯೇ ಈಗಿನ ಪ್ರಮುಖರಾದ ಅಮರೇಗೌಡ ಭೋಳರಡ್ಡಿಗೌಡ ಮುಸಲಿಕಾರಲ ಕುಂಟೆಯ ಮಾಲೀ ಪಾಟೀಲ ಬಸವನಗೌಡ ಮತ್ತು ಸಾಹುಕಾರ ಶಿವ ಬಸಪ್ಪ ಮಹಾಂತಪ್ಪ ಹೆಸರೂರ ಮೊದಲಾದ ಸದ್ಭಕ್ತರನ್ನು ತಮ್ಮ ಸನ್ನಿಧಿಗೆ ಕರೆಯಿಸಿ ಅಂದಿನ ರಾತ್ರಿಯೆ ನಮ್ಮನ್ನು ಬಂಡಿ ಕಟ್ಟಿ ಭಾವ ಣಿಗೆ ಕಳ್ಸಿರಿ. ಮುಂಜಾನೆಯ ಮೊದಲಿನ ಮೋಟಾರಕ್ಕೆ ರಾಯಚೂ ರಿಗೆ ಹೋಗಿ ದ್ವಾರನ ಹಳ್ಳಿಗೆ ಮುಟ್ಟಬೇಕಾಗಿದೆ. ನಮ್ಮ ಅವಧಿಯು ತೀರಾ ಸಮೀಪಕ್ಕೆ ಬಂದಿದೆ. ಇಲ್ಲಯೇ ನಾವು ಆಲಸ್ಯ ಮಾಡುತ್ತಾ ಕೂಡ್ರುವಂತಿಲ್ಲಾ ಎಂದು ರಾತ್ರಿಯೇ ಭಂಡಿ ಕಟ್ಟಿಸಿಕೊಂಡು ಭಾವಣಿಗೆ ಹೋಗಿ ಮುಂದೆ ರಾಯಚೂರ ಮಾರ್ಗವಾಗಿ ದ್ವಾರನ ಹಳ್ಳಿಗೆ ಮುಟ್ಟಿ ಅಲ್ಲಿಯ ತಮ್ಮ ಪ್ರೀತಿಯ ಗೌಡ ಮೊದಲಾದ ಭಕ್ತರನ್ನು ಕರೆಯಿಸಿ ನೀವು ನಮ್ಮ ಅಂತ್ಯಕ್ರಿಯಾದಿಗಳನ್ನು ಸರಿಯಾಗಿ ಮಾಡಿಸಿದರೆ ಇಲ್ಲಿ ನಾವು ನಿಲ್ಲುತ್ತೇವೆ. ಇಲ್ಲವೇ ಶಹಾಪುರಕ್ಕೆ ಪ್ರಯಾಣ ಮಾಡ ತ್ತೇವೆ. ಎಂದು ಹೇಳಲು ಆ ಗ್ರಾಮದವರು ಒಪ್ಪಿ ಅವರ ಇಚ್ಛೆಯ ಪ್ರಕಾರ ಅಂತೇಷ್ಟಿಕಾರ್ಯಗಳನೆಲ್ಲಾ ಮಾಡಿ ಅವರ ಸಮಾಧಿಯನ್ನು ಮಾಡಿಸಿದ್ದಾರೆ.

ನಮ್ಮ ಕೆಲೂರಿಗೆ ಅವರು ಎರಡು ಸಾರೆ ಬಂದರೂ ಅವರ ಊರು ಮಠ ಅವರ ವಂಶ ಆಸ್ತಿಪಾಸ್ತಿಗಳಾವುದೆಂಬುದನ್ನು ತಿಳಿಯಲು ಬೇಕಾದಷ್ಟು ಪ್ರಯತ್ನ ಮಾಡಿದರೂ ಯಾರಿಗೂ ತನ್ನ ನಿಜವಾದ ವಿಷಯವನ್ನು ಬಹಿರಂಗ ಪಡಿಸದೆ ಘನಮಠೇಶರಂತೆ ನಿರಾಶಾವಾದಿಗಳಾಗಿ ಯಾರಿಂದಯೇನೂ ಪರಿಗ್ರಹಿಸದೆ ಅನಂತ ಮಹಿಮೆಗಳನ್ನು ಮಾಡಿ ಅಲ್ಲಲ್ಲಿ ಶಿವಶರಣರ ಸಚ್ಚರಿತ್ರೆಗಳನ್ನು ಸಮಾಜಕ್ಕೆ ಶ್ರವಣ ಮಾಡಿಸಿ ಮಾಯವಾದರು. ನಮ್ಮ ಕೆಲೂರಲ್ಲಿಯೇ ಅವರು ಮಾಡಿ ತೋರಿದ ಅಮಾನುಷ ಕೃತಿಗಳನ್ನು ನೆನೆದರೆ ಇಂದಿಗೂ ಮೈ ಝುಮ್ಮೆನ್ನುತ್ತದೆ. ಅವುಗಳನ್ನೆಲ್ಲಾ ಇಲ್ಲಿ ಬರೆಯುತ್ತಾ ಹೋದರೆ ಅಪ್ರಸ್ತುತವೆನಿಸುತ್ತದೆ. ಘನಮಠ ಶಿವಯೋಗಿಗಳಂಥ ಮಹಾತ್ಮರು ತಮ್ಮ ಭೌತಿಕ ಶರೀರದಿಂದ ಮರೆಯಾಗಿದ್ದರೂ ಅವರು ಸಮಾಜಕ್ಕೆ ಮಾಡಿ ತೋರಿದ ಅನಂತ ಅಕ್ಷಯ ಕೃತಿಗಳಿಂದ ಅಮರರಾಗಿದ್ದಾರೆ ಅಂತೆಯೇ ಆ ಮಹಾತ್ಮರ ಅಮರ ಕೃತಿಗಳೇ ಲೋಕದ ಮಹಾ ಮಹಾಪುರಷರನ್ನು ಇಂದಿಗೂ ನಮ್ಮ ಕೆಲೂರಡೆಗೆ ಕೈ ಮಾಡಿ ಕರೆಯುತ್ತಿವೆ ಮುಂದಿನ ಸಾಹಿತಿಗಳು ಶಿವಶರಣರ ಪುಣ್ಯಸ್ಥಾನಗಳನ್ನು ಪ್ರಶಂಶಿಸುತ್ತಿರುವಾಗ ಕಲ್ಯಾಣ ಕಲಬುರ್ಗಿ ಸೋಲಾಪೂರ ಸಜ್ಜಲಗುಡ್ಡ ಮೊದಲಾದ ಪುಣ್ಯಸ್ಥಾನಗಳ ಮಾಲಿಕೆಯಲ್ಲಿ ನಮ್ಮ ಸಂತೆಕೆಲೂರೊಂದನ್ನು ಪೋಣಿಸಬೇಕೆಂದು ಪ್ರಾರ್ಥಿಸುತ್ತೇನೆ.

ಸಂತೆಕೆಲೂರಲ್ಲಿ ಶಿವಯೋಗಿಗಳು ಶಿವಾಧೀನರಾಗುವ ಮುನ್ನ ಸಂತೆಕೆಲೂರಿನ ಸಕಲ ಮತದ ಸದ್ಭಕ್ತರಿಗೆ ಬೋಧಿಸಿದ ವಚನದಂತೆ ಅಂದಿನಿಂದ ಸಕಲ ಮತದವರು ಮತಮತಾಂತರ ದ್ವೇಷಾಸೂಯೆಗಳಿಲ್ಲದೆ ಒಂದೇ ಧರ್ಮದವರಂತೆ ಸಹೋದರ ಭಾವದಿಂದ ವರ್ತಿಸುತ್ತ ಬಂದಿದ್ದರು. ಕಾಲಾನುಸಾರ ರಾಜಕೀಯ ವಾತಾವರಣವು ಬದಲಾವಣೆಯ ಕಾಲ ಬ್ರಿಟಿಷರು ಭಾರತವನ್ನು ಬಿಟ್ಟು ತೊಲಗುವಾಗ ಭಾರತದಲ್ಲಿ ಎಲ್ಲ ಮತದ ದೇಶಿಯ ರಾಜರ (ಸಂಸ್ಥಾನಿಕರ) ಆಡಳಿತವು ಬದಲಾಗುವಂತೆ ನಮ್ಮ ಸಂತೆಕೆಲೂರು ನಿಜಾಮ ಆಡಳಿತಕ್ಕೆ ಒಳಪಟ್ಟ ಹೈದ್ರಾಬಾದ ರಾಜ್ಯದ ರಾಯಚೂರು ಜಿಲ್ಲಾ ಲಿಂಗಸುಗೂರ ತಾಲೂಕಿನದಿದ್ದ ಕಾರಣ ಆಗಿನ ಸಮಯ ನಮ್ಮ ಹೈದ್ರಾಬಾದ ಮುಸಲ್ಮಾನರ ಆದಿ ಪತ್ಯಕ್ಕೊಳಪಟ್ಟ ಕಾರಣ ಇಲ್ಲಿಯೂ ರಾಜ್ಯ ಕ್ರಾಂತಿ

ಯಾಗಿ ಭಾರತ ರಾಜ್ಯಕ್ಕೆ ಅಧೀನರಾಗಬಾರದು ಎಂಬ ದುರಾಭಿಮಾನದಿಂದ ರಾಜ್ಯದ ತುಂಬೆಲ್ಲ ಹಿಂದೂ, ಮುಸಲ್ಮಾನರಲ್ಲಿ ಅನೈಕ್ಯತೆಯಾಗಿ ಮತ ಮತಾಂತರ ದ್ವೇಷಾ ಅಸೂಯುಗಳಿಂದ ಹೈದ್ರಾಬಾದ ರಾಜ್ಯದ ಪ್ರತಿಯೊಂದು ಹಳ್ಳಿ ಪಟ್ಟಣಗಳಲ್ಲಿ ಬಹುದಿನಗಳಿಂದ ಅಣ್ಣ ತಮ್ಮಂದ್ಧಿರಂತೆ ಸುಖ ಸಂಸಾರಿಗಳಾದ ಹಿಂದು ಮುಸಲ್ಮಾನರಲ್ಲಿ ರಾಜ್ಯ ಕ್ರಾಂತಿಯೇ ಮತ ಮತಾಂತರಕ್ಕೆ ವ್ಯಾಪಿಸಿ ಪ್ರತಿಯೊಂದು ಊರುಗಳಲ್ಲಿ ಹಿಂದು ಮುಸಲ್ಮಾನರಲ್ಲಿ ಧರ್ಮ ದ್ವೇಷ ಉತ್ಪನ್ನವಾಗಿ ಅವರ ಮಸೀದೆ ಮಂದಿರಗಳ ಮುಂದೆ ಹಿಂದು ಧರ್ಮದವರು ತಮ್ಮ ಉತ್ಸವಗಳನ್ನು ಬಾಜಾ ಭಜಂತ್ರಿಗಳೊಡನೆ ಒಯ್ಯುಬಾರದೆಂದು ಅದೇ ರೀತಿಯಲ್ಲಿ ತಮ್ಮ ಹಿಂದು ದೇವಾಲಯುಗಳ ಮುಂದೆ ಮುಸಲ್ಮಾನರು ಮಂಗಲ ವಾದ್ಯಗಳನ್ನು ಬಾರಿಸಬಾರದೆಂದು ದೇವರ ಹೆಸರಿನಲ್ಲಿ ಭಾರತದ ಎಲ್ಲ ಸಣ್ಣ ದೊಡ್ಡ ಊರುಗಳಲ್ಲಿ ಹಿಂದು ಮುಸ್ಲಿಮರ ದಂಗೆಗಳಾಗಿ ಅನಂತ ಕೊಲೆಗಳಾಗಿ ರಾಜಕೀಯ ವಾತಾವರಣವೇ ಕಲುಷಿತವಾಗಿತ್ತು. ಆಗಿನ ಸಮಯ ಭಾರತ ಸ್ವಾತಂತ್ರ್ಯ ನಂತರ ಹೈದ್ರಾಬಾದ ಸಂಸ್ಥಾನವು ರಾಜಕೀಯುವನ್ನು ಕಳೆದುಕೊಂಡು (೧೯೪೮) ಸಪ್ಟಂಬರದಲ್ಲಿ ಭಾರತ ಸ್ವಾತಂತ್ರ್ಯ ರಾಜಕೀಯಕ್ಕೆ ತಲೆ ಬಾಗಿ ತನ್ನ ರಾಜ್ಯಾಧಿಕಾರವನ್ನು ಒಪ್ಪಿಸಿತು. ತತ್ಪೂರ್ವದ ಒಂದೆರಡು ವರ್ಷಗಳ ಹಿಂದೆ ಹೈದ್ರಾಬಾದ ಸಂಸ್ಥಾನ ಪ್ರತಿಯೊಂದು ಊರುಗಳಲ್ಲಿ ಬಹು ದಿನಗಳಿಂದಲೂ ಹಿಂದು ಮುಸಲ್ಮಾನರು ಭೇದ ಭಾವವಿಲ್ಲದೆ ಸಹೋದರರಂತೆ ಬಂದಿದ್ದರು. ಈ ರಾಜಕೀಯ ವಿಷಗಾಳಿಯು ನಮ್ಮ ಸಂಸ್ಥಾನದಲ್ಲೆಲ್ಲಾ ಹರಡಿ ಹೈದ್ರಾಬಾದದಲ್ಲಿ ರಜಾಕಾರರೆಂಬ ಸಂಘದಿಂದ ಸಂಸ್ಥಾನದಲ್ಲಿದ್ದ ಹಿಂದು ಧರ್ಮವನ್ನೇ ಬಲಿ ತೆಗೆದುಕೊಳ್ಳುವ ಸ್ಥಿತಿಯಲ್ಲಿತ್ತು. ಸಂಸ್ಥಾನದ ಪ್ರತಿಯೊಂದು ಊರುಗಳಲ್ಲಿ ಮುಹಮ್ಮದಿಯರು ರಜಾಕಾರರೆಂಬ ನೆಪದಿಂದ ಹಿಂದು ಧರ್ಮದ ಆಸ್ತಿಪಾಸ್ತಿಗಳನ್ನೆಲ್ಲಾ ಹಾಳು ಮಾಡುವದಲ್ಲದೆ ಭಾರತದ ನೀತಿ ಧರ್ಮಗಳನ್ನೆಸುಲಿಗೆ ಮಾಡುವದರಲ್ಲಿದ್ದರು. ಈ ವಿಷಗಾಳಿಯು ನಮ್ಮ ಸಂತೆಕೆಲೂರಿಗೂ ತಗಲದೇ ಇರಲಿಲ್ಲ.

ಮಸ್ಕಿ ಗ್ರಾಮದ ರಜಾಕಾರ ತಂಡವು ನಮ್ಮ ಕೆಲೂರಿಗೆ ಆಗಮಿಸಿ ಬಹು ದಿನಗಳಿಂದಲೂ ಹಿಂದು ಮುಸಲ್ಮಾನರೆಂಬ ಭೇದ ಭಾವವನ್ನರಿಯದ

ನಿಮ್ಮಲ್ಲಿಯ ಮಹಮ್ಮದಿಯರು ಹಿಂದೆ ಬಹು ದಿನಗಳ ಪೂರ್ವದಲ್ಲಿ ಘನಮಠ ಶಿವಯೋಗಿಗಳು ಕೆಲವೂರಿನಲ್ಲಿ ತಮ್ಮ ಅಂತ್ಯದ ಕಾಲಕ್ಕೆ ಸರ್ವರಿಗೂ ಆಶೀರ್ವದಿಸಿದ ವಚನ ಸಂತೆಕೆಲೂರಿನ ಸಕಲ ಮತಿಯರು ಭೇದ ಭಾವವನ್ನರಿಯುದೇ ಒಂದೇ ತಂದೆಯ ಮಕ್ಕಳಂತೆ ಇರುವ ನಿಮ್ಮನ್ನು ಮತ್ತು ನಿಮ್ಮ ಗ್ರಾಮವನ್ನು ನೋಡಿ ಮಹಾದಾನಂದವಾಗಿ ನಿಮ್ಮ ಭಕ್ತಿಗೆ ಮನ ಸೋತು ಇಲ್ಲಿಯೇ ನೆಲೆಸಿ ಅಂತ್ಯಕ್ಕೆ ನಮ್ಮ ತಪಸ್ಸಾಮರ್ಥವನ್ನೆಲ್ಲ ನಿರ್ಮಲ ಹೃದಯುಳ್ಳಾದ ಸಂತೆಕೆಲೂರ ಭಕ್ತರಿಗೆ ಧಾರೆಯರೆಯುತ್ತಿದ್ದೇವೆ ಎಂದು ಅಂದು ಘನಮಠ ಶಿವಯೋಗಿಗಳು ಆಡಿದ ಅಮೃತ ವಾಣಿಯನ್ನು ಮಹಮ್ಮದಿಯರು ಮರೆತು ಹಿಂದು ಧರ್ಮದ ಮೇಲೆ ವಿರೋಧದಿಂದ ಸಾರ್ವಜನಿಕ ರಸ್ತೆಯಲ್ಲಿರುವ ಜುಮ್ಮಾ ಮಸೀದೆಯ ಮುಂದೆ ಹಿಂದು ಧರ್ಮದ ಮದುವೆ ಮುಂಜಿ, ಘನಮಠ ಶಿವಯೋಗಿಗಳ ಮತ್ತು ಗ್ರಾಮ ದೇವತೆಯ ಉತ್ಸವಾದಿಗಳಲ್ಲಿ ಬರುವ ನಾನಾ ವಿಧ ವಾದ್ಯ ಬಾರಿಸಬಾರದೆಂದು ಜಗಳ ತೆಗೆದು ಬಡೆದಾಟಕ್ಕೆ ಆರಂಭ ಮಾಡಿ ಜುಮ್ಮಾ ಮಸೀದೆಯ ಮಗ್ಗುಲಲ್ಲಿರುವ ಸಾರ್ವಜನಿಕ ರಸ್ತೆಯ ಮೇಲೆ ಅರ್ಧ ರಸ್ತೆಯವರೆಗೂ ಆಕ್ರಮಣ ಮಾಡಿ ಹಿಂದು ಧರ್ಮದ ಯಾವ ಉತ್ಸವಾದಿಗಳು ಹೋಗಿ ಬರುವದಕ್ಕೆ ಅಡ್ಡಿಯಾಗುವಂತೆ ಕಂಪೌಂಡ ಗೋಡೆಯನ್ನು ಯಾರ ಭಯವಿಲ್ಲದೆ ಕಟ್ಟಿಸಲು ಆ ಸಮಯ ಭಾರತ ಸರಕಾರವು ಸ್ವಾತಂತ್ರ್ಯವಾಗಿ ಒಂದು ವರ್ಷವಾಗಿತ್ತು.

ನಮ್ಮ ಹೈದ್ರಾಬಾದ ಸಂಸ್ಥಾನವು ಭಾರತದೊಡನೆ ಸೇರಿಸಾಡಿ ತನ್ನ ಅಧಿಕಾರ ಕಳೆದುಕೊಂಡು ಹಲ್ಲು ಕಿತ್ತಿದ ಹಾವಿನಂತಾಗಿತ್ತು. ಆ ಸಮಯ (೧೯೫೦ ಇಸ್ವಿ) ಸಂತೆಕೆಲೂರಿನ ಹಿಂದು ಧರ್ಮದ ಸಕಲ ಮತ ಬಾಂಧವರು ಒಂದುಗೂಡಿ ಮಹಮ್ಮದಿಯರು ಬಹುದಿನಗಳಿಂದಲೂ ಸಹಕಾರ ಭಾವದಿಂದ ಮತ್ತು ಒಂದು ಶತಮಾನದಿಂದಲೂ ಶ್ರೀ ಘನಮಠ ಶಿವಯೋಗಿಗಳು ನಮ್ಮ ಗ್ರಾಮಕ್ಕೆ ಅವರು ಬಂದು ನೆಲಿಸಿದ ನಂತರ ಅವರ ಮೇಲೆ ಇದ್ದ ತಮ್ಮ ಭಕ್ತಿ ವಿಶ್ವಾಸಗಳನ್ನೆಲ್ಲ ಕಳೆದುಕೊಂಡು ಹಿಂದು ಧರ್ಮದ ಮೇಲೆ ಅವರು ಮಾಡಿದ ಈ ಅತ್ಯಾಚಾರಗಳನ್ನು ನೋಡಿ ಸರ್ವರು ರೊಚ್ಚಿಗೆದ್ದು ಈ ಸಾರ್ವಜನಿಕ ರಸ್ತೆಯಿಂದ ನಿಮ್ಮ ಪ್ರಾರ್ಥನಾ ಮಂದಿರ

(ಮಸೀದೆ) ಯನ್ನೇ ಕಿತ್ತಿಸೆಯಲು ನಿರ್ಧಾರ ಮಾಡಿದಾಗ ಆವಾಗ್ಗೆ ಮಹಮ್ಮದಿಯರೆಲ್ಲಾ ಗಾಬರಿಯಾಗಿ ತಾವು ಮಾಡಿದ ಅತ್ಯಾಚಾರಕ್ಕೆ ಪಶ್ಚಾತ್ತಾಪ ಪಟ್ಟು ಘನಮಠ ಶಿವಯೋಗಿಗಳ ಆಶೀರ್ವಚನವನ್ನು ಸ್ಮರಣೆಗೆ ತಂದು ಕೊಂಡು ಇನ್ನು ಮುಂದೆ ನಾವು ಇಂಥ ಅನಾಚಾರಗಳನ್ನು ಮಾಡುವದಿಲ್ಲ. ಸಾರ್ವಜನಿಕ ರಸ್ತೆಯ ಮೇಲೆ ಕಟ್ಟಿದ ಅಡ್ಡಗೋಡೆಯನ್ನು ಕಿತ್ತಿಕೊಳ್ಳುತ್ತೇವೆ ಮತ್ತು ಇಂದಿನಿಂದ ಮುಂದೆ ಎಂದೆಂದಿಗೂ ಈ ಸಾರ್ವಜನಿಕ ರಸ್ತೆಯ ಮೇಲೆ ಬರುವ ಹಿಂದು ಧರ್ಮದ ಯಾವ ಉತ್ಸವಾದಿಗಳಿಗೂ ನಾನಾ ವಿಧ ವಾದ್ಯ ವೈಭವಗಳಿಗೂ ಅಡೆತಡೆ ಉಂಟು ಮಾಡುವದಿಲ್ಲ.

ಹಿಂದಿನಂತೆ ಮುಂದೆಯು ಹಿಂದು ಧರ್ಮದೊಡನೆ ನಾವು ಮಹಮ್ಮದಿಯರೆಂಬ ಭೇದ ಭಾವ ತೋರದೇ ಸಹಕಾರ ಭಾವದಿಂದ ಹೋಗುತ್ತೇವೆ. ನಮ್ಮ ಮಸೀದೆಯನ್ನು ಇದ್ದ ಜಾಗದಲ್ಲೆ ನಮಗೆ ಕಟ್ಟಿಕೊಳ್ಳಲು ನೀವೆಲ್ಲಾ ಅನುಮತಿ ಕೊಡಬೇಕು. ನಿಮಗೆ ಕೊಟ್ಟ ವಚನ ಪ್ರಕಾರ ನಡೆಯುತ್ತೇವೆಂದು ಮುಹಮ್ಮದಿಯ ಧರ್ಮದವರೆಲ್ಲ ಕೂಡಿ ಭಾರತ ರಾಜ್ಯದ ಪಂಚಾಯತಿಗೆ ಅಗ್ರಿಮೆಂಟ (ಒಪ್ಪಿಗೆಯ ಪತ್ರ) ನ್ನು ಬರೆದುಕೊಟ್ಟಿದ್ದಾರೆ. (೧೯೫೦ ಇಸ್ವಿ) ಅಂದಿನಿಂದ ನಮ್ಮ ಸಂತೆಕೆಲೂರ ಗ್ರಾಮದಲ್ಲಿ ಹಿಂದಿನಂತೆ ಎಲ್ಲ ಧರ್ಮಗಳು ಘನಮಠ ಶಿವಯೋಗಿಗಳ ಕೃಪಾ ವಿಶೇಷದಿಂದ ಬಾಳುತ್ತಿವೆ.

ಶಿವಯೋಗಿಗಳ ಜೀವನ ಚರಿತ್ರೆಯನ್ನು ಬರೆಯುವ ಮುಂಚೆಯೇ ನಾನು ವಿಶ್ವಪ್ರಯತ್ನ ಪಟ್ಟರೂ ಲಭ್ಯವಾಗದ ಅವರ ಆಗಾಧ ಕೃತಿಗಳು ಅಲ್ಲಲ್ಲಿ ದೊರೆಯಲಿಕ್ಕೆ ಹತ್ತಿವೆ ಅವೆಲ್ಲವುಗಳನ್ನು ಸಂಕ್ಷಿಪ್ತವಾಗಿ ವಾಚಕರಿಗೆ ತಿಳಿಸುತ್ತೇನೆ ಹುನಗುಂದ ತಾಲೂಕ ಕೋಡಿಹಾಳ ಗ್ರಾಮದಲ್ಲಿ ಆ ಗ್ರಾಮದ ಕಂಟೆಪ್ಪಗೌಡನಿಗೆ ನೀನು ಜನರಿಂದ ಲಂಚತಿನ್ನುವದನ್ನು ಬಿಟ್ಟರೆ ನಿನ್ನ ಮನೆತನಕ್ಕೆ ಅನ್ನ ಸಮೃದ್ಧಿಯಾಗಿ ಸಕಲ ಸಂಪತ್ತು ಹೆಚ್ಚುತ್ತದೆ ಎಂದು ಆಶೀರ್ವದಿಸಲು ಕಂಟೆಪ್ಪಗೌಡನು ಹಾಗೇ ಆಗಲೆಂದು ಸಾಷ್ಟಾಂಗ ಹಾಕಲು ಶಿವಯೋಗಿಗಳು ಆಶೀರ್ವಾದ ಮಾಡಿ ಮುಂದಕ್ಕೆ ಬಂದ ವರ್ಷವೇ ಅರವತ್ತು ಹೇರು ಚಿಗರು ಜೋಳ ಆದವೆಂದು ಇಂದಿಗೂ ಪ್ರಸಿದ್ಧವಿದೆ.

ಅಂದಿನಿಂದಾ ಇಂದಿನ ವರೆಗೂ ಕಂಟೆಪ್ಪಗೌಡನ ಮನೆತನವು ಸುಖ
ರೂಪವಾಗಿ ಸಾಗಿದ್ದು ಶಿವಯೋಗಿಗಳ ಆಶೀರ್ವಾದದ ಪ್ರಭಾವವೆಂದೇ
ಹೇಳಬಹುದು ಮತ್ತು ಕಂದಗಲ್ಲ ಹುಲ್ಲಾಳ ಗ್ರಾಮಗಳಲ್ಲಿ ಘನಮಠೇ
ಶರು ಕೂತು ಬಂದ ಸ್ಥಾನದಲ್ಲಿ ಭಕ್ತರು ಗದ್ದುಗೆಯನ್ನು ಕಟ್ಟಿ ಭಕ್ತಿಯಿಂದ
ನಡಕೊಳ್ಳುತ್ತಿದ್ದಾರೆ ಇದಲ್ಲದೆ ಮುದ್ದೇಬಿಹಾಳ ತಾಲೂಕಿನಲ್ಲಿ ಅನಂತ ಕಡೆ
ಸಂಚರಿಸಿ ಚಿಕ್ಕಿನಹಾಳ ಹತ್ತರಿರುವ ಅಸ್ಕಿಗೌಡನ ಮನೆಯಲ್ಲಿ ಸತ್ತ ಮಗ
ನನ್ನು ಬದುಕಿಸಿ ಸಾವಿರ ಗಣಾರಾಧನೆಯನ್ನು ಆ ಗೌಡನಿಂದ ಮಾಡಿಸಿ
ಅಲ್ಲಿಂದ ತಾರನಾಳ ಬಳವಾಟ ಗುಡಿಹಾಳ ಈ ಮೂರು ಗ್ರಾಮಗಳ
ಮಧ್ಯದಲ್ಲಿರುವ ಕಂಟೀ ಬಸವೇಶ್ವರ ದೇವಾಲಯದಲ್ಲಿ
ಕೆಲವು ದಿವಸವಿದ್ದು ಮೈಯಲ್ಲಾ ನಾರ ಹುಣ್ಣುಗಳಾಗಿ
ಅನಂತ ವೇದನೆಯಾಗಿದ್ದರೂ ಅವುಗಳಿಗೇನೂ ಉಪಚಾರ ಮಾಡದೆ
ತಮ್ಮ ನಿತ್ಯ ಕರ್ಮಗಳನ್ನೊಂದೂ ಬಿಡದೇ ಅದೇ ಬಸವೇಶ್ವರ ದೇವಸ್ಥಾ
ನದಲ್ಲಿದ್ದು ಬಂದ ಭಕ್ತಾದಿಗಳಿಗೆಲ್ಲಾ ವಚನಶಾಸ್ತ್ರವನ್ನು ಬೋಧ
ಮಾಡುತ್ತಾ ತಾವು ತಮ್ಮ ತೃಪ್ತಿಗಾಗಿ ಮಾಡಿಕೊಂಡ ಬಸವ ಪಾಯಸ
ವನ್ನೇ ತಮ್ಮಲ್ಲಿಗೆ ಪ್ರತಿನಿತ್ಯ ಬೇಕಾದಷ್ಟು ಮಂದಿ ಬಂದರೂ ಎಲ್ಲರಿಗೂ
ಅಷ್ಟರಲ್ಲಿಯೇ ಪ್ರಸಾದವೆಂದು ಹಂಚುತ್ತಾ ಆನಂದದಿಂದಿರುತ್ತಿರಲು ತಾರ
ನಾಳ ಹಿರೇಮಠದ ಗುರುಸಂಗಯ್ಯನೆಂಬುವರು ಕಾರ್ತೀಕ ಶುದ್ಧ ಗೌರಿ
ಹುಣ್ಣಿವೆಯ ದಿವಸ ತಮ್ಮ ಮನೆಯಲ್ಲಿ ಹೋಳಿಗೆಯನ್ನು ಮಾಡಿದ್ದರಿಂದ
ಘನಮಠೇಶರಿಗೆ ಇಂದು ಹೋಳಿಗೆಯನ್ನು ಊಟ ಮಾಡಿಸಬೇಕೆಂಬ
ಬಯಕೆಯುಳ್ಳವರಾಗಿ ತಮ್ಮ ಗ್ರಾಮದ ಗೌಡನನ್ನೊಡಗೊಂಡು ಈರ್ವರೂ
ಮಡಿಯಿಂದಾ ಹೋಳಿಗೆಯನ್ನು ತೆಗೆದುಕೊಂಡು ಘನಮಠೇಶರಿರುವ
ದೇವಾಲಯಕ್ಕೆ ಬಂದು ಶಿವಯೋಗಿಗಳು ಪ್ರತಿ ದಿನ ತಮಗೆ ಮಾಡುವ
ಪ್ರೇಮದ ಸತ್ಕೃತಿಯಿಂದ ಮುತ್ತಾತ್ಯ ಇಂದು. ತಾವು ಹೋಳಿಗೆಯನ್ನು
ಊಟಮಾಡಲೇಬೇಕು ಇಲ್ಲವಾದರೆ ನಾವೂ ಉಣ್ಣುವದಿಲ್ಲಾ ಎಂದು
ಹಟತೊಡಲು ಶಿವಯೋಗಿಗಳು ಯಾಕಪ್ಪ ಇಂದು ನಮ್ಮ ಸಲುವಾಗಿ
ಹೋಳಿಗೆಯನ್ನು ಮಾಡಿಸಿದ್ದೀರಾ ಅಥವಾ ಬೇರಾವ ಕಾರಣಕ್ಕಾದರೂ

ಮಾಡಿರುವಿರಾ ಎಂದು ಕೇಳಲು ಗುರುಸಂಗಯ್ಯನವರು ಬುದ್ದೀ ಇಂದು
ಗೌರೀ ಹುಣ್ಣಿವೆಯಲ್ಲವೆ ? ಇಂದು ಮನೆಯಲ್ಲಿ ಹೆಣ್ಣು ಮಕ್ಕಳು ಉಪ
ವಾಸವಿರುತ್ತಾರೆ ಚಂದ್ರೋದಯವಾದ ನಂತರ ಚಂದ್ರನಿಗೆ ನೈವೇದ್ಯ
ಮಾಡಿ ಊಟ ಮಾಡುತ್ತಾರೆ. ಎಂದು ಹೇಳಿದ ಕೂಡಲೇ ಶಿವಯೋಗಿ
ಗಳು ಸಿಟ್ಟಿಗೆದ್ದು ಎಲೋ ಚಂದ್ರನು ಯಾರು ಲಿಂಗವಿಲ್ಲದ ಭವಿಯಲ್ಲವೇ
ಲಿಂಗಾಂಗಿಗಳಾದ ನೀವು ಭವಿಯ ಹೆಸರಿನ ಮೇಲೆ ಉಪವಾಸ ವ್ರತ
ವನ್ನಾಚರಿಸುವದೇ ? ಭವಿಯ ಹೆಸರಿನ ಮೇಲೆ ಮಾಡಿದ ನಿಮ್ಮ
ಹೋಳಿಗೆಗಳು ಅಪವಿತ್ರವಾಗಿವೆ ಇಂದಿನಿಂದ ಮುಂದೆ ಎಂದೆಂದಿಗೂ ಚಾಂದ್ರಾ
ಯಣಾದಿ ವ್ರತಗಳನ್ನು ಆಚರಿಸುವದಿಲ್ಲವೆಂದು ಆಣೆ ಮಾಡಿದರೆ ನಿಮ್ಮ
ಮನೆಗೆ ಬಂದ ಹೋಳಿಗೆಯನ್ನು ಊಟ ಮಾಡುತ್ತೇವೆ. ಎಂದು ಶಿವಯೋ
ಗಿಗಳು ಹೇಳಿದಂತೇಯೇ ಗುರುಸಂಗಯ್ಯನವರು ತಮ್ಮ ಮಠದಲ್ಲಿ ಹೋಳಿಗೆ
ಯನ್ನು ಮಾಡಿಸಿ ಶಿವಯೋಗಿಗಳನ್ನು ತೃಪ್ತಿಬಡಿಸಿ ಅಂದಿನಿಂದಾ ಇಂದಿನ
ವರೆಗೂ ಅವರ ಮನೆತನದಲ್ಲಿ ಚಾಂದ್ರಾಯಣಾದಿ ವ್ರತಗಳನ್ನು ಮಾಡು
ವದಿಲ್ಲವೆಂದು ಕಟ್ಟು ಮಾಡಿದ್ದಾರೆ. ಇನ್ನೂ ಇವಲ್ಲದೆ ಅಲ್ಲಲ್ಲಿ ಜನರು
ಮಹಾತ್ಮರ ಮಹಿಮೆಗಳನ್ನು ಹೇಳುತ್ತಲೇ ಇದ್ದಾರೆ. ಅವೆಲ್ಲವುಗಳನ್ನು
ಇಲ್ಲಿ ವಿಸ್ತಾರವಾಗಿ ಬರೆಯಲು ಸಮಂಜಸ ವೆನಿಸಲ ಾರದು.
ಈಗ ಸಮಾಜ ಬಂಧುಗಳ ಸಮ್ಮುಖದಲ್ಲಿ ಸಿದ್ಧವಾಗಿ ಬಂದ
ಶಿವಯೋಗಿಗಳ ಪುಣ್ಯ ಚರಿತ್ರೆಗಳನ್ನು ಸಮಾಜವು ಸರ್ವಾದರದಿಂದ
ಸಂಗ್ರಹಿಸಿ ಪ್ರೋತ್ಸಾಹಿಸಿ ಪುನರ್ಮುದ್ರಣದ ಸುಯೋಗವನ್ನು ಆ ಘನ
ಮಹೇಶನು ತಂದು ಕೊಟ್ಟಿದಕ್ಕಾಗಿ ತ್ರಿಕರಣ ಪೂರ್ವಕವಾಗಿ ಆ ಮಹಾಮಹಿ
ಮನ ಸತ್ಕಾರ್ಯಂಶಗಳನ್ನು ಸಂಗ್ರಹಿಸಿ ಈ ಆವೃತ್ತಿಯಲ್ಲಿ ಸಮಾ
ವೇಶಗೊಳಿಸಿ ಸದ್ಭಾವನೆಯಿಂದ ಆ ಘನಮಹೇಶನ ಧ್ಯಾನದಲ್ಲಿಯೇ
ಈ ಪ್ರಕರಣವನ್ನು ಮುಗಿಸುತ್ತೇನೆ.

**ಇತಿ ಶುಭಂ**



## ಶ್ರೀ ಶಿದ್ರಾಮಪ್ಪ ಹೆಸರೂರ,
## ಸಂತೆಕೆಲ್ಲೂರ.

ಅಧ್ಯಕ್ಷರು,
ಘನಮಠೇಶ ತರುಣ ಸಂಘ, ಸಂತೆಕೆಲೂರ.

ಶ್ರೀ ಶಿದ್ರಾಮಪ್ಪ ಹೆಸರೂರ ಇವರ ಮನೆತನವು ಆದಿಯಿಂದಲೂ ಘನಮಠೇಶ ಶಿವಯೋಗಿಗಳ ಸೇವೆಯನ್ನು ಮಾಡುತ್ತ ಬಂದಿದ್ದು ಈಗಲೂ ಸಹ ತರುಣರಾದ ಶಿದ್ರಾಮಪ್ಪನವರು ಮುಂದುವರಿಸಿಕೊಂಡು ಬಂದಿದ್ದಾರೆ.

-- **ಲೇಖಕರು**

